**ನಮ್ಮ ನುಡಿ** ಉಡುಪಿ, ೭—೧೦—೩೫

ಸಂಪಾದಕರು ಯುವ, ವಿಜಯ ದಶಮಿ

'ಅನುಭವವು ಸವಿಯಲ್ಲ—
ಅದರ ನೆನಪೇ ಸವಿಯು' —ನಲ್ಮೆ

ಗಿರಿದರಿಯಿಂದ ಹುಟ್ಟಿ ಹರಿಯುವ ಹೊನಲು ಹೊರಡುವ ವೇಳೆ ಯಾವ ಸ್ಫೂರ್ತಿಯಿಂದ ಹೊರಡುವುದೋ ಆ ಸ್ಫೂರ್ತಿಯು ಮಳಲ ದಿನ್ನೆಯನ್ನು ದಾಟಿ ಸಾಗರವನ್ನು ಸೇರುವಾಗ ಉಳಿಯುವುದಿಲ್ಲ. ಆದರೂ, ಕಡಲಿನ ಒಡಲಲ್ಲಿ ಬೆರೆಯುವಾಗ ಅದರ ಜೀವನವು ಹೆಚ್ಚು ವಿಶಾಲವಾಗಿ, ಹೆಚ್ಚು ಪರಿಪಕ್ವವಾಗಿ ಇರುವುದು. ಕೊಳಲ ಕಣ್ಣಿನಿಂದ ಹೊರಟ ಗಂಭೀರ ನಾದವು ದಿಗಂತವನ್ನು ಸೇರಿ ಗಾಳಿಯಲ್ಲಿ ಲೀನವಾಗುವಾಗ ಆದರ ಅರ್ಧವ್ಯಕ್ತ ಮಾಧುರಿಯು ಹೃದಯಹಾರಿಯಾಗಿದೆ. ನಾವೂ ಹಾಗೆಯೇ.

ನಮ್ಮ 'ಕಾವ್ಯಸಾಮ್ರಾಜ್ಯ'ವನ್ನು ಕನ್ನಡಿಗರ ಕರತಲದಲ್ಲಿ ಅರ್ಪಿಸಿದಾಗ ಅದಕ್ಕೆ ಕನ್ನಡಿಗರು ಕೊಟ್ಟ ಸ್ವಾಗತವು 'ಮಧುವನ'ದ ಬೀಜಾರೋಪಣ ಮಾಡಿತು. ಆಸೆ ನೀರಿನ ಸೇಚನದಿಂದ ಅದು ಮೊಳೆಯಿತು. ಇಂದು ಅದರಿಂದ ಬೆಳೆದ ಈ ಮರದ ಫಲವನ್ನು ಕನ್ನಡಿಗರ ಕೈಯಲ್ಲಿಡುವಾಗ ನಮ್ಮ ಹೃದಯವು ಉಕ್ಕಿ ಬರುತ್ತಿದೆ. ಸಂಗಡಲೇ ಇದರ ಸಂಗ್ರಹಕಾರ್ಯದಲ್ಲಿ ಪಡೆದ ಅನುಭವದ ಸಿಂಹಾವಲೋಕನವನ್ನು ಮಾಡಿದರೆ ಕಣ್ಣು ಉಕ್ಕಿ ಬರುತ್ತದೆ. ಆದರೂ ಅದು ಕಹಿಯಾದ ಅನುಭವದ ಸವಿಯಾದ ಹಣ್ಣು; ಸ್ಫೂರ್ತಿಯಿಂದ ಹೊರಟ ಹೊನಲ ಶಾಂತ ಪ್ರವಾಹ.

'ಮಧುವನ'ವನ್ನು ಸಂಗ್ರಹಿಸುವ ಕೆಲಸದಲ್ಲಿ ನಾವು ನಿಜವಾಗಿಯೂ ಕಹಿಯಾದ ಅನುಭವವನ್ನು ಪಡೆದೆವು. ಹಿರಿಯರ ಸಹಯೋಗದ ಆಸೆಯಿಂದ, ಭರವಸೆಯಿಂದ ನಾವು ಕಾರ್ಯರಂಗಕ್ಕೆ ಧುಮುಕಿದೆವು. ಆದರೆ ನಾವು ಬಯಸಿದಷ್ಟು ಸಹಯೋಗವು ನಮಗೆ ಅಲ್ಲಿ ದೊರೆಯಲಿಲ್ಲ. ಕಿರಿಯರ ಸಹಯೋಗವು ಮಾತ್ರ ಸಾಕಷ್ಟು ಲಭಿಸಿದುದರಿಂದ ಇಂದು ಈ ಹಣ್ಣೋ—ಕಸುಗಾಯೊ ಅರಿಯದು,—'ಮಧುವನ'ವನ್ನು ನಿಮಗರ್ಪಿಸುತ್ತಿದ್ದೇವೆ. ಮೊತ್ತ ಮೊದಲು ವಿಸ್ತಾರವಾದೊಂದು ಮುನ್ನುಡಿಯನ್ನು ಬರೆಯಬೇಕೆಂದಿದ್ದೆವು. ಆದರೆ 'ಕಾಮನ ಬಿಲ್ಲಿ'ನ ವ್ಯಾಪಕವಾದ ವಿವೇಚನೆಯ ಮುನ್ನುಡಿಯನ್ನು

ನೋಡಿ ಅದಕ್ಕಿಂತ ಉತ್ತಮವಾದ-ನವೀನವಾದ ಮುನ್ನುಡಿಯೊಂದನ್ನು ಬರೆಯುವ ಧೈರ್ಯಸಾಲದೆ ಅದನ್ನು ಒತ್ತಟ್ಟಿಗಿರಿಸಿದೆವು. ಹೀಗಾಗಿ ನಮ್ಮನ್ನು ಸಂಪಾದಕರೆಂದು ಕರೆದುಕೊಳ್ಳಲು ನಮಗೆ ನಾಚಿಕೆಯಾಗುತ್ತದೆ.

ಅಹುದು, ಆದರೂ ನಾವು ನಮ್ಮನ್ನು ಸಂಪಾದಕರೆಂದು ಕರೆದುಕೊಳ್ಳುತ್ತಿದ್ದೇವೆ. ಈ ಎಡೆಯಲ್ಲಿ ನಮಗೆ ಉಪಯುಕ್ತ ಸಲಹೆಗಳನ್ನು ಕೊಟ್ಟ ನಮ್ಮ ಸನ್ಮಿತ್ರರಾದ ಹನುಮಂತರಾವ್ ಮಾಂಜರೇಕರ್, ಅ. ನ. ಕೃಷ್ಣ ರಾವ್ ಇವರನ್ನೂ ಇದಕ್ಕೆ ಬೇಕಾದ ಚಿತ್ರವನ್ನು ಬರೆದುಕೊಟ್ಟ ಶ್ರೀ. ದೇವೇಂದ್ರ ಶೇಣ್ವಿ ಇವರನ್ನೂ ನಾವು ಹೃದಯತಃ ಅಭಿವಂದಿಸುತ್ತೇವೆ.

ಇದರಲ್ಲಿ ಪ್ರಕಟವಾದ ಕಥೆಗಳಲ್ಲಿ ಕೆಲವು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಸಿದ್ಧವಾದವು. 'ಅಪರಾಧಿ ಯಾರು?', 'ಮಡದಿಯ ಮುನಿಸು','ಹಾಗಾದರೆ,' 'ಕೀರ್ತನ ಕಂಠೀರವ', 'ಆ ಮಗು'—ಇಷ್ಟು ಕಥೆಗಳು ಕ್ರಮಶಃ ಕೊಡಗು ರಾಷ್ಟ್ರಬಂಧುವಿನ ಸಾಹಿತ್ಯ ಸಂಚಿಕೆ, ರಾಷ್ಟ್ರಬಂಧುವಿನ ಯುಗಾದಿಯ ಕಾಣಿಕೆ, ನವಯುಗ, ಉದಯ ಭಾರತ ಪತ್ರಿಕೆಗಳಲ್ಲಿಯೂ 'ಹಾವು' ಬಾಲಸಾಹಿತ್ಯ ಮಂಡಲದವರು ಪ್ರಕಟಿಸಿದ 'ಹಾವು' ಎಂಬ ಗ್ರಂಥದಲ್ಲಿಯೂ ಪ್ರಕಟವಾಗಿದ್ದುವು. ಅಲ್ಲಿಂದ ಅವನ್ನು ಉದ್ಧರಿಸಲು ಅನುಮತಿ ಇತ್ತ ಆವಾ ಸಂಪಾದಕರಿಗೂ ಪ್ರಕಾಶಕರಿಗೂ ನಾವು ಚಿರ ಋಣಿಗಳು. ತಮ್ಮ ಕತೆಗಳನ್ನು ಪ್ರಕಟಿಸಲು ಒಪ್ಪಿಗೆಯಿತ್ತ ಕತೆಗಾರರೆಲ್ಲರ ಉಪಕಾರವನ್ನು ಹೇಳಲಾಸಲ್ಲ.

ಈ ಪುಸ್ತಕವನ್ನು ಸೊಗಸಾಗಿ ಮುದ್ರಿಸಿ ಕೊಟ್ಟ ತುಳುನಾಡ್ ಛಾಪಖಾನೆಯ ಒಡೆಯರಾದ ಶ್ರೀ. ಯಸ್. ಯು. ಪಣಿಯಾಡಿಯವರಿಗೂ ಇದರ ಮುದ್ರಣ ಕಾರ್ಯದಲ್ಲಿ ಹೆಚ್ಚು ಗಮನವನ್ನು ನಿಯೋಜಿಸಿದ ಅಲ್ಲಿಯ ಕೆಲಸಗಾರರಿಗೂ ವಂದನೆಗಳನ್ನು ಅರ್ಪಿಸುತ್ತಾ ನಮ್ಮ ಈ ಸಂಪಾದನ ಕಾರ್ಯದಲ್ಲಿ ನಮಗೆ ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ನೆರವಾದ ಎಲ್ಲರನ್ನೂ ನಾವು ಕೊಂಡಾಡುತ್ತೇವೆ.

ಕೊನೆಯದಾಗಿ ಒಂದು ವರ್ಷದಿಂದ 'ಮಧುವನ'ದ ಪ್ರಕಟಣೆಯಾಗುವುದೆಂದು ಪ್ರಸಿದ್ಧ ಪಡಿಸಿದ ನಾವು ಇಷ್ಟು ವಿಳಂಬವಾಗಿ ಅದನ್ನು ಹೊರಡಿಸಿದ ತಪ್ಪಿಗಾಗಿ ಕತೆಗಾರರ ಮತ್ತು ನಮ್ಮ ಸಹಾಯಕವರ್ಗದ ಕ್ಷಮೆಯನ್ನು ಬೇಡುತ್ತೇವೆ.

# ಸೂಚಿ



## ಪಂಡಿತ ತಾರಾನಾಥರಾಯರು, ತುಂಗಭದ್ರ

ಇವರು ತುಂಗಭದ್ರೆಯ 'ಪ್ರೇಮಾಯತನ'ದ ಸ್ಥಾಪಕರು ಮತ್ತು ಸಂಚಾಲಕರು. ದಕ್ಷಿಣ ಕನ್ನಡಿಗರು. ಅಮೋಘ ವಕ್ತೃಗಳು, ವಿಮರ್ಶಕರು, ಕತೆಗಾರರು ಹಾಗೂ ಕಲಾವಿದರು. ಎಲ್ಲದರಲ್ಲಿಯೂ ಹೊಸ ಹಾದಿ—ಕ್ರಾಂತಿ. 'ಪ್ರೇಮ' ಪತ್ರಿಕೆಯ ಸಂಪಾದಕರು. ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಇವರ ಕೈನುರಿತಿದೆ. ಈ ವರೆಗೆ 'ಮೋಹನಾಸ್ತ್ರ', 'ನ್ಯಾಯ' ಎಂಬ ನಾಟಕಗಳನ್ನೂ 'ಧರ್ಮ ಸಂಭವ' ಎಂಬ ತಾತ್ವಿಕ ವಿಮರ್ಶಾ ಗ್ರಂಥವನ್ನೂ ಬರೆದಿದ್ದಾರೆ. ಇವರ ಅನೇಕ ಚಿಕ್ಕ ಕತೆಗಳು, ಮತ್ತು ರಾಜಕೀಯ, ಸಾಮಾಜಿಕ ಲೇಖಗಳು ಅಲ್ಲಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರ ಪ್ರತಿಯೊಂದು ಬರೆಹವೂ ಗಾಢ ವಿಚಾರದಿಂದ ತುಂಬಿದೆ; ಹೃದಯಕ್ಕೆ ನಾಟಿ ಉದ್ದಿಷ್ಟ ಪರಿಣಾಮವನ್ನು ಉಂಟುಮಾಡುತ್ತದೆ. ಉರ್ದು, ಹಿಂದೀ ಭಾಷೆಗಳಲ್ಲಿಯೂ ಇವರು ಪಂಡಿತರು. ಅನೇಕ ನಾಟಕ, ಲೇಖನಗಳನ್ನು ಆ ಭಾಷೆಗಳಲ್ಲಿಯೂ ಬರೆದಿದ್ದಾರೆ.

ಕಥಾ ಲೇಖನದ ಕಲೆಯು ಇವರಿಗೆ ಚೆನ್ನಾಗಿ ತಿಳಿದಿದೆ. ಮನ ಮುಟ್ಟುವ ಅರ್ಧ ವಿಷಾದಾಂತ ಸಾಮಾಜಿಕ ಕತೆಗಳನ್ನೆ ಹೆಚ್ಚಾಗಿ ಬರೆಯುತ್ತಾರೆ. ಎಲ್ಲ ಕತೆಗಳಲ್ಲಿಯೂ ಸಮಾಜದ ಕಡೆಗೆ ತೀಕ್ಷ್ಣವಾದ ಟೀಕೆ ಎದ್ದು ಕಾಣುತ್ತದೆ. ಜೀವನದ ಸುಖದುಃಖಗಳ ಸೂಕ್ಷ್ಮ ಚಿತ್ರಣವು ಅಷ್ಟೊಂದು ಪ್ರಾಮುಖ್ಯಯನ್ನು ಪಡೆಯದಿದ್ದರೂ ಸಮಾಜದಿಂದ ವೈಯಕ್ತಿಕ ಜೀವನಕ್ಕೆ ಬರುವ ತೊಂದರೆಗಳನ್ನೂ ಅನ್ಯಾಯ ಅನಾಚಾರಗಳನ್ನೂ ಕಣ್ಣಮುಂದೆ ನಿಲಿಸುವ ಶಕ್ತಿಯು ಇವರ ಕತೆಗಳಿಗಿದೆ.

# ದೇವರ ಮಗು

ಪಂ। ತಾರಾನಾಥರು

ರಾಮಣ್ಣನಿಗೆ ಇಬ್ಬರು ಹೆಣ್ಣುಮಕ್ಕಳು ಮಾತ್ರ. ತಾನು ಹಳ್ಳಿಯೂರ ಬ್ರಾಹ್ಮಣನಾಗಿದ್ದರೂ ತನ್ನ ಹುಡುಗಿಯರನ್ನು ಚೆನ್ನಾಗಿ ಶಿಕ್ಷಣವನ್ನು ಪಡೆದ ಯುವಕರಿಗೇ ಕೊಟ್ಟಿದ್ದನು. ಅವರ ಶಿಕ್ಷಣ ಎಂದರೆ ಕೇವಲ ಆಧುನಿಕ ಪದ್ಧತಿಗೆ ಸೇರಿದ್ದು; ಅಲ್ಲದೆ ಹಳೆಯ ಸಂಪ್ರದಾಯದ್ದಲ್ಲ. ರಾಮಣ್ಣ ತಾನು ಗಬ್ಬೂರ ರಾಮಾಚಾರಿ ಆಗಿರೋಣದರಿಂದ ಆತನಿಗೆ ಹೊಸ ಶಾಲೆಯ ಶಿಕ್ಷಣ ವೆಲ್ಲ ಅಧಾರ್ಮಿಕವೇ ಎಂದು ಅಭಿಪ್ರಾಯ. ಆ ವಿಚಾರವನ್ನು ಆತನು ತನ್ನ ಪುರಾಣಪ್ರವಚನಗಳಲ್ಲಿ ಹೇಳಿಯೂ ತೋರಿಸುತ್ತಿದ್ದನು. ಹಳ್ಳಿಯೂರ ಮಕ್ಕಳು ಅಯ್ಯನವರ ಶಾಲೆ ಮುಗಿಸಿ ಪಟ್ಟಣಕ್ಕೆ ಹೋಗಬೇಕು ಎಂದು ಮಾಡಿಕೊಂಡರೆ ಆವರ ಅಪ್ಪ ಅಮ್ಮನಿಗೆ ಈತ ಬೇಕಾದಷ್ಟು ಬುದ್ಧಿ ಹೇಳು ತ್ತಿದ್ದನು. "ಯಾಕಯ್ಯಾ ಆ ಹಾಳು ಪಟ್ಟಣಗಳ ವಾಸ ನಮ್ಮ ಮಕ್ಕಳಿಗೆ? ಓದು ಕಲಿಯಲಿಕ್ಕೆ ಅಂತ ಹೋಗಿ ಇಲ್ಲದ ಚಟಗಳನ್ನು ಕಲಿತು ಹಾಳಾಗ ಲಿಕ್ಕೋ? ತಮ್ಮ ಹೊಲಗದ್ದೆ ನೋಡಿಕೊಂಡಿರಬಾರದೇ ಇಲ್ಲಿಯೇ? ಕಲಿಯು ಬೇಕೆಂದಿದ್ದರೆ ಕಲಿಯಲಿ ಸಂಸ್ಕೃತ. ನಾನು ಕಲಿಸುತ್ತೇನೆ ಬೇಕಾದರೆ....... ಆ ಹಾ ಹಾ ಹಾ ಸಂಸ್ಕೃತ! ಏನು ದಿವ್ಯ ಭಾಷೆ! ದೇವಭಾಷೆಯೋ ಅಲ್ಲವೆ ಅದು? ಅದರಲ್ಲಿಲ್ಲದ ವಿದ್ಯೆನೇ ಇದ್ದೀತೇ ಎಲ್ಲಿಯಾದರೂ?" ಎಂದುಬಿಟ್ಟು ಆದಷ್ಟು ಮಟ್ಟಿಗೆ ಕಲ್ಲು ಹಾಕಿಬಿಡುತ್ತಿದ್ದನು. ಮತ್ತು ಆತನಿಗೆ ಸಂಸ್ಕೃತ ಪಾಂಡಿತ್ಯ ಅಂದರೆ ವಿವಾಹಮಂತ್ರಗಳಿಂದ ಹಿಡಿದು ಗರುಡ ಪುರಾಣದ ವರೆಗೇ! ನಮ್ಮ ರಾಮಣ್ಣ ಅಂದರೆ ಇಂಥ ಮನುಷ್ಯ.

ಆದರೆ ಈತನ ಅಳಿಯಂದಿರು ಇಬ್ಬರೂ ಯೂನಿವರ್ಸಿಟಿಯ ಗಾಳಿ ತಿಂದವರು. ಅವರನ್ನು ಚೆನ್ನಾಗಿ ಹುಡುಕಿಕೊಂಡೇ ತನ್ನ ಇಬ್ಬರು ಮಗ ಳಂದಿರನ್ನು ಈತ ಕೊಟ್ಟಿದ್ದಾನೆ. ಆ ಮದುವೆಯ ಪೂರ್ವರಂಗ ಬಹು ಸ್ವಾರಸ್ಯವಾಗಿದೆ. ಅದೇನೆಂದರೆ ಇಬ್ಬರೂ ಶೋಲಾಪುರದ ಹುಡುಗರು; ಅಣ್ಣ ತಮ್ಮಂದಿರು. ಇಬ್ಬರೂ ಬಿ.ಎ., ಎಲ್.ಎಲ್.ಬಿ. ಮಾಡಿಕೊಂಡು ಸದ್ಯಕ್ಕೇ ವಕಾಲತು ಮಾಡುವಷ್ಟರಲ್ಲಿಯೇ ಇದ್ದಾರೆ. ಇಬ್ಬರು ಅಕ್ಕತಂಗಿಯರು

ಇಬ್ಬರು ಅಣ್ಣತಮ್ಮಂದಿರ ಹೆಂಡಂದಿರಾಗಿಬಿಟ್ಟರೆ ಎಲ್ಲರೂ ಕೂಡಿ ಒಂದೇ ಮನೆ, ಒಂದೇ ಸಂಸಾರ ಆಗಿಬಿಟ್ಟು ಅನುಕೂಲವಾಗುವುದು ಎಂಬ ನಂಬಿಕೆಯಿಂದ ಈತನು ಹುಡುಗಿಯರನ್ನು ಕೊಟ್ಟನು. ಆ ಇಬ್ಬರ ತಾಯಿಯೂ ತಕ್ಕೊಂಡಳು. ರಾಮಣ್ಣನಿಗೆ ಹೆಂಡತಿ ಸತ್ತು ಹತ್ತು ವರ್ಷಗಳಾಗಿದ್ದವು. ತುಂಗಮ್ಮ ಹುಟ್ಟಿದ ನಾಲ್ಕೈದು ವರ್ಷಗಳಲ್ಲಿಯೇ ಅವಳು ಇಹವನ್ನು ಬಿಟ್ಟಿದ್ದಳು. ತುಂಗಮ್ಮನ ಅಕ್ಕ ಗೋದು—ಎರಡು ವರ್ಷಕ್ಕೆ ಹಿರಿಯಳು. ರಾಮಣ್ಣನಿಗೆ ಮೂರನೇ ಮದುವೆಯಾಗಲಿಲ್ಲ. ಮೊದಲನೆಯಾಕೆ ಹದಿಮೂರನೇ ವರ್ಷಕ್ಕೇ ಬಸುರಿಯಾಗಿ ಹೆರಲಾರದೆ ಸತ್ತಳು. ಸತ್ತ ಇಬ್ಬರು ಹೆಂಡಂದಿರೇ ಆ ಇಬ್ಬರು ಮಕ್ಕಳು ಎಂದು ರಾಮಣ್ಣನ ಭಾವನೆ. ಭಾವನೆಗೆ ತಕ್ಕಂತೆ ಅವರನ್ನು ಮುದ್ದಾಗಿ ಸಾಕಿ ಸಲಹಿದನೂ ಕೂಡ. ಈಗ ಗೋದುಗೆ ಹನ್ನೆರಡು ವರ್ಷ. ತುಂಗಮ್ಮನಿಗೆ ಹತ್ತು. ಇಬ್ಬರಿಗೂ ಯೋಗ್ಯ ಗಂಡಂದಿರು ಬೇಕು ಎಂದು ರಾಮಣ್ಣ ಹುಡುಕುತ್ತಲೇ ಇದ್ದಾನೆ. ಯೋಗ್ಯರು ಅಂದರೆ ತೋಟ ಗದ್ದೆಯಿದ್ದ ಹಳ್ಳಿಯೂರ ಇನಾಮುದಾರರು ಸಹ ಅಲ್ಲ—ನಮ್ಮ ರಾಮಣ್ಣನಿಗೀಗ. ಯೋಗ್ಯರು ಅಂದರೆ ದೊಡ್ಡ ದೊಡ್ಡ ಪರೀಕ್ಷೆಗಳನ್ನು ಪಾಸ್‌ಮಾಡಿ ಸರಕಾರಿ ಕೆಲಸವನ್ನೋ ವಕಾಲತನ್ನೋ ಮಾಡುತ್ತ ಪಟ್ಟಣದಲ್ಲಿ ಮನೆ ಮಾಡಿಕೊಂಡಿದ್ದವರು ಎಂದು ರಾಮಣ್ಣನ ಮತ.

ರಾಮಣ್ಣನಿಗೆ ಒಬ್ಬ ಅಕ್ಕ ಇದ್ದಳು—ಬಹಳ ಮುದಿಯಾಕೆ. ಆಕೆಗೇನು ಅಂದರೆ ತಮ್ಮ ಹಳ್ಳಿಯಲ್ಲಿಯೋ ನೆರೆಹೊರೆಯ ಹಳ್ಳಿಯಲ್ಲಿಯೋ ಆ ಹುಡುಗಿಯರನ್ನು ಕೊಟ್ಟರೆ ತಾನು ಸಾಕಿದ ಮಕ್ಕಳು ತನ್ನ ಹತ್ತಿರಲೇ ಇರುತ್ತವಲ್ಲಾ-ಎಂದೊಂದು ಆಶೆ. ಆದಕ್ಕಾಗಿ ಒಂದು ದಿನ ರಾಮಣ್ಣನನ್ನು ಕುರಿತು—"ಅಲ್ಲೋ ರಾಮ್ಯಾ, ಪಟ್ಟಣಕ್ಕೆ ಹೋದರೆ ಹುಡುಗರು ಕೆಡುತ್ತಾರೆ ಎಂದು ಹತ್ತು ಮಂದಿಗೆ ಹೇಳುವವನು ನೀನು, ಗೋದು ತುಂಗೆಯರಿಗಾಗಿ ಮತ್ಯಾಕೋ ಆ ಹಾಳು ಪಟ್ಟಣಗಳಲ್ಲಿಯೇ ಹುಡುಗರನ್ನು ಹುಡುಕುತ್ತೀ?" ಎಂದು ಕೇಳಿಯೇ ಬಿಟ್ಟಳು. "ಅಲ್ಲಲ್ಲಿಯ ಹುಡುಗರು ಅಲ್ಲಲ್ಲಿಯೇ ಇರಬೇಕು. ಹಳ್ಳೀ ಹುಡುಗರು ಹಳ್ಳಿಯಲ್ಲಿ, ಪಟ್ಟಣದವರು ಪಟ್ಟಣದಲ್ಲಿ. ಹುಡುಗರಲ್ಲವೆ ಧರ್ಮಕ್ಕೆ ಆಧಾರ? ಅದು ಕದಲಿದರೆ ಗತಿ? ಅವರನ್ನು ಹುಟ್ಟಿದೂರಿನಲ್ಲಿಯೇ ಇಟ್ಟುಬಿಟ್ಟರೆ ಅವರೂ ಕೆಡುವದಿಲ್ಲ; ಧರ್ಮನೂ ಕೆಡುವದಿಲ್ಲ". ಎಂದ ರಾಮಣ್ಣ.

“ಮತ್ತಾ, ಹುಡುಗಿಯರಾದರೂ ಹುಟ್ಟಿದ ಕಡೆನೇ ಯಾಕಿರಬಾರದು?” ಎಂದು ಆ ಮುದಿಯಕ್ಕ ಕೇಳಿದರೆ ತಮ್ಮನೂ ದಿವ್ಯವಾದ ಉತ್ತರವನ್ನೇ ಕೊಟ್ಟು ಬಿಟ್ಟನು! “ನಾನು ಹೇಳಿದಂತೆ ಮಾಡಿದರೆ ಹಳ್ಳಿ ಹುಡುಗಿಯರ ಕಷ್ಟ ಬಗೆ ಹರಿಯುತ್ತದೆ. ಪಟ್ಟಣದ ಹುಡುಗಿಯರ ಸೊಕ್ಕು ಮುರಿಯುತ್ತದೆ. ಇಲ್ಲಿಯ ಹುಡುಗಿಯರಿಗೆ ಅಲ್ಲಿ ವಿಶ್ರಾಂತಿ, ಅಲ್ಲಿಯವರಿಗಿಲ್ಲಿ ಕೆಲಸ. ಇಬ್ಬರಿಗೂ ಹಿತ ಇದರಿಂದ. ಹೀಗೆಲ್ಲಾ ಆಲೋಚನೆ ಮಾಡಿನೇ ನಮ್ಮ ಪೂರ್ವಜರು ಒಂದು ರೂಢಿ, ಒಂದು ಸಂಪ್ರದಾಯ ಎಂದು ಮಾಡಿಟ್ಟಿದ್ದಾರೆ ನೋಡಕ್ಕ” ಎಂದೊಡನೆ ಆಕೆ ಬಾಯಿಮುಚ್ಚಿ ಸುಮ್ಮನಾದಳು.

* * * * * *

ಗೋದುಗೆ ಎಂಟು ವರ್ಷವಾದಂದಿನಿಂದ ವರಶೋಧದಲ್ಲಿಯೇ ಇದ್ದಾನೆ— ರಾಮಣ್ಣ. ಆದರೆ ಅಂಥವರು ಸಿಕ್ಕಬೇಕಷ್ಟೆ! ಅಷ್ಟರೊಳಗೆ ಆ ಅಕ್ಕನೂ ಸತ್ತುಹೋದಳು. ಇರಲಿ. ನಾಲ್ಕು ವರ್ಷ ಹುಡುಕಿದ ಮೇಲೆ ತುಂಗಾ ಗೋದು ವಿಷಯದಲ್ಲಿ ರಾಮಣ್ಣನ ಪ್ರಯತ್ನವೇನೋ ಸಫಲವೇ ಆಯಿತು. ಶೋಲಾಪುರದಲ್ಲಿ ಗೋವಿಂದ ಮತ್ತು ಬಲವಂತ—ಇಬ್ಬರು ಅಣ್ಣತಮ್ಮಂದಿರೆ ಸಿಕ್ಕಿಬಿಟ್ಟರು ಅವನಿಗೆ. ಈಗೇನು ಕಮ್ಮಿ! ಹುಡುಗಿಯರಿದ್ದ ಕಡೆ ತಾನೂ ಇದ್ದುಕೊಂಡು ಬಿಟ್ಟರಾಯಿತು. ಎಲ್ಲ ಕೂಡಿ ಒಂದೇ ಸಂಸಾರವಾಯಿತು. ಆ ಹುಡುಗರ ತಂದೆಯು, ಅವರು ಪುಣೆಯಲ್ಲಿ ಬಿ. ಎ. ಕಲಿಯುತ್ತಿದ್ದಾಗಲೇ ತೀವ್ರ ಕ್ಷಯದಿಂದ ತೀರಿಕೊಂಡಿದ್ದನು. ರಾಧಾಬಾಯಿ ಈಗ ಮನೆಯ ಲ್ಲೊಬ್ಬಳೇ—ಮಡಿ ಹೆಂಗಸು. ಹುಡುಗರಿಗೆ ಬೇಗ ಮದುವೆಯಾದರೆ ಮೇಲೆಂದು ಆಕೆಯ ಆಕಾಂಕ್ಷೆ. ಈಗೆಲ್ಲವೂ ಕೂಡಿಬಂತು. ಗೋವಿಂದನಿಗೆ ಗೋದಾವರಿಯನ್ನು, ಬಲವಂತನಿಗೆ ತುಂಗಾಬಾಯಿಯನ್ನು ಕೊಟ್ಟು ಮದುವೆ ಯಾಯಿತು.

ಇಬ್ಬರೂ ಶೋಲಾಪುರದಲ್ಲಿಯೇ ‘ಎಪ್ರೆಂಟಿಸ್’ ಆಗಿ ವಕಾಲತ್ ಮಾಡು ತ್ತಿದ್ದಾರೆ. ಹುಡುಗಿಯರೂ ಅವರಲ್ಲಿಯೇ ಇದ್ದಾರೆ. ರಾಮಣ್ಣನೂ ವರ್ಷ ಕ್ಕೊಮ್ಮೆ ಫಸಲಿನ ಕಾಲಕ್ಕೆ ವಸೂಲಿಗಾಗಿ ಗಜ್ಜೂರಿಗೆ ಹೋಗುತ್ತಿದ್ದನೇ ಹೊರತು ಬಾಕಿ ವರ್ಷವೆಲ್ಲ ತನ್ನ ಮಕ್ಕಳೊಡನೆಯೇ ಇರುತ್ತಿದ್ದನು. ರಾಧಾ ಬಾಯಿ ಧರ್ಮಪರಾಯಣೆ. ಮನೆಯಲ್ಲಿ ಎಷ್ಟೆಷ್ಟೋ ಪೂಜೆಗಳು, ಹಬ್ಬಗಳು,

ವ್ರತಗಳು ನಡೆಯುತ್ತಲೇ ಇರುವವು. ರಾಮಣ್ಣನಿಗೂ ಅನುಕೂಲವಾಯಿತು. ಅವನಿಗೂ ತನ್ನ ಮನಸ್ಸಿಗೆ ಬೇಕಾದ ಕೆಲಸವೇ ಸಿಕ್ಕಿಬಿಟ್ಟಿತು. ಈಗ ರಾಮಣ್ಣ ರಾಧಾಬಾಯಿಯಲ್ಲಿ ಮುಖ್ಯ ಪುರೋಹಿತ ಎಂದು ನಿಸ್ಸಂದೇಹವಾಗಿ ಹೇಳಬಹುದು. ಆತನ ಮಂತ್ರಭಾಂಡಾರ ಪೂಜಾವಿಧಿಗಳಲ್ಲಿ ಈಕೆಗೆ ಗೌರವ. ಪಟ್ಟಣದ ಹೆಂಗಸಾಗಿದ್ದರೂ, ಹೆಚ್ಚುಕಡಿಮೆ ಮೂವತ್ತೈದು ವರ್ಷಗಳನ್ನು ದಾಟದೆ ಇದ್ದವಳಾಗಿದ್ದರೂ ಸ್ತ್ರೀಸೌಂದರ್ಯಕ್ಕೆ ಆಧಾರವಾದ ಕೂದಲನ್ನು ತ್ಯಜಿಸಿ ಮಡಿ ಹಿಡಿದವಳ ಧರ್ಮಬುದ್ಧಿಯು ಎಷ್ಟು ದೊಡ್ಡದಾಗಿರಬೇಕು ಎಂದು ಈತನಲ್ಲಿ ಆಕೆಯನ್ನು ಕುರಿತು ಗೌರವ. ಈ ರೀತಿಯಾಗಿ ಎಲ್ಲವೂ ನಡೆಯಿತು.

* * * * * *

ಹೀಗಾಗಿ ಆರು ವರ್ಷಗಳ ಕಾಲ ಕಳೆಯುತ್ತ ಬಂದಿದೆ. ಅಣ್ಣತಮ್ಮಂದಿರಿಬ್ಬರೂ ಕೂಡಿಕೊಂಡು ವಕಾಲತು ಮಾಡುತ್ತಿದ್ದಾರೆ. ಇವರ ಯೋಗ್ಯತೆ ಬೆಳೆಯುತ್ತಿದೆ. ಹಾಗೆಯೇ ಸಂಪಾದನೆಯೂ ಹೆಚ್ಚುತ್ತಿದೆ; ಕೀರ್ತಿಯೂ ಹೆಚ್ಚುತ್ತಿದೆ. ಇಬ್ಬರ ಹೆಂಡಂದಿರೂ ಅತ್ತೆಯ ಯೋಗ್ಯತೆ ನೋಡಿ ಸುಖವಾಗಿದ್ದಾರೆ. ತಾವೂ ಓದುಬರೆಹಗಳನ್ನು ಚೆನ್ನಾಗಿ ಕಲಿತಿದ್ದಾರೆ. ಗೋದುಗೆ ಒಂದು ಹೆಣ್ಣುಮಗುವೂ ಹುಟ್ಟಿ ಸೊಗಸಾಗಿ ಬೆಳೆಯುತ್ತಿದೆ. ರಾಧಾಬಾಯಿಗೆ ಸೊಸೆಯಂದಿರೆಂದರೆ ಪಂಚಪ್ರಾಣಗಳು. ತನ್ನ ಮಗಂದಿರೇ ಎಂದಾದರೊಮ್ಮೆ ಅವರಿಗೆ ಕಠಿನ ಮಾತುಗಳನ್ನು ಆಡಿದ್ದೇ ಆದರೆ ಆಕೆ ಸಿಡಿದು ಹೋಗುವಳು. ಅವರಿಗೆ ಬುದ್ಧಿ ಹೇಳುವಳು. ಹೆಂಡತಿಯ ಮನಸ್ಸನ್ನು ನೋಯಿಸುವುದು ದೊಡ್ಡ ಪಾಪ ಎಂದು ಎಷ್ಟೋ ಸಲ ಕಣ್ಣೀರು ಬಿಡುತ್ತ ಹೇಳುವಳು. ಆಕೆಯ ದಾನಧರ್ಮವನ್ನು ನೋಡಿ ಈ ಹುಡುಗಿಯರೂ ತಮ್ಮ ಕೊಡುಗೈಯನ್ನು ಬಲಿಸುತ್ತ ಬಂದರು. ಅವರ ಉದಾರ ಲೀಲೆಗೆ ಬೇಕಾದಷ್ಟು ಸಂಪಾದನೆಯೂ ಇತ್ತು; ತಕ್ಕ ವಾತಾವರಣವೂ ಇತ್ತು. ಮನೆಯ ಮೂಲೆ ಮೂಲೆಯಲ್ಲಿ ಸುಖಸಂತೋಷಗಳೇ ಬೆಳಗುತ್ತಿದ್ದವು.

* * * * * *

ಈಗ ಶೋಲಾಪುರದಲ್ಲಿ ದಿನೇ ದಿನೇ ಮುಂದಕ್ಕೆ ಬರುತ್ತಿದ್ದ ಅಣ್ಣ ತಮ್ಮಂದಿರಲ್ಲೊಂದು ವಿಚಾರ ಉದಯಿಸಿತು. ತಮ್ಮಲ್ಲೊಬ್ಬರು ಬೊಂಬಾಯಿ

ಯಲ್ಲಿ ಇದ್ದುಕೊಂಡು ವಕಾಲತ್ ಮಾಡಿದರೆ ಇಬ್ಬರಿಗೂ ಲಾಭ ಎಂಬ ಕಲ್ಪನೆಯಾಯಿತು. ಕೆಲವು ದಿನ ಅಣ್ಣತಮ್ಮಂದಿರಲ್ಲಿ ಚರ್ಚೆ ನಡೆದ ಮೇಲೆ, ಹೋಗುವದು ಒಳ್ಳೆಯದೆಂದೂ, ಹೋಗುವದಾದರೆ ಗೋವಿಂದನು ಹೋಗುವದು ಮೇಲೆಂದೂ ತೀರ್ಮಾನವಾಯಿತು. ಅದನ್ನು ಇಬ್ಬರೂ ತಮ್ಮ ತಾಯಿಯ ಮುಂದಿಟ್ಟರು. ಆಕೆಗೆ ಮೊದಲು ಎದೆಯಲ್ಲಿ ಧಸ್ಸಾಯಿತು. ಹೆತ್ತು ಹೊತ್ತು ಬೆಳೆಸಿ ಚಿಕ್ಕಂದಿನಿಂದ ಆ ರೀತಿ ಮಕ್ಕಳನ್ನು ಅಗಲದೆ ಇದ್ದವಳು—ಆ ತಾಯಿ ರಾಧಾಬಾಯಿ. ಆಕೆಯ ಕಣ್ಣಿನಿಂದ ನೀರು ಧಾರೆಯಾಗಿ ಸುರಿದುಬಿಟ್ಟಿತು. ಗಂಟಲಿಗೆ ಚಂಡೇರಿದಂತಾಯಿತು. ತಲೆಯು ಹೇಗೆಹೇಗೋ ಆಗಹತ್ತಿತು. ಆದರೆ ಅಂಥ ಹೃದಯಕ್ಕೂ ತನ್ನ ವಿವೇಕದ ಕಡಿವಾಣವನ್ನು ಬಿಗಿದೆಳೆದು "ನನ್ನ ಕಣ್ಣೀರಿಗೆ ತುತ್ತಾಗಬೇಡ ಗೋವೀ. ಅವಿವೇಕ—ಅದೆಲ್ಲ ಅವಿವೇಕ" ಎಂದಳು. "ತಾಯಿಯ ಕರುಳಮ್ಮಾ ಅದು" ಎಂದು ಬಲವಂತನೂ ಮುಗಿಸುವಷ್ಟರೊಳಗೇ, "ಹೌದಪ್ಪಾ, ಕರುಳೊಂದು ಕಡೆ ಇದೆ; ಆದರೆ ಮೆದುಳು ಇದೆಯಲ್ಲವೆ ಇನ್ನೊಂದು ಕಡೆ—ಅದೂ ಮೇಲುಕಡೆ.?........ಮಕ್ಕಳ ಉದ್ಧಾರಕ್ಕೆ ತಾಯಿಯಿಂದ ಅಡ್ಡಿಯಾಗುವುದೇ? ಛೇ, ಹೋಗಣ್ಣಾ ಗೋವೀ. ದೊಡ್ಡ ಮನುಷ್ಯನಾಗು. ಗೋವಿಂದರಾನಡೇ ಆಗು" ಎನ್ನುತ್ತ ಆತನನ್ನು ಹತ್ತಿರಕ್ಕೆಳೆದು ಬಿಗಿದಪ್ಪಿಕೊಂಡಳು, ತಲೆ ಸವರಿದಳು, ಹರಸಿದಳು, ಅವನಿಗಾಗಿ ಪ್ರಾರ್ಥಿಸಿದಳು. ಆಗಲ್ಲಿ ಎಲ್ಲವೂ ಸ್ತಬ್ಧವೇ. ಪ್ರೇಮವು ವಿವೇಕದ ಸಿಂಹಾಸನವನ್ನೇರಿ ಕೂತಿದೆ. ವಿಸ್ಮಯಾಕುಲ ವಾತಾವರಣವು ಮೌನ ರಾಜ್ಯವಾಗಿಬಿಟ್ಟಿದೆ! ಸಕಲ ಇಂದ್ರಿಯ ಶಕ್ತಿಗಳೂ ಹೃದಯವನ್ನು ತೂರಿ ಸೇರಿಕೊಂಡಿವೆ. ಆ ಪರಿಸ್ಥಿತಿಯ ಅರ್ಥವನ್ನು ಹೇಳುವವರಾರು! ಆದರೆ ಸಜೀವ ಹೃದಯಕ್ಕೆ ಅದರ ಸಂಪೂರ್ಣ ಪ್ರತ್ಯಯವೇ ಇಲ್ಲದೆ ಹೋದೀತೇ?

ಇನ್ನೂ ಕೆಲವು ದಿನಗಳಲ್ಲಿಯೇ ಗೋವಿಂದನು ಬೊಂಬಾಯಿಗೆ ಹೋಗಿಯೇ ಬಿಟ್ಟನು.

* * * * * *

ಗೋವಿಂದನೂ ಗೋದಾವರಿಯೂ ಬಲು ಅಟ್ಟಹಾಸದಿಂದ ಬೊಂಬಾಯಿಯಲ್ಲಿ ಬದುಕು ಮಾಡುತ್ತಿದ್ದಾರೆ. ಬಲವಂತನೂ ತುಂಗಾಬಾಯಿಯೂ ಇಲ್ಲಿ ಶೋಲಾಪುರದಲ್ಲಿ ಸುಖವಾಗಿದ್ದಾರೆ. ಇಬ್ಬರಿಗೂ ಕೆಲಸವೂ ಆದಾಯವೂ

ಬಹಳ. ಆದರೆ ಸಾಮಾನ್ಯವಾಗಿ ಆದಾಯಕ್ಕೆ ಸದಾ ಸ್ವಾಗತವೇ ಇದ್ದರೂ ಕೆಲಸಕ್ಕೆ ಹಾಗಿಲ್ಲವಷ್ಟೆ. ಅದಕ್ಕೊಂದು ಮಿತಿ ಇದೆ. ಬಲವಂತನ ಕೆಲಸ ವಂತೂ ಮಿತಿಮೀರಿ ಬಿಟ್ಟಿತು. ಆತನ ದೇಹವು ದುರ್ಬಲವಾಗುತ್ತ ಹೋಯಿತು. ರಾಧಾಬಾಯಿ ಎಷ್ಟೋ ಹೇಳಿದಳು. ಆದರೂ ಆತನ ಕೆಲಸವು ಬೆಳೆಯುತ್ತಲೇ ಹೋಯಿತು. ಅದೂ ವಕಾಲತು ಒಂದೇ ಅಲ್ಲ. ವ್ಯಾಖ್ಯಾನ ಗಳಾಗುವಾಗ ಅಧ್ಯಕ್ಷತೆ, ಎಷ್ಟೋ ಸಂಘಗಳ ಕಾರ್ಯದರ್ಶಿತ್ವ—ಇಂಥ ಇನ್ನೂ ಎಷ್ಟೋ ಕೆಲಸಗಳೂ ಗಂಟುಬಿದ್ದವು. ಪರಿಣಾಮ ಅನಾರೋಗ್ಯಕ್ಕೆ ಪ್ರಾರಂಭ. ಹೀಗಿರುವಾಗ ಒಂದು ರಾತ್ರಿ ಕೆಲಸವು ಎರಡು ಘಂಟೆಯ ವರೆಗೆ ನಡೆಯಿತು. ಕಠಿಣವಾದ ಸೆಕೆ ಒಂದು ಕಡೆ. ದೀಪದ ಕಾವು ಇನ್ನೊಂದು ಕಡೆ. ವ್ಯಾಜ್ಯದ ಆತುರವು ಮುಗದೊಂದು ಕಡೆ. ಇವೆಲ್ಲವುಗಳಿಂದ ಸಂತಪ್ತ ನಾದ ಬಲವಂತನು ಸ್ವಲ್ಪ ನೀರು ಕುಡಿಯಲಿಕ್ಕೆ ಅಡಿಗೆಯ ಮನೆಗೆ ಹೋದನು. ನೀರು ಕುಡಿದು ಹಿಂದಿರುಗುವಾಗ ಏನೋ ಒಂದು ಸದ್ದು! ನಿಶ್ಶಬ್ದನಾಗಿ ನಿಂತ. ಕಿವಿಯಾರೆ ಕೇಳಿದ. ಪಕ್ಕದಲ್ಲಿರುವ ದೇವರ ಮನೆ ಯಲ್ಲಿಂದ ಏನೋ ಶ್ವಾಸೋಚ್ಛ್ವಾಸವು ಹೊರಡುತ್ತಿದೆ. ಆತನಿಗೆ ದಿಗಿಲಾಯಿತು! ಮನಸ್ಸಿಗೆ ಬುದ್ಧಿ ಹೇಳಿ, ಧೈರ್ಯ ಮಾಡಿಕೊಂಡು ಇನ್ನೂ ಕೇಳುತ್ತಾನೆ. ಅದೇ ಶ್ವಾಸೋಚ್ಛ್ವಾಸ! ಮೆಲ್ಲಗೆ ಬೆಕ್ಕು ಹಕ್ಕಿಯ ಹಿಂದೆ ಹೆಜ್ಜೆಯಿಟ್ಟಂತೆ ತಾನೂ ಮುಂದಕ್ಕೆ ಸಾಗಿದ. ಎಲ್ಲಾ ಕತ್ತಲೆ. ಮುಟ್ಟ ಬಾಗಿಲ ಮೇಲೆ ಕೈ ತಿರುಗಿಸಿದ. ಬಾಗಿಲು ಮುಚ್ಚಿದೆ. ಆದರೂ ಅದೇ ಶ್ವಾಸೋಚ್ಛ್ವಾಸ. ಕಣ್ಣು ತೆರೆದು ಬಾಗಿಲ ಕಡೆ ನೋಡಿದ. ಒಂದು ಸಂದಿನಿಂದ ಬಹು ಸ್ವಲ್ಪ ಬೆಳಕು ಇಣಕುತ್ತದೆ. "ಪ್ರತಿದಿನ ಸಂಧ್ಯಾಕಾಲಕ್ಕೆ ದೀಪನೇ ಅದು. ಯಥಾಪ್ರಕಾರ ಎಣ್ಣೆಯೊಣಗಿ ಆರಲಿಕ್ಕೆ ಬಂದಿದೆ. ಆದರೆ ಆ ಶ್ವಾಸ? ಅದೇ ನಿರಬಹುದು?" ಎಂದುಕೊಂಡು ಆ ಸಣ್ಣ ಸಂದಿನಿಂದ ಒಳಕ್ಕೆ ಹಣಿಕಿದ. ನೋಡುತ್ತಾನೆ—ತನ್ನ ತಾಯಿ!!........ಇನ್ನೊಂದಾರು? ತನ್ನ ಮಾವ ನಿದ್ದಂತಿದೆ!! ಇಬ್ಬರಿಗೂ ಗಾಢ ನಿದ್ರೆ!! ಅರ್ಧ ಕತ್ತಲೆಯು ತೋರಿಸಿಕೊಟ್ಟ ತೀವ್ರನೋಟವು ಕಣ್ಣು ಮಾತ್ರವನ್ನೇ ಅಲ್ಲ, ಹೃದಯ ಮಧ್ಯವನ್ನೇ ಕುಕ್ಕಿ ಬಿಟ್ಟಿತು. ನೋಡಲಾರದ ನೋಟ! ನೋಡಿದರೂ ನಂಬಲಾರದ ನೋಟ!.... ಇದೇನು ಮಾಯೆಯೇ ಎಂದು ಸುತ್ತುವ ತಲೆಯೊಂದು ಪ್ರಶ್ನೆ ಎತ್ತಿದರೂ

ಕಣ್ಣುಗಳು ಮಂತ್ರವತ್ ಇನ್ನೊಮ್ಮೆ ನಿಲುಕಿ ನೋಡಿದವು. ಅದೇ ದೃಶ್ಯ. ಭ್ರಮೆಗೊಂಡರೂ, ಹೇಗೋ, ಸದ್ದಿಲ್ಲದೆ ತನ್ನ ಕೋಣೆಗೆ ಹಿಂತಿರುಗಿದನು! ತಾನು ಕೆಲಸ ಮಾಡುವ ಕೋಣೆಯದು. ಅಲ್ಲಿ ಒಂದು ಕುರ್ಚಿಯ ಮೇಲೆ ದಡಲ್ಲನೇ ಬಿದ್ದುಕೊಂಡು ರೆಪ್ಪೆಗಳನ್ನು ಮುಚ್ಚಿಬಿಟ್ಟಿದ್ದಾನೆ. ಮೇಲೆ ಎರಡು ಕೈಗಳಿಂದಲೂ ಮುಖವನ್ನೆಲ್ಲ ಮುಚ್ಚಿಕೊಂಡು ಬಿಟ್ಟಿದ್ದಾನೆ. ಆದರೂ ಕಣ್ಣು ಗಳು ಸಹಸ್ರಾರು ಸಂತಾಪಕರ ಭಯಂಕರ ನೋಟಗಳನ್ನು ತೋರಿಸುತ್ತವೆ.

ಅತ್ತಕಡೆ ಪ್ರಪಂಚವೆಲ್ಲವೂ ಶೂನ್ಯ. ತುಂಗಾಬಾಯಿಯು ತನ್ನ ಕೋಣೆಯಲ್ಲಿ ನಿದ್ದೆಹೋಗಿಬಿಟ್ಟಿದ್ದಾಳೆ. ಅಷ್ಟರೊಳಗೆ ಹತ್ತಿರದಲ್ಲಿರುವ ವಿದ್ಯಾರ್ಥಿಗೃಹದಿಂದ ಠಣ್ ಠಣ್ ಎನ್ನುತ್ತ ಹೊರಟ ಎಚ್ಚರಿಕೆಯ ಗಂಟೆ ಗಳು ಕಿವಿಯನ್ನು ತಿವಿದು ಆತನನ್ನು ಎಬ್ಬಿಸಿದವು.

"ಇದೇನು! ನಾಲ್ಕುವರೆ ಘಂಟೆ! ತಡವಾಯಿತು"—ಎಂದುಕೊಳ್ಳುತ್ತ ಸರಕ್ಕನೇ ಎದ್ದು ತನ್ನ ಮೇಜಿನ ಕಡೆ ಹೋಗಿ ಪರ್ ಎಂದು ಒಂದು ಮಿಮೊ (Memo) ಕಾಗದವನ್ನು ಹರಿದು ಎರಡು ಗೀಟುಗಳನ್ನು ಗೀಚಿ ಅವಸರದಿಂದ ಹೋಗಿ ಆ ಪುಟ್ಟ ಕಾಗದವನ್ನು ಆ ಚಿಕ್ಕ ಬಾಗಿಲ ಸಂದಿನಿಂದ ದೇವರ ಮನೆ ಯೊಳಗೆ ಹಾಕಿಬಿಟ್ಟ.

ಅಲ್ಲಿಂದ ಬಂದು, ಮನೆಯ ಉಪಯೋಗಕ್ಕೆಂದು ಇಟ್ಟಿರುವ, ಹಲವು ಔಷಧಗಳ ಒಂದು ಚಿಕ್ಕ ಕವಾಟನೆಡೆಗೆ ಹೋಗಿ ಒಂದು ಶೀಸೆಯ ಬೂಚನ್ನು ತೆಗೆದು ಅದರೊಳಗಿದ್ದ ದ್ರಾವಕವನ್ನು ಕುಡಿದುಬಿಟ್ಟನು.

* * * * * *

ಅದರ ಅರ್ಧ ತಾಸಿನೊಳಗಾಗಿಯೇ ರಾಧಾಬಾಯಿಯು ಎದ್ದು ಬಾಗಿ ಲನ್ನು ತೆರೆಯುತ್ತಿದ್ದಾಳೆ. ಸಂತೋಷದ ಸ್ಮೃತಿ ಸ್ವಪ್ನಗಳು ಇನ್ನೂ ಕಣ್ಣಮೇಲೆ ಕದಲದೇ ಸ್ವಲ್ಪ ಸ್ವಲ್ಪ ಹಾಗೆ ಕೂತಿವೆ. ಬಾಗಿಲನ್ನು ತೆಗೆದು ಹಿಂಗಾಲನ್ನೆತ್ತುವಷ್ಟಕ್ಕೆ ಅದಕ್ಕೊಂದು ಕಾಗದವು ಹತ್ತಿತ್ತು. ಅದನ್ನು ಹಾಗೆಯೆ ಎತ್ತಿ ಕೈಯಲ್ಲಿಟ್ಟುಕೊಂಡು, ಒಂದು ಲಾಂದರವನ್ನು ಹಚ್ಚಿ, ತಕ್ಕೊಂಡು ಅಂಗಳ ದಾಟ ಬಚ್ಚಲಮನೆಯ ಕಡೆಗೆ ಹೋಗುತ್ತಿದ್ದಾಳೆ. ಮನ ಸ್ಸಿನಲ್ಲಿ ಅದನ್ನು ನೋಡುವಷ್ಟು ಒತ್ತಾಯವೂ ಇಲ್ಲ; ಅದನ್ನು ಹಾಗೆ ಬಿಡು ವಷ್ಟು ಅಜಾಗ್ರತೆಯೂ ಇಲ್ಲ. ಯಾಕೋ ಆ ಪತ್ರ ಹಾಗೆ ಹಿಡಿತದಲ್ಲಿದ್ದು

ಕೊಂಡುಬಿಟ್ಟಿದೆ. ಬಚ್ಚಲಿಗೆ ಹೋಗಿ ತಂಬಿಗೆಯಿಂದ ನೀರೆತ್ತಬೇಕಾದರೆ, ಒಮ್ಮೆ ಆ ಕಾಗದವನ್ನು ಬಿಸಾಡಿ ಬಿಡುವಷ್ಟಕ್ಕಿದ್ದಳು. ಆವಾಗಲೇ ತಾನೆ ಅಲ್ಲಿ ಒಯ್ದಿಟ್ಟ ಲಾಂದರದ ಬೆಳಕಿನಲ್ಲಿ ಮಗನ ಸ್ವಲ್ಪ ದೊಡ್ಡ ದೊಡ್ಡ ಅಕ್ಷರಗಳು ಕಣ್ಣಿಗೆ ಬಿದ್ದವು. ಆತನ ಬರಹ ದೇವರ ಮನೆಗೆ ಬರಲಿಕ್ಕೆ ಕಾರಣವೇನಿದ್ದೀತು ಎಂಬ ವಿಚಾರದಿಂದ ಎಚ್ಚರಿಕೆಯು ಪೂರ್ಣಾವಸ್ಥೆಗೆ ಬಂದು ಅದನ್ನು ಏನಿರಬಹುದೆಂದು ಪರೀಕ್ಷಿಸುವುದಕ್ಕಾಗಿ ಓದಿ ನೋಡಿದಳು.

"ಅಮ್ಮಾ (?)

**ಅಪ್ಪನಿಗೆ ಬಹಳ ವೇದನೆ! ನಾನವನನ್ನು ನೋಡಿಕೊಳ್ಳಲಿಕ್ಕೆ ಹೊರಟೆ! ದೇವರ ಮನೆ ಯಾಕೆ ಹಾಗಾಯಿತು!...............**

**ಬಲವಂತ"**

ಇಷ್ಟೇ ಆ ಚೀಟಿನ ಬರಹ! ರಾಧಾಬಾಯಿಯು ಧಡಲ್ಲನೇ ಬಿದ್ದಳು! ಚೀಟು ಕೆಳಗೆ ಬಿತ್ತು. ಹಿಂದೆಯೇ ಇದ್ದ ರಾಮಣ್ಣಾ ಗಟ್ಟಿಯಾದ ಗುಟ್ಟನಿಂದ "ಬಿದ್ದಿಯೋ!" ಎಂದೆನ್ನುವಷ್ಟರೊಳಗಾಗಿ ಬಿದ್ದ ಏಟನಿಂದ ಆಕೆ ಎಚ್ಚತ್ತಳು. "ಚೀಟು....ಆ....ಚೀಟು....ಎ...." ಎಂದು ನಿತ್ರಾಣವಾಗಿ ತಡೆದು ತಡೆದು ಕೇಳುವಷ್ಟರೊಳಗೆ, ಎದುರಿನಲ್ಲಿಯೇ ಅದು ಆತನ ಕಣ್ಣಿಗೆ ಬಿತ್ತು. ಅದನ್ನೆತ್ತಿ ಕ್ಷಣದಲ್ಲಿ ಓದಿದ. ಕೂಡಲೇ ಹೊರಟ! ಮಾಯವಾಗಿ ಬಿಟ್ಟ!! ರಾಧಾಬಾಯಿಗಿನ್ನೂ ಪೂರ್ಣ ಎಚ್ಚರಿಕೆ ಬರಲಿಲ್ಲ. ಚೀ........ಟ........ಎಂದೇನೋ ಬಾಯಿಯಿಂದ ಹೊರಡುತ್ತಿದೆ.

ರೂಢವಾಗಿ ಮಗ ಸೊಸೆ ಎದ್ದು ಬರುವದು ಆರು ಆರೂವರೆಗೆ, ಆದರೆ ಇಂದು ರಾಧಾಬಾಯಿಯು ತನಗೆ ತಾನಾಗುವಷ್ಟರೊಳಗೆ "ಅಯ್ಯೋ.... ಅಮ್ಮಾ....ಹೋದರು....ಕಣ್ಣು ನೋಡಿ....ಅಯ್ಯಯ್ಯೋ ಎಂಥಾ ಸೆಟೆತಾ ಇದು....ಅಯ್ಯೋ"—ಎಂಬ ಕೂಗು ಬಲು ಜೋರಾಗಿ ಎದ್ದು ಬಂದದ್ದು ಆಕೆಯ ಕಿವಿಯಿಂದ ತೂರಿಕೊಂಡು ಒಳ ಹೊಕ್ಕು ಆಕೆಯನ್ನೆಬ್ಬಿಸಿತು. ಕೂಡಲೇ ಒಳಗೆ ಬಂದು ನೋಡುತ್ತಾಳೆ—ಬಲವಂತನು ಬಲಶೂನ್ಯನಾಗಿ ಬಿದ್ದಿದ್ದಾನೆ! ಆತನ ಮೇಲೆ ತುಂಗಾಬಾಯಿಯು ಗೋಳೆಬ್ಬಿಸಿ ತುಂಗಾಪ್ರವಾಹವನ್ನೇ ಕಣ್ಣೀರಿನಿಂದ ಹರಿಸುತ್ತಿದ್ದಾಳೆ! ರಾಧಾಬಾಯಿಗೆ ಎಲ್ಲವೂ ಶೂನ್ಯವೇ ಶೂನ್ಯ! ಆಕೆ ಈಗೊಂದು ಶಿಲಾವಿಗ್ರಹ....ಅಷ್ಟೇ!

ಊರಲ್ಲಿ ಕೆಟ್ಟ ಪ್ಲೇಗಿತ್ತು. ಬಲವಂತನು ನ್ಯೂಮೋನಿಕ್ ಪ್ಲೇಗಿನಿಂದ ಕೆಲವು ತಾಸಿನೊಳಗೇ ಸತ್ತನು ಎಂಬ ಸುದ್ದಿ ಊರಲ್ಲೆಲ್ಲ ಹಬ್ಬಿಬಿಟ್ಟಿತು. ಗೋವಿಂದನಿಗೂ ಸುದ್ದಿ ಹೋಯಿತು! ಊರಲ್ಲೆಲ್ಲ ಒಂದು ವಿಧವಾದ ದುಃಖ, ವಿಸ್ಮಯ! "ನೀರ ಮೇಲಣ ಗುಳ್ಳೆಯಂದದಿ ತೋರಿಯಡಗುವ ದೇಹ........" ವೆಂಬ ವೃತ್ತಿಯೇ ಹಲವರ ಚಿತ್ತಸ್ಥಿತಿಪಥದಲ್ಲಿ ಸುಳಿದಾಡುತ್ತಿದ್ದೀಗ!

ಆದರೆ ನೈಜವನ್ನು ತಿಳಿದ ರಾಧಾಬಾಯಿಯ ಮನಸ್ಸಿನ ಸ್ಥಿತಿ!—ಯಾರು ಬಲ್ಲ? ರಾಮಾಚಾರಿಯ ಮನೋಗತಿ!—ಆತನ ಮನಸ್ಸಿನ ಗತಿಯು ಹೆಜ್ಜೆಗಳನ್ನು ಸೇರಿಕೊಂಡಿದೀಗ! ಆತನು ಎಲ್ಲಿದ್ದಾನೋ—ಅಂದಿನಿಂದಿಂದಿಗೂ ಯಾರಿಗಾದರೂ ಸುದ್ದಿಯಿದ್ದರಲ್ಲವೆ?

* * * * * *

ಕಾಲವು ತನ್ನ ದೀರ್ಘ ಉಚ್ಛ್ವಾಸದಿಂದ ಎಂಥ ಉರಿಯನ್ನೂ ಆರಿಸಬಲ್ಲದು. ಹೀಗಾದ ಒಂದೆರಡು ತಿಂಗಳುಗಳಲ್ಲಿಯೇ ಬೊಂಬಾಯಿಯಿಂದ ರಾಧಾಬಾಯಿಗೆ ಒಂದು ಪತ್ರ ಬಂತು. ಅದರ ಸಾರಾಂಶವಿಷ್ಟೇ:—"ಗೋದುಗೆ ಐದು ತಿಂಗಳಾದರೂ ಬಯಕೆಗಳು. ಸಹಾಯಕ್ಕೆ ತುಂಗಮ್ಮನನ್ನು ಕಳುಹಿದರೆ ಉತ್ತಮ." ರಾಧಾಬಾಯಿಗೆ ಈಗ ತುಂಗಮ್ಮನ ಮೇಲಣ ಪ್ರೇಮವು ಇಮ್ಮಡಿಯಾಗಿದೆ. ಆಕೆಯ ಸುಖವೇ ಧ್ಯೇಯ, ಅದರ ಸಾಧನವೇ ಧರ್ಮವಾಗಿಬಿಟ್ಟಿದೆ. ಪಶ್ಚಾತ್ತಾಪವು ಈ ಕರ್ಮರೂಪವನ್ನು ಧರಿಸಿದೆ. ಹೀಗಿರುವಾಗ, ಬೊಂಬಾಯಿಗೆ ಹೋದರೆ ತನ್ನ ಅಕ್ಕನ ಸಹವಾಸದಲ್ಲಿ ಇನ್ನೂ ಸುಖವಾಗಿರುವಳೇ ಎಂಬ ಭಾವನೆಯಿಂದ ಆಕೆಯನ್ನು ಕಳುಹಿಸಿಕೊಟ್ಟಳು.

ಗೋದಾವರಿಯ ಬಯಕೆಯೆಂದರೆ ಬಲು ತ್ರಾಸ. ಆಕೆಗೆ ಹಾಸಿಗೆಯಿಂದ ತಲೆ ಎತ್ತಲಿಕ್ಕೆ ಬಾರದು. ಹೆರಿಗೆಯಾಗುವ ವರೆಗೆ ಒಂದೇ ಅವಸ್ಥೆ. ಹೀಗಿರುವಾಗ ಆಕೆಯ ಶುಶ್ರೂಷೆ, ಗೋವಿಂದನ ಮನೆಯ ಸೇವೆ, ಯಜಮಾನಿಕೆ ಇವೆಲ್ಲ ತುಂಗಮ್ಮನ ಪಾಲಿಗೆ ಬಿದ್ದವು. ಅಕ್ಕನಿಗೆ ತಂಗಿಯ ಮೇಲೆ ಪ್ರೇಮವಿರುವದು ಸಹಜವೇ ಆದರೆ ತುಂಗಮ್ಮನ ದಣುವಿಲ್ಲದ ಸೇವೆ, ನಿಷ್ಕಪಟ ಬುದ್ಧಿ, ನಿರ್ಹೇತುಕ ಪ್ರೇಮ ಇವೆಲ್ಲವು ಅಂಥ ಸಮಾನ ಗುಣಗಳನ್ನೇ ಗೋವಿಂದನಲ್ಲಿಯೂ ಹುಟ್ಟಿಸಿದವು. ಇದನ್ನು ನೋಡಿ ಗೋದಾವರಿಗೂ ಎಷ್ಟೋ ಸಂತೋಷವಾಯಿತು. ಮೂವರಿಗೂ ಒಂದೇ

ವಿಶಾಲ ಹೃದಯವಿತ್ತೋ ಏನೋ ಎಂದು ಭಾಸವಾಗುವಂತಿತ್ತು ಅವರ ಪ್ರೇಮ. ಕೆಲವು ದಿನಗಳ ಮೇಲೆ ಗೋದುವಿನ ಹೆರಿಗೆಯಾಗಿ ಗಂಡು ಕೂಸು ಹುಟ್ಟಿತು. ಎಲ್ಲರೂ ಪರಮೋಲ್ಲಾಸದಿಂದಿದ್ದರು.

* * * * * *

ಬೊಂಬಾಯಿಗೆ ತುಂಗಮ್ಮ ಹೋಗಿ ಈಗ ಐದು ತಿಂಗಳು ಸುಮಾರು. ಇಲ್ಲಿ ರಾಧಾಬಾಯಿಯ ಅವಸ್ಥೆಯು ಬಹಳ ಮಾರ್ಪಟ್ಟಿದೆ. ಮೈಕಟ್ಟು ದಿನೇ ದಿನೇ ವಿಸ್ತರಿಸುತ್ತಿದೆ, ಆರಳುತ್ತಿದೆ, ಅಂಗಾಂಗಗಳಲ್ಲಿಯೂ ಬದಲಾವಣೆಯು ಕಾಣುತ್ತಿದೆ. ಈಕೆಗೆ ಬೊಂಬಾಯಿಯಲ್ಲಿದ್ದ ಮಕ್ಕಳ ಧ್ಯಾನ. ಅವರಿಗೆ ಇವಳದು. ಇಷ್ಟರೊಳಗೆ ತುಂಗಮ್ಮನಿಗೊಂದು ಪತ್ರ ಬಂತು.

"ನನ್ನ ಮುದ್ದು ತುಂಗಾ,

ಇಷ್ಟು ದಿನ ನಿನಗೆ ಬರೆಯಲು ಏನೂ ಕಾರಣವಿರಲಿಲ್ಲ. ನಿನ್ನ ಗಂಡನ ಮರಣದ ಕಾರಣವನ್ನೆಲ್ಲ ನಿನಗೊಬ್ಬಳಿಗೆ ಮಾತ್ರ ನೀನು ಬೊಂಬಾಯಿಗೆ ಹೋಗಬೇಕಾದರೆ ನಿನ್ನ ಪಾದಕ್ಕೆ ಬಿದ್ದು ಹೇಳಿಕೊಂಡಿದ್ದೆ. ನಿನ್ನ ಕ್ಷಮೆಯು ನನಗಿದೆ ಎಂಬ ಅಭಯವು ನನಗಿದ್ದರೂ ನಿನ್ನನ್ನು ಇನ್ನು ಮುಂದೆ ಹೇಗೆ ನೋಡಲಿ ಎಂದೊಂದು ವಿಚಾರವು ಕಾಡಿಸುತ್ತಿತ್ತೇ.

ಈಗ ನಿನ್ನೊಬ್ಬಳನ್ನೇ ಅಲ್ಲ; ನಿಮ್ಮನ್ನು ಮೂವರನ್ನೂ ಕಾಣಲಾರೆ. ನಿಮಗೆ ಮೋರೆ ತೋರಿಸಲಾರೆ. ನಾನೀಗ ಎಂಟು ತಿಂಗಳ ಬಸುರಿ.

ಈ ಎಂಟು ತಿಂಗಳೂ ನನ್ನ ಮಾನ ವಿಶೇಷವೋ, ಪಿಂಡದ ಪ್ರಾಣ ವಿಶೇಷವೋ ಎಂದು ಯೋಚಿಸುತ್ತ, ಮಾನವು ಮಾನವನು ಮಾಡಿಟ್ಟದ್ದು, ಪ್ರಾಣವು ದೇವರು ಕೊಟ್ಟದ್ದು ಎಂಬ ಮನವರಿಕೆಯಾಗಿ ಅದನ್ನು ಕಾಪಾಡುತ್ತ ಬಂದಿದ್ದೇನೆ. ಆದರೆ ನನ್ನ ವಿಚಾರವು ನಿಮಗೂ ಇರುವದು ಹೇಗೆ? ಆದುದರಿಂದ ನಿಮಗೆ ಅವಮಾನವಾಗದಂತೆ ನಾನಿರಬೇಕೆಂದು ನಿರ್ಧರಿಸಿ, ಅಂಥ ಜೀವನಕ್ಕೆ ತಕ್ಕ ಉಪಾಯಗಳನ್ನು ಮಾಡಿಟ್ಟಿದ್ದೇನೆ.

ನನ್ನ ಮುದ್ದು ಮಗೂ, ಇದೋ ಇದೇ ನನ್ನ ಕೊನೆಯ ಪತ್ರ. ಇದನ್ನು ನಿನ್ನಕ್ಕನಿಗೂ ತೋರಿಸು. ಆಕೆಯ ಗಂಡನಿಗೂ ತೋರಿಸು. ನನ್ನ ಮಗನಿಗೂ ತೋರಿಸು ಎಂದು ಬರೆಯುತ್ತಿದ್ದೆ ಆದರೆ ಅಮ್ಮಾ ಎಂಬ ಪದಕ್ಕೆ ಆತನಿಂದಲೂ ಏಕೆ (?) ಹೀಗೆಂದು ಪ್ರಶ್ನಾರ್ಥಕ ಚಿಹ್ನವನ್ನು ಹಾಕಿಸಿಕೊಳ್ಳಲಿ? ನನ್ನಿಂದ ನಿಮಗೆ ಅವಮಾನವಾಗಬಾರದು, ಮುಂದೆ ನನ್ನ ಕೂಸಿಗೂ ಹಿಂಸೆಯಾಗಬಾರದು ಎಂಬ ವಿಚಾರದಿಂದ ಇದನ್ನು ಬರೆದಿದ್ದೇನೆ.

ಇನ್ನೂ ಒಂದು ವಾರ ಈ ಊರಲ್ಲಿರುತ್ತೇನೆ. "ಕ್ಷಮಿಸಿದ್ದೇನೆ" ಎಂದು ನೀನು ಮತ್ತೊಮ್ಮೆ ಬರೆದದ್ದನ್ನು ನೋಡಬೇಕೆಂದು ಬಹಳ ಆಶೆ ಯಿದೆ. ಅವರೂ ಹಾಗೆ ಬರೆದರೆ ಇನ್ನಷ್ಟು ಸಮಾಧಾನ.

ಹುಟ್ಟಲಿರುವ ಮಗು ತಂದೆ ಇಲ್ಲದ ಮಗು! ಆದಾರ ಮಗು ಎನ್ನ ಬೇಕು? ಅದು ಹೇಗೂ ಇರಲಿ. ಹುಟ್ಟುವವನು ನನ್ನ ಬಲವಂತನೇ ಆಗಿ ಬರಲಿ ಎಂದು ಸದಾ ಪ್ರಾರ್ಥಿಸುವ,

ರಾಧಾ."

ಈ ಪತ್ರವು ತುಂಗಮ್ಮನ ಕೈಗೆ ಸಿಕ್ಕಿದಾಗ ಮೂವರೂ ಒಂದೇ ಕಡೆ ಕೂತಿದ್ದರು. ಅದನ್ನು ಆಕೆಯು ಓದುವಾಗ ಕಣ್ಣಿನಿಂದ ಜಲಪ್ರವಾಹವೇ ಇಳಿಯಿತು. ಇನ್ನು ಅವರು ಇಬ್ಬರೂ ಕೇಳಿದರು, ಅದನ್ನು ಓದಿದರು. ಅವರು ಬೆರಗಾಗಿ ಒಬ್ಬರೊಬ್ಬರ ಮೋರೆಯನ್ನು ಪೆಚ್ಚಾಗಿ ನೋಡುವಷ್ಟರೊಳಗೆ ತುಂಗಾ ಓಡಿಹೋಗಿ ಒಂದು ಕಾಗದವನ್ನು ತಂದು ಹೀಗೆ ಬರೆದಳು.

"ಅಮ್ಮಾ ತಾಯಿ,

ಅದು ದೇವರ ಮಗು. ದೇವರ ಮಗುವಾದ ಬಲವಂತ. ಶರೀರ ಧರ್ಮದಿಂದ ಹುಟ್ಟಿದ ಮಗು. ನನ್ನ ಮುದ್ದು ಮಗು. ನಮ್ಮನ್ನು ಬಿಟ್ಟು ಹೋಗುವಿಯಾ! ನಾನು ಕ್ಷಿಪ್ರದಲ್ಲಿಯೇ ಬರುವೆನು.

ಜನ್ಮಜನ್ಮಕ್ಕೂ ನಿನ್ನವಳೇ ಆಗಿರಲಿಚ್ಛಿಸುವ
ನಿನ್ನ
ತುಂಗಾ."

ಈ ಕಾಗದವನ್ನು ತಕ್ಕೊಂಡು ಬರುವಷ್ಟರೊಳಗೆ ಅದನ್ನು ಗೋದು ಕಸ ಕೊಂಡು ಗಟ್ಟಿಯಾಗಿ ಓದಿದಳು. ಅದರ ಇತಿಹಾಸವನ್ನು ತುಂಗಾ ಮೊದಲೇ ಇತ್ತೀಚೆಗೆ ಹೇಳಿಬಿಟ್ಟಿದ್ದಳು. ಆದವರಿಗೆ ಗೊತ್ತಿತ್ತು. ಅವರ ವಿವೇಕದಿಂದ ಅನುರಾಗವು ರಾಧಾಬಾಯಿಯ ಕಡೆ ಇನ್ನೂ ಹೆಚ್ಚಿತ್ತು. ಅನಂತರ ತುಂಗಮ್ಮನ ಕೈಯಲ್ಲಿದ್ದ ಲೆಕ್ಕಣಿಕೆಯಿಂದಲೇ "ತುಂಗಾ" ಎಂಬದರ ಕೆಳಗೆ ತನ್ನ ಸಹಿ ಯನ್ನೂ ಹಾಕಿಬಿಟ್ಟಳು. ಇದೆಲ್ಲದರಿಂದ ಕರಗಿ ಶುದ್ಧವಾದ ಮನಸ್ಸಿನಿಂದ ಗೋವಿಂದನು ತನ್ನ ದಸ್ಕತ್ತನ್ನೂ ಹಾಕಿಬಿಟ್ಟನು. ಪತ್ರ ಟಪ್ಪಾಲಿಗೆ ಹೋ ಯಿತು. ಆದರೂ ಸಮಾಧಾನವಿಲ್ಲ. ಅಂದಿನ ರಾತ್ರಿಯೇ—ಆ ಪತ್ರ ಹೊರಟ ರೈಲಗಾಡಿಗೇ—ಮೂವರೂ ಶೋಲಾಪುರಕ್ಕೆ ಹೊರಟುಬಿಟ್ಟರು.

* * * * * *



## ಶ್ರೀ ಜಾರಪ್ಪನವರು, ಮಂಗಳೂರು

ಇವರು ಮಂಗಳೂರಿನ 'ಬಡವರ ಬಂಧು' ಪತ್ರಿಕೆಯ ಸಂಪಾದಕರು. ಉತ್ತಮ ಕತೆಗಾರರು. ಇವರ ಕತೆಗಳೂ ಹರಟೆಗಳೂ ರಾಜಕೀಯ ವ್ಯಂಗ ಟೀಕೆಗಳೂ ಮಹಾ ಪುರುಷರ ಜೀವನ ಚರಿತೆಗಳೂ ಆಗಾಗ ಪತ್ರಿಕೆಗಳಲ್ಲಿ ಗುಪ್ತನಾಮ ಗಳಿಂದಲೂ ನಿಜನಾಮದಿಂದಲೂ ಪ್ರಕಟವಾಗುತ್ತಿವೆ. ಸೂಕ್ಷ್ಮ ವಾದ ಮನೋಧರ್ಮ ವಿವೇಚನೆಗೆ ಇವರ ಕತೆಗಳಲ್ಲಿ ಪ್ರಾಧಾನ್ಯ ವಿಲ್ಲ; ಸುಖದುಃಖಗಳ ಪ್ರುಥಕ್ಕರಣೆಗೂ ಮುಖ್ಯತೆಯಿಲ್ಲ. ಸಮಾಜದ ಮೌಢ್ಯ, ಅನ್ಯಾಯಗಳನ್ನು ಚಿತ್ರಿಸುವುದಕ್ಕೆ ಮಾತ್ರ ಪ್ರಾಮುಖ್ಯ. ಸಾಮಾನ್ಯ ಜನರ ಸಾಹಿತ್ಯವನ್ನು ರಚಿಸುವುದ ರಲ್ಲಿ ಸಫಲತೆಯನ್ನು ಪಡೆದಿದ್ದಾರೆ, ಸಮಾಜದ ಕುಂದು ಕೊರತೆಗಳನ್ನು ಬಯಲಿಗೆಳೆಯುವುದರಲ್ಲಿ ಇವರ ಪ್ರಯತ್ನವು ಸಫಲವಾಗಿದೆ. ಹಾಗೆಂದು ಉದ್ದೇಶ ಪೂರ್ವಕವಾಗಿ ಬರೆದ ಕತೆಗಳಾದರೂ ಕಲೆಯು ಎಲ್ಲಿಯೂ ಕೊಲೆಮಾಡಲ್ಪಡುವುದಿಲ್ಲ. ರಾಜಕೀಯ ವ್ಯಕ್ತಿಗಳೆನಿಸುವ ಕೆಲವರಲ್ಲಿ ಇರುವ ದೋಷ ಗಳನ್ನು ಈ ಕತೆಯಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ.

## ಸೇವೆಯ ಸಮಸ್ಯೆ

ಮಂಗಳೂರು ಚಾರಪ್ಪನವರು

.......................................

"ಈ ಕತ್ತಲೆಯಲ್ಲಿ ತಿರುಗಾಡಲು ನಿನಗೆ ಭಯವಾಗುವುದಿಲ್ಲವೇ?"

"ಒಮ್ಮೊಮ್ಮೆ ಇದಕ್ಕಿಂತಲೂ ಕತ್ತಲೆಯಲ್ಲಿ ನಡೆಯುತ್ತೇನೆ."

"ಇಷ್ಟು ಸಾರಾಯಿಯೂ ನಿನ್ನ ರಾಯರೊಬ್ಬರಿಗೆಯೋ?"

"ಹೌದು; ಮಲಗುವಾಗ ಎಲ್ಲಾ ಕುಡಿಯುತ್ತಾರೆ."

"ನಿನ್ನ ತಂದೆ ತಾಯಿ ತೀರಿಕೊಂಡು ಎಷ್ಟು ವರ್ಷಗಳಾದುವು?"

"ನನಗೆ ಗೊತ್ತಿಲ್ಲ; ಮನೆಯಲ್ಲಿ ರಾಮಕ್ಕನವರು ಹೇಳುತ್ತಾರೆ."

* * * * * *

ತಲೆತುಂಬ ಗುಂಗುರು ಗುಂಗುರಾದ ಕೂದಲು. ಬಡತನವು ಮೂರ್ತಿ ಸ್ವರೂಪಿಯಾಗಿ ನಿಂತಿದೆಯೆಂದು ಬೆರಳೆತ್ತಿ ತೋರಿಸುವ ಇಳಿದ ಕೆನ್ನೆಗಳು. ಎಂಟು ವರ್ಷ ವಯಸ್ಸಿನವನಿದ್ದಿರಬಹುದು. ನನ್ನ ಕೊಡೆಯೆರಡರಷ್ಟು ಎತ್ತರವಲ್ಲದ ಕರಿಯ ದೇಹ. ಲಂಗೋಟಿಯನ್ನುಟ್ಟುಕೊಂಡಿದ್ದುದರಿಂದ ಬಾಲಕನ ಅಂಗಾಂಗಗಳು ಕಾಣುತ್ತಿದ್ದುವು. ಕೋಮಲ ಕಾಯವಲ್ಲ. ದುಡಿದು ದುಡಿದು—ಬೇಕಿಲ್ಲದಷ್ಟು ದಣಿದು ದಣಿದು—ಬಾಡಿದ ಒರಟು ಶರೀರ. ಹೌದು, ಅವನೆಂದಂತೆ,—ರಾಯರ ಸೇವಕನವನು. ಹೆತ್ತವರಿಲ್ಲದೆ, ಕುಟುಂಬಿಕರಿಲ್ಲದೆ ಮುಳ್ಳಿನಲ್ಲಿ ಸಿಲುಕಿ ಆನಂದಿಸುವ ಪ್ರೇಮಭಂಡಾರಿಯೆ ಅವನು.

ಅವನ ಪ್ರಾಯಕ್ಕನುಗುಣವಾದ ಚಾತುರ್ಯದಿಂದ—ವಿವೇಕದಿಂದ ನನ್ನ ಪ್ರಶ್ನೆಗಳಿಗುತ್ತರ ಕೊಡುತ್ತಾ, ನನ್ನಲ್ಲಿ ಕುತೂಹಲದ ಎಚ್ಚರಿಕೆಯನ್ನು ಸೃಷ್ಟಿಸಿದ. ಆತ್ಮಪ್ರತಿಷ್ಠೆಯನ್ನು ಸೋಲಿಸಿ ಮಮತೆಯ ಬೆಳಕನ್ನು ಹೃದಯದಲ್ಲಿ ಉಜ್ವಲವಾಗಿ ಬೆಳಗಿಸುವ ಎಳೆಯ ಪವಿತ್ರ ಆತ್ಮವವನದು. ಕತ್ತಲೆಯು ಕೂಡಾ ಕಳವಳಿಸಿ ಕರುಣೆದೋರುವ ಧೈರ್ಯ ಸ್ಥೈರ್ಯದ ವಿನೀತ ಹೃದಯವವನದು. ಹತ್ತು ಫಿರಂಗಿಗಳನ್ನು ಕಡೆ ಹಾಯಿಸಿ, ಬಿಡದೆ ನಡೆಯುವೆನೆಂದು ಮೌನವಾಗಿ ಹೇಳುವ, ಉಬ್ಬಿದ, ಸುಂದರ ವಕ್ಷಸ್ಥಲವವನದು. ಹತ್ತು ಘಂಟೆಯು ಕಳೆದು ಭಯೋತ್ಪಾದನೆಗೊಳಿಸುವ ಕಗ್ಗತ್ತಲೆಯ ನಿರ್ಜನ ಮಾರ್ಗ

ದಲ್ಲಿ ಬಾಲಕನು ಶಿಳ್ಳಿಡುತ್ತಾ ಸೇವೆಯ ಕಠಿಣ ಪಥವನ್ನು ತುಳಿದು ಪೇಟೆ ಯತ್ತ ಸಾಗುತ್ತಿರುವನು. ನಾನು ಪ್ರಶ್ನಿಸುತ್ತಿದ್ದೆ;—ಅವನು ಉತ್ತರವೀಯು ತ್ತಿದ್ದ......................ದಾರಿ ಸಾಗುತ್ತಿದ್ದಿತು.

ಶಹರಿನ ಗಡಿಯೊಳಗಾದೆವು. ಅಲ್ಲಿಂದ, ಮಾರ್ಗದ ಉದ್ದಕ್ಕೂ ವಿದ್ಯು ದ್ದೀಪಗಳು ಬೆಳಗುತ್ತಿದ್ದುವು. ಬಾಲಕನ ಟಿಟ್ಟಿಭ ಹೃದಯವನ್ನು ಕಂಡು ದೀಪಗಳು ಹಲ್ಬಿಟ್ಟು ವ್ಯಂಗ್ಯವಾಗಿ ನಕ್ಕು, "ಮನದಲ್ಲೆ ನರಕ; ಮನದಲ್ಲೆ ಸ್ವರ್ಗ"ವೆಂಬುದನ್ನು ಬಾಲಕನೆಡೆಗೆ ಬೆರಳೆತ್ತಿ ತೋರಿಸಿ ಜಗತ್ತಿಗುಪದೇಶವನ್ನೀ ಯುತ್ತಿದ್ದುವೋ ಎಂಬಂತೆ ಪ್ರಕಾಶಿಸುತ್ತಿದ್ದುವು. ಹುಡುಗನು ತಟ್ಟನೆ— "ನಮ್ಮ ಮನೆಯು ಹತ್ತಿರವಾಯಿತು"—ಎಂದ. ಸಂತೃಪ್ತಿ ಸೂಚನೆಯ ರಮ್ಯ ನೋಟವನ್ನು ನನ್ನ ಕಡೆ ಹರಿಸಿ ಮುಗುಳು ನಗೆಯನ್ನು ಬೀರಿದ. ಸಾರಾಯಿಯ ಬಾಟ್ಲಿಯನ್ನು ಕಂಕುಳೊಳಗೆ ಸಜ್ಜಾಗಿರಿಸಿ, ಅದರ ಮೇಲಣ ಬಿಳಿಯ ಕರವಸ್ತ್ರವನ್ನೆಳೆದುಕೊಂಡ.

ಬಳಿಯಲ್ಲಿ ನನಗೆ ಮನೆಯು ಕಾಣಿಸಲಿಲ್ಲ—"ಎಲ್ಲಿದೆ?"—ಎಂದು ಪ್ರಶ್ನೆಯಿಟ್ಟೆ.

"ಓ ಅಲ್ಲಿ; ದೀಪಕಂಬ ಕಾಣುತ್ತದೆ,—ಅದರ ಹತ್ತಿರ" ಎಂದು ಬಲ ಗೈಯ ಬೆರಳೆತ್ತಿ ತೋರಿಸಿದ.

ಗತಿಯನ್ನು ಪೂರ್ಣವಾಗಿ ವಿಚಾರಿಸಿ ಬಿಡಬೇಕೆಂದು ಪ್ರಶ್ನೆಗಳ ಮಳೆ ಗರೆದೆ. "ನೀನು ದಿನಂಪ್ರತಿ ರಾತ್ರಿ ಶರಾಬಿನಂಗಡಿಗೆ ಹೋಗುವುದುಂಟೋ?" "ಹೌದು; ಅಮ್ಮ ಕಾಸು ಕೊಡುತ್ತಾರೆ—...." ತಡೆದು, ಬೀದಿಯ ಮೇಲಿದ್ದ ಬರಿದು ಬೆಂಕಿಪೆಟ್ಟಿಗೆಯನ್ನು ಫಕ್ಕನೆ ಬಗ್ಗಿ ತೆಗೆದ. ಮುಂದರಿಸಿ—"ಕತ್ತ ಲಾದ ಮೇಲೆ ತಾ" ಎನ್ನುತ್ತಾರೆ. ಅವನ ದೃಷ್ಟಿಯು ವಿದ್ಯುದ್ದೀಪವೊಂದರ ಮೇಲೆ ಬಿತ್ತು. ದೀಪದ ಮೇಲೆ ಹಾರಿ ದಣಿಯುತ್ತಿರುವ ಈ ಕ್ರಿಮಿಗಳಂತೆ ಲೋಕದ ಜನರು ಸಂಸಾರದ ಮಾಯೆಯಲ್ಲಿ ಬಿದ್ದು ಮುಕ್ತಿಯೆಂಬ ದೀನ ಸೇವೆಯನ್ನು ಮರೆಯುತ್ತಿರುವರಲ್ಲ,—ಎಂದು ಬಾಲಕನು ಚಿಂತಿಸುತ್ತಿದ್ದ ನೇನೋ! ಕರ್ತವ್ಯದ ಎಳೆತವು ಮನವನ್ನು ಸೆಳೆಯುವುದಿಲ್ಲವಾದರೆ, ಅವನ ಮನವು ಕೆಲವು ನಿಮಿಷಗಳಾದರೂ ಅದರಲ್ಲಿ ವಾಸಿಸುತ್ತಿದ್ದಿತೇನೋ!—ಅವಸರ ದಿಂದ, ನನ್ನೊಡನೆ ಮುಂಸಾಗಿದ.

"ನಿನಗೆ ಬೇರಾವ ಕೆಲಸವಿದೆ ಮನೆಯಲ್ಲಿ?"

"ಬೆಳಿಗ್ಗೆ – ರಾಯರು ಮತ್ತು ಅಮ್ಮ ಏಳುವ ಮೊದಲು ಬಚ್ಚಲು ಕೊಟ್ಟಿಗೆಯಲ್ಲಿರುವ ನೀರು ಕಾಯಿಸುತ್ತೇನೆ; ಎಮ್ಮೆ ದನಕರುಗಳ ಸೆಗಣಿ ತೆಗೆಯುತ್ತೇನೆ; ತೋಟ ಗುಡಿಸುತ್ತೇನೆ. ಮಾಡದಿದ್ದರೆ ಪೆಟ್ಟು ಕೊಡು ತ್ತಾರೆ."

"ಈಗ ಊಟಮಾಡಿ ಬಂದುದೋ?"

"ಇಲ್ಲ; ನಾವು ಊಟ ಮಾಡುವಾಗ ಯಾವಾಗಲೂ ತಡವಾಗುತ್ತದೆ. ಶರಾಬಿನ ಅಂಗಡಿಯಲ್ಲಿ ತಿನ್ನಲಿಕ್ಕೆ ಕೇಳಿದೆ; ಕೊಟ್ಟರು. ಈಗ ಹಸಿ ವಾಗುವುದಿಲ್ಲ."

"ಈಗ ಹತ್ತು ಘಂಟೆ ಕಳೆಯಿತು,—ನೀನು ಇನ್ನು ಊಟಮಾಡುವುದು ಯಾವಾಗ?"

"ಮನೆಯವರೆಲ್ಲ ಊಟಮಾಡಿ ಆದಮೇಲೆ. ಈಗ ಹೋಗುವುದು;.... ಊಟ ಮಾಡುವುದು"

"ನೀವು ಎಷ್ಟು ಮಂದಿ ಕೆಲಸದವರಿದ್ದೀರಿ?"

"ಮುಂಚೆ ನಾಲ್ಕು, ಈಗ ಮೂರು ಜನ."

"ನೀನು ಶರಾಬು ತರಲಿಕ್ಕೆ ಬೇಗ ಹೊರಡಬೇಕು."

"ಈ ಹೊತ್ತು ತಡವಾಯಿತು. ನಮ್ಮ ಮನೆಯಲ್ಲಿ ಈ ದಿನ ಒಂದು ದೊಡ್ಡ ಊಟವಿತ್ತು. ಎಲ್ಲಾ ಕೆಲಸಮಾಡಿ ಹೊರಡುವಾಗ ಹೊತ್ತಾಯಿತು— ಈ ಹೊತ್ತು........"

"ಊಟ ಯಾರಿಗೆ? ರಾಯರ........"

"ಗಾಂಧಿಜನ ಮತ್ತು ಹೊಲೆಯರಿಗೆ. ಭಾರೀ ಜನ ಇದ್ದರು."

"ನೂರು ಜನರಿದ್ದರೋ?"

"ನಮ್ಮ ಮನೆಯೆಲ್ಲಾ ಜನರು!"

"ಊಟವನ್ನು ನಿನ್ನ ರಾಯರು ಕೊಟ್ಟದ್ದೋ?"

"ಹೌದು."

ಅಷ್ಟರಲ್ಲಿ ಬಂಗಲೆಯ ಹೆಬ್ಬಾಗಿಲು ಸಮೀಪಿಸಿತು. "ನಾನು ಹೋಗು ತ್ತೇನೆ" ಎಂದವನೆ ಬಾಲಕನು ಬಾಗಿಲ ಆಚೆಕಡೆಗಾದ. ಹಿತ್ತಿಲ ಕತ್ತಲೆ

ಯಲ್ಲಿ ಮರೆಯಾದ ಅವನ ನೆರಳೂ ಗೋಚರಿಸದಾಯಿತು. ದೂರದಿಂದ ಬಂಗಲೆಯ ದೀಪದ ಪ್ರಕಾಶವು ಮರಗಳೆಡೆಯಿಂದ ಕಾಣುತ್ತಿದ್ದಿತು.

ಮರುದಿನ "ಸೌತ್‌ಕೆನರಾ ಟೈಮ್ಸ್" ಪತ್ರಿಕೆಯಲ್ಲಿ ಈ ಒಂದು ವಾರ್ತೆ ಇದ್ದಿತು:—

"ನಿನ್ನೆ, ತಾ. 21 ನೇ ಶನಿವಾರ ಮಧ್ಯಾಹ್ನ ನಮ್ಮೂರ ಪ್ರಸಿದ್ಧ ಸಾಹುಕಾರರೂ ಗಾಂಧೀಭಕ್ತರೂ ಆದ ಮ। ರಾ। ರಾ। ರಾಮು ಬಾಬಾಜಿಯವರ ಬಂಗಲೆಯಲ್ಲಿ ಸಹಸ್ರ ಹರಿಜನರಿಗೆ ಭೋಜನೋಪಚಾರವು ನಡೆಯಿತು. ನಗರದ ಪ್ರಮುಖರು ಅನೇಕರು ಸಹಭೋಜನದಲ್ಲಿ ಭಾಗಿಗಳಾಗಿದ್ದರು. ಮ। ರಾ। ರಾ। ರಾವ್ ಸಾಹೇಬ್ ನಾಗೇಶ್ವರಲಾಲರು ಶ್ರೀ। ಬಾಬಾಜಿಯವರ ಮಹೌದಾರ್ಯವನ್ನು ಕೊಂಡಾಡಿ ಅವರ ಹರಿಜನವಾತ್ಸಲ್ಯ ಮತ್ತು ದೇಶ ಪ್ರೇಮವನ್ನು ಎತ್ತಿ, ಶ್ಲಾಘಿಸಿ, ಭಾಷಣವಿತ್ತಾದ ಮೇಲೆ ಶ್ರೀ। ಬಾಬಾಜಿಯವರು ಮಾತನಾಡುತ್ತಾ—"ನಾನು ತಮ್ಮ ನಮ್ರ ಸೇವಕನು. ನನ್ನೀ ಸೇವೆಯು ತೃಣ ಸಮಾನವಾದುದು. ಹರಿಜನಸೇವೆಯನ್ನು ನಾನು ಇನ್ನಷ್ಟು ಮಾಡುವಂತೆ ನನ್ನನ್ನು ತಾವೆಲ್ಲರೂ ಆಶೀರ್ವದಿಸಿದರೆ ಧನ್ಯನು!" ಎಂದು ಮುಂತಾಗಿ ಹೇಳಿದರು. ಶ್ರೀ। ಬಾಬಾಜಿಯವರ ಸೇವೆಯು ಸ್ತುತ್ಯವಾದುದು."

---



## ಶ್ರೀ ಸಿಂಪೀ ಲಿಂಗಣ್ಣನವರು, ಹಲಸಂಗಿ

ಇವರು ಹಲಸಂಗಿಯಲ್ಲಿ ಅಧ್ಯಾಪಕರಾಗಿದ್ದಾರೆ. ಜನಪದ ಸಾಹಿತ್ಯದಲ್ಲಿ ತುಂಬ ಪ್ರೇಮವುಳ್ಳವರು. 'ಜಯ ಕರ್ನಾಟಕ' ಗ್ರಂಥಮಾಲೆಯ 'ಜೀವನ ಸಂಗೀತ' 'ಗರತಿಯ ಹಾಡು' ಎಂಬ ಜಾನಪದ ಗೀತೆಗಳ ಸಂಗ್ರಹದಲ್ಲಿ ಭಾಗಿಗಳಾಗಿದ್ದರು. 'ಜನಜೀವನ' 'ಭಕ್ತಿರಹಸ್ಯ' ಎಂಬ ನಾಟಕಗಳನ್ನೂ 'ಸ್ವಾರ್ಥ ತ್ಯಾಗ' 'ದಧೀಚಿ' ಎಂಬ ಚಿಕ್ಕ ಕತೆಗಳನ್ನೂ ಬರೆದಿದ್ದಾರೆ.

ಕಾದಂಬರಿ ರೀತಿಯ ವರ್ಣನೆ, ಭಾಷಣಗಳು ಅಲ್ಲಲ್ಲಿ ತಲೆ ಹಾಕುವುದರಿಂದ ಒಮ್ಮೊಮ್ಮೆ ಇವರ ಚಿಕ್ಕ ಕತೆಗಳು ಕಾದಂಬರಿಗಳೋ ಎನಿಸಿಬಿಡುತ್ತವೆ. ಅವಕ್ಕೆ ಬದಲಾಗಿ ಸಂಭಾಷಣೆಗಳು ಇದ್ದಿದ್ದರೆ ಸುಂದರವಾಗುತಿದ್ದವು ಎನ್ನಿಸುವುದು. ಆದರೆ ಕತೆಯನ್ನು ಹೇಳುವ ರೀತಿ, ವ್ಯಂಗ್ಯವಾದ ಮೃದುಹಾಸ್ಯ, ವರ್ಣನೆಯ ಮಾಧುರ್ಯ, ವಸ್ತುಪ್ರತಿಪಾದನ ಇವು ಮನಸೆಳೆದು ಉದ್ದಿಷ್ಟವಾದ ರಸವನ್ನು ಮನಸ್ಸಿನಲ್ಲಿ ಮೂಡಿಸುತ್ತವೆ.

# ಕಣ್ಣೀರು

ಸಿಂಪೀ ಲಿಂಗಣ್ಣನವರು

೧

ಅಬ್ಬಬ್ಬಾ! ಏನು ಆ ಬಿಸಿಲು—ಏನು ಆ ಉರಿ! ಉರಿಯೆಂದರೆ ಆ ಬೇಸಿಗೆಯ ಮಧ್ಯಾಹ್ನದ ಬಿಸಿಲೇ ಮೈಗೊಂಡು ಉರಿಯಲಗಿನಂತೆ ಹೊಳೆಯುತ್ತಿತ್ತು. ಝುಳಪಿಸುತ್ತ ಮುಗಿಲ ಮನೆಗೆ ತಿವಿಯುವ ಆ ಮೊನೆಯಾದ ಜ್ವಾಲೆಗಳೆಂಥವು! ಇಪ್ಪತ್ತು ಮಾರು ದೂರ ನಿಂತರೂ ಕಡಿದು ಹಾರಿಬರುವ ಆ ಜ್ವಾಲೆಯ ಶಿಖೆಗಳೇನು! ಅದನ್ನಾರಿಸಲಿಕ್ಕೆ ನೆರೆದ ಸಾವಿರಾರು ಜನರ ದಟ್ಟಣೆ ಎಷ್ಟು!! ಉಣ್ಣುವ ಹೊತ್ತು ಆದರೂ ಉಣ್ಣದೇ ಕೈಯಲ್ಲೊಂದು ಕೊಡ, ಹರಿವೆ, ಪಾತ್ರೆ ಇದ್ದವನ್ನೆಲ್ಲಾ ನೀರುಸಹಿತ ಎತ್ತಿತಂದು, ಸುಡುವ ಹುಡಿ ನೆಲದಲ್ಲಿ ಓಡಾಡಿ ನೀರೆರಚುವ ಆ ಜನರ ಎಸರಿಲ್ಲದ ಮುಖ, ಇಷ್ಟು ಜನರ ಗದ್ದಲವಿದ್ದರೂ ಶಾಂತರೀತಿಯಿಂದ ಕೆಲಸ ತೆಗೆದುಕೊಳ್ಳುತ್ತಿರುವ ಆ ಹಳ್ಳಿಯ ಗೌಡನ ಧೈರ್ಯಪೂರ್ವಕವಾದ ಓಡಾಟ, ಇಷ್ಟು ನೋಡಿದ ಕಣ್ಣುಗಳು ಬವಳಿಕೆಯ ಬೇನೆಗೀಡಾಗಬೇಕು! ಎದೆಹಾರಿಕೆ ಒಡೆಯುವಷ್ಟು ಒತ್ತರವಾಗಬೇಕು! ಅಂಥಾ ಉರಿಯೆಲ್ಲಾ ಆರಿ ನೆಲಕ್ಕುದುರಿದ ಆ ಹುಲ್ಲುಬೂದಿಯಲ್ಲಿ ಹೆಣವು ಸಿಕ್ಕಿದ್ದನ್ನೂ, ಅದು ಹದಿನಾರು ವಯಸ್ಸಿನ ತರಳನದೆಂಬದನ್ನೂ ಕಣ್ಣಾರೆ ಕಂಡವರು ಕುಳಿತಕುಳಿತಲ್ಲೇ ಕೈಕಾಲೊಳಗಿನ ಜೀವ ಕಳಕೊಂಡರು. 'ಕರುಣಾಕರ, ದೀನದಯಾಳು, ಅಲ್ಲಾ ಹೋ ಅಕ್ಬರ್' ಅನ್ನುವವರಿಗೆಲ್ಲಾ ಅಂದು ಅನಿಸಿಬಿಟ್ಟಿತು—ದೇವರು ಕ್ರೂರತನದ ಕಣಿ; ಮನುಷ್ಯನ ಅಮಾನುಷ ವೃತ್ತಿಗಿಂತ ದೇವನ ಕಟುಕತನವು ತಿರಸ್ಕರಣೀಯವೆಂದು. ಕಿಟ್ಟನ ಗೊಂಬೆಗಳು ಎಲ್ಲಾ ಒಂದೇ ತೆರನಾಗಿ ಮಾಡಲ್ಪಟ್ಟಿದ್ದರೂ ಅವು ಒಡೆದು ಹಾಳಾಗುವುದು ಅನೇಕ ವಿಧ. ಯಾವ ಗೊಂಬೆಗೆ ಯಾವ ತರದ ಕೊನೆಯು ಪ್ರಾಪ್ತವಾಗುವುದೋ ಹೇಳಲಿಕ್ಕಾಗದೆಂಬ ತತ್ತ್ವಜ್ಞಾನವೂ ಅನೇಕರಿಗೆ ಹೊಳೆಯಿತು. ಜುಲಪಿದಲೆಯ ಮಾಟಗಾರರೂ, ತಿಳುವಂಗಿಯ ರಸಿಕರೂ, ಲೋಲಾಪ್ರಿಯರಾದ ಲೋಕಮಾನ್ಯರೂ ಅಂದು ತಿಳಕೊಂಡರು—ನಾವೂ ಒಮ್ಮೆ ಸತ್ತು ಮಣ್ಣುಗೂಡಿ ಹೋಗುವೆವೆಂದು. ಎಷ್ಟೋ ಹೆಣ್ಮಕ್ಕಳ ಒಡೆದೆದೆಯನ್ನು

ಹೊಂದಿಸಲಿಕ್ಕೆ ಎಷ್ಟೋ ಉಪಚಾರ ಮಾಡಬೇಕಾಯ್ತು. ಅಂದು ನೀರು ಸುರಿಸದ ಬರಡು ಕಣ್ಣುಗಳು ಆ ಊರಲ್ಲಿ ಇರಲೇ ಇಲ್ಲ. ಈ ಸುದ್ದಿ ಕೇಳಿದವರ ಕಣ್ಣುಗಳೇ ಬಿಡುವಿಲ್ಲದೆ ಬೇಕಾದಷ್ಟು ಒಸರುತ್ತಿರುವಾಗ ಆ ಊರಲ್ಲಿದ್ದು ಕಂಡವರ ಗೋಳು ಕಡೆಗಿರಲಿ ಅನಕಾ.

೨

ನಾಗೂರೊಂದು ದೊಡ್ಡ ಹಳ್ಳಿ. ಸಾಧಾರಣ ಉದ್ದಿಮೆದಾರರ ಊರೇ. ಎಂಥ ಕಾಲುಹಾರಿದ ಸಂಸಾರಿಕ ಬಂದರೂ ಆ ಊರಲ್ಲಿ ಹೊಟ್ಟೆಗೂ ಬಟ್ಟೆಗೂ ಸಿಗುತ್ತಿತ್ತು. ಅಂದರೆ ದಾನಧರ್ಮದ ಪ್ರಸ್ತವೇ ಅಷ್ಟು ಬೆಳದಿತ್ತೆಂದು ಯಾರೂ ತಿಳಿಯಬಾರದು. ಸಣ್ಣ ಪುಟ್ಟ ಕೂಲಿಕುಂಬಳಿಗಳೇ ಅಷ್ಟು ಇರುತ್ತಿದ್ದವಲ್ಲಿ.

ಆ ಊರಲ್ಲಿ ದಾನಮ್ಮನೆಂಬ ಒಬ್ಬ ವಿಧವೆ. ಗಂಡನು ಹೆಂಡತಿಗಾಗಿ ಬೆಳ್ಳಿಬಂಗಾರ, ಹೊಲಮನೆಗಳನ್ನೇನೂ ಗಳಿಸಿ ಇಟ್ಟಿರದಿದ್ದರೂ ಆರು ಮಕ್ಕಳ ರತ್ನಮಾಲೆಯನ್ನಾದರೂ ಕೊರಳಿಗಿಡಿಸಿ, ತಾನು ನಿಶ್ಚಿಂತೆಯಿಂದ ಪರಲೋಕದ ಹಾದಿಯನ್ನು ಹಿಡಿದು ಹೋಗಿದ್ದ. ದಾನಮ್ಮನು ತನ್ನ ಹೊಟ್ಟೆಗೂ ಮಕ್ಕಳ ಸಂರಕ್ಷಣೆಗೂ ಕೂಲಿಕುಂಬಳಿ ಮಾಡದೆ ಗತ್ಯಂತರವೇ ಇಲ್ಲ. ಅವಳ ಜಾತಿಯಲ್ಲಿ ಉಡಿಕೆಯ (ಪುನರ್ವಿವಾಹ) ಪದ್ಧತಿಯಿದ್ದರೂ ಈಕೆಯನ್ನು ಯಾರು ಮಾಡಿಕೊಂಡಾರು? ಇವಳೊಬ್ಬಳೇ ಇದ್ದರೆ ಮರುದಿನವೇ ಸೌಭಾಗ್ಯವತಿಯಾಗಿರಬಹುದಾಗಿತ್ತು. ಆದರೆ ಆಕೆಯ ಉಡಿಯಲ್ಲಿ ಆರು ಗಂಡುಗಳು ಬೇರೆ ಬಿದ್ದುಕೊಂಡಿದ್ದವಲ್ಲವೇ? ಆಕೆಯ ಹೆಣ್ಣೂಲಿಯಿಂದ ಏಳು ಜೀವಗಳ ಪೋಷಣೆ ಹೇಗೆ ಆಗಬೇಕು? ಒಮ್ಮೊಮ್ಮೆ ಬೇಜಾರಪಟ್ಟರೂ ಉಪಾಯವೇನು? ಇಚ್ಛೆಯಿರಲಿ—ಇಲ್ಲದಿರಲಿ, ಉಡಿಕೆಯ ಆಶೆಯನ್ನಂತೂ ಬದಿಗಿರಿಸಲೇ ಬೇಕಲ್ಲಾ! ಬೇಸತ್ತು ಮನಸ್ಸು ಮುದುಡಿದಾಗ ಗಳಿಗೆ ಹೊತ್ತು, ತನ್ನಲ್ಲಿ ತಾನೆ ದುಃಖ ದೆಣಿಕೆಯಿಂದ ಮನಸಿನ ಮಾಪನ್ನು ಅಳೆದಳೆದು ಬರುಕುವಳು. ಅಳೆಯುವುದಾದರೂ ಎಷ್ಟು ಹೊತ್ತು? ಹೀ––ಗೆ ಕತ್ತಲೆಯು ಹರಿದಾಗ ಬೆಳಕಿನ ಚಿಹ್ನಗಳೂ ಆಕೆಗೆ ತೋರದಿರುತಿರಲಿಲ್ಲ. ಆರು ಮಕ್ಕಳಲ್ಲಿ ನಾಲ್ವರು ಗಂಡು ಮಕ್ಕಳು ನಾಳೆ ದುಡಿಯುವವರಾದ ಮೇಲೆ, ತನ್ನ ಸುಖಕ್ಕೇನು ಕೊರತೆ? ಹುಲಿಯಂಥ ಮಕ್ಕಳು ನನ್ನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರೆಸಿಯಾರು ದೊಡ್ಡವರಾದ ಮೇಲೆ. ಈ ವಿಚಾರ ಬಂದಾಗ ಮಕ್ಕಳೆಲ್ಲ ಮಲಗಿರಲಿ,

ಕಗ್ಗತ್ತಲೆಯ ದಟ್ಟಕಾಡಿಗೆಯೇ ಎಲ್ಲಾ ಕಡೆಗೂ ತೂರಿರಲಿ, ಆ ತಟ್ಟನೆ ಕೈಗೆ ಬಂದ ಮಗುವನ್ನು ಮಗ್ಗುಲಲ್ಲಿ ಎಳಕೊಂಡು, 'ಲೊಟಲೊಟ' ಮುದ್ದು ಕೊಡುವಳು. ಅಳುವ—ಹಟಮಾಡುವ ಕಾಟವೂ, ಅವುಗಳ ಹೊಟ್ಟೆಬಟ್ಟೆಗೆ ದುಡಿಯುವ ಶ್ರಮವೂ ಆಗ ಎಲ್ಲಿ ಮಾಯವಾಗಿ ಹೋಗುವವೋ ಯಾರು ಬಲ್ಲರು? ಆರುಮಕ್ಕಳ ಹಾವಳಿ ಎದ್ದಾಗ,—ಅವುಗಳ ಬೇನೆ ಬೇಸರಿಕೆಯಲ್ಲಿ—, ಹಬ್ಬ ಹುಣ್ಣಿವೆ ಬಂದು ಹೊಸ ಅಂಗಿ- ಹೋಳಿಗೆಗಳನ್ನು ಬೇಡಿದಾಗ ಒಮ್ಮೊಮ್ಮೆ ಗಂಡನನ್ನು ಬಯ್ದೂ ಬಿಡುವಳು. ಹಡೆದವರು ಇಬ್ಬರು, ಆದರೆ ಅಷ್ಟೆಲ್ಲಾ ಕಾಟ ತನಗೊಬ್ಬಳ ಕೊರಳಿಗೇ ತೊಡಕಿಸಿ ಹೋಗಬೇಕೇ ಆ ಕಟುಕ? ಗಂಡನ ಸಲುವಾಗಿ ತಾನು ಅದೆಷ್ಟೋ ಅಳುವಳಾದರೂ, ಮಕ್ಕಳೂ ತಂದೆಯ ನೆನವು ತೆಗೆದು ತನ್ನೊಡನೆ ಆಳಹತ್ತಿದರೆ ಈಕೆ ರಂಬಿಸುವ ಬಗೆಯೇ ಬೇರೆ.— "ನಮ್ಮನ್ನೆಲ್ಲಾ ಬಿಟ್ಟುಹೋದ ಆತನ ನೆನಪನ್ನೇ ತೆಗೆಯೋಣ ಬೇಡ ನಾವು ಯಾರೂ" ಎನ್ನುವಳು.

ಆಕೆಯ ಮಕ್ಕಳಲ್ಲಿ 'ನಂಜುಂಡ' ಹಿರೇ ಮಗ. ವಯಸ್ಸು ಎಂಟು—ಒಂಬತ್ತು ಇದ್ದರೂ ಬಡವರ ತಕ್ಕ ಮಗು. ಅವ್ವ ಹೊಟ್ಟೆಯ ಪಾಡಿಗಾಗಿ ಹೊಲದ ಕೆಲಸಕ್ಕೆ ಹೋದರೆ ಅಯ್ವರೂ "ತಮ್ಮ-ತಂಗಿ"ಯರನ್ನು ಆಡಿಸು ವನು; ಅತ್ತರೆ ಎತ್ತಿಕೊಳ್ಳುವನು; ಹಸಿದರೆ ಉಣ್ಣಿಸುವನು; ಹಾಸುವನು; ಹೊಚ್ಚುವನು; ಮಲಗಿಸುವನು; ಮೈ ತೊಳೆಯುವನು; ಅಂಗಿ ತೊಡಿಸುವನು. ಇಷ್ಟೆಲ್ಲಾ ಮಾಡಿ ಶಾಲೆಗೆ ಹೋಗುತ್ತಿದ್ದ. ಮನೆಯ ಕೆಲಸದಲ್ಲಿ ಅದೆಷ್ಟು ಜಾಗರೂಕನೋ ಅಷ್ಟೇ ಶಾಲೆಯಲ್ಲಿಯೂ. ಮೊದಲನೆ ನಂಬರು ಎಂದೂ ಬಿಟ್ಟಿಲ್ಲ. ಮಾಸ್ತರರು ಒಮ್ಮೆ ಹೇಳಿಕೊಟ್ಟರೆ ಎಂದೂ ಮರೆಯನು. ತನ್ನ ವರ್ಗದ ಹುಡುಗ ರಿಗೆ ಆತ ಒಬ್ಬ ಮಾಸ್ತರನೇ ಸರಿ. ಅಭ್ಯಾಸ ಹೇಳುವುದು, ಓದಿಸಿಕೊಳ್ಳುವುದು, ಕಠಿಣಲೆಕ್ಕಗಳನ್ನು ದೃಷ್ಟಿಮಣಿಗಳಿಗೆ ತಿಳಿಸಿಕೊಡುವುದು ಇತ್ಯಾದಿ ಕೆಲಸ ಗಳಿಂದ ಮಾಸ್ತರರಿಗೂ, ಹುಡುಗರಿಗೂ ಕೂಡಿಯೇ ಪ್ರಿಯನಾಗಿದ್ದನು.

ಬಡತನ, ಮೈತುಂಬಾ ಕೆಲಸ, ಸ್ವಲ್ಪವಾದರೂ ಬುದ್ಧಿಯ ಬಂಡವಲು ಇವಿಷ್ಟಿದ್ದರೆ ಮನುಷ್ಯನು ತಪ್ಪುದಾರಿ ಹಿಡಿಯಲಿಕ್ಕೆ ಬಹಳ ಆತಂಕವುಂಟಾ ಗುತ್ತದೆ. ಕೈಯಲ್ಲಿ ಕಾಸಿದ್ದರೆ ಹುಡುಗರು ಕೋತಿಯಂತೆ ಕಟ್ಟಾಣಿಯನ್ನೂ ಹುಡಿಗೂಡಿಸುವರು. ಕೆಲಸಗೇಡಿಗಳು ಕಾಲುಬಿಟ್ಟ ಕತ್ತೆಯಂತೆ ತಿರುಗುವು

ದರಲ್ಲಿ ಸಂಶಯವೇನು? ಹೊಟಗೇಡಿಯ ಮುಂದೆ ಹುಲ್ಲು ಹಾಕಿದರೆ, ಗೂಟ ಕಿತ್ತಿಕೊಂಡು ಇದಿರಿಗೆ ಬರುವುದೆಂದು ಹೇಳುವರಲ್ಲಾ! ಕೈಯಲ್ಲಿ ದುಡ್ಡು, ಸಿಕ್ಕಲ್ಲಿ ತಿರುಗುವ ಬಿಡುವು ಸಿಕ್ಕರೆ ಅವಗುಣಗಳ ಸುಂಟರಗಾಳಿಯಲ್ಲಿ ಸಿಕ್ಕು ಬೀಳುವುದುಂಟು. ಅದರಲ್ಲಿ ಬುದ್ಧಿಹೀನ ಮನಸ್ಸು. 'ಮನವೆಂಬ ಮರ್ಕಟ' ಮೊದಲೇ! ಕೇಳುವದೇನು? ನಂಜನಿಗೆ ಈ ಯಾವ ಖೊಟ್ಟಿಸುಳಿಗಳಿರಲಿಲ್ಲವೆನ್ನ ಬೇಕು. ಅಂತೇ ಆತ ಸದ್ಗುಣಸಂಪನ್ನ. ಇವನಲ್ಲಿ ಸೇರಿಕೊಳ್ಳಲಿಕ್ಕೆ ಬಂದ ದುರ್ಗುಣಗಳೆಲ್ಲಾ ರಿಝರ್ವ್ ತಿಕೀಟಿನ ಸದ್ಗುಣಗಳನ್ನು ಕಂಡು ಹೊರಗಿನಿಂದ ಹೊರಗೇ ಮರಳುವವು ಈತನ ಸಮೀಪ ಇಂಥ ಭೂತವೇತಾಳಗಳು ಸುಳಿ ಯಬಾರದೆಂದೋ ಏನೋ—**'ನಂಜುಂಡ'** ಎಂದು ಹೆಸರಿಟ್ಟದ್ದು;—ಕೇರು ಬಜಿ ಕಟ್ಟಿದಂತೆ.

೩

೧೯೩೪ಳನೇ ಇಸವಿಯ ಆರಂಭ. ಜಿಲ್ಲೆಯಂತ ಜಿಲ್ಲೆಯೆಲ್ಲಾ ಪ್ಲೇಗ ರಾಜನ ಹಾವಳಿ. ಬೇಕಾದ ಮನೆ ಹೊಕ್ಕು ಯಾರನ್ನು ನುಂಗಿ ನೀರು ಕುಡಿದರೂ ಕೇಳುವವರಾರು? ರಾಜನ ಕೆಲಸ! ಸರ್ಕಾರದ ಕಡೆಗೆ ದೂರ ಹೇಳಿದರೆ ಅವರು ಲಷ್ಕರೀ ಕಾಯ್ದೆಯನ್ನು ಸಾರಿ, ಮೈಲಿಯ ಶಸ್ತ್ರಧಾರಿಗಳ ಕಡೆಗಟ್ಟುವರು. ಅಲ್ಲಿಯೂ ಪ್ಲೇಗರಾಜನ ಮುದ್ರೆಯೇ. ಹೀಗೆ ಬೇಲಿಯೇ ಕುಳಿತು ತೋಟ ಮೇಯಲಿಕ್ಕೆ ನಿಂತರೆ ದೇವರ ಕಡೆಗೆ ಹೋಗದೆ ಗತ್ಯಂತರವೇ ಇಲ್ಲ; ಅದೂ ಇಲ್ಲದಿದ್ದರೆ ಅಡವಿಯ ಪಾಲು.

ಪ್ಲೇಗವೆಂಬುದು, ಶ್ರೀಮಂತರಿಗೆ ಸಂಪತ್ತಿನ ಸಂರಕ್ಷಣೆ ಹೇಗಾದೀತೆಂಬ ಚಿಂತೆಯ ಗಾಳಿ; ದುಡಿಕೊಂಡು ತಿನ್ನುವವರಿಗೆ ಪ್ರಾಣರಕ್ಷಣೆ ಆಗುವ ಬಗೆ ಹೇಗೆಂದು ಕೊರೆಯುವ ಚೂರಿ; ಸೋಟಪಟಿಂಗರಿಗೆ ಅದೊಂದು ಸುಗ್ಗಿ—ದೇವರಾಯನ ಕರುಣೆ. ಅಂತೂ ಬಂತು ನಾಗೂರಿಗೂ ಪಾಳಿ. ಜನರೆಲ್ಲಾ ತಂತಮ್ಮ ಶಕ್ತ್ಯನುಸಾರ ಗುಡಿಸಲು ಕಟ್ಟಿಕೊಂಡು ಬೈಲಿಗೆ ಬಂದು ನಿಂತರು. ದಾನಮ್ಮನೂ ಒಂದು ಕಣಿಕೆಯ ಗೂಡು ಕಟ್ಟಿಕೊಂಡು ತನ್ನ ಮರಿಗಳನ್ನ ಲ್ಲಿಟ್ಟು ಸಲಹಹತ್ತಿದಳು.

ನಮ್ಮಲ್ಲಿ ಆಪ್ತತ್ವವಿಲ್ಲದಿದ್ದರೂ ಹತ್ತುಗಡೆ ಹೆಚ್ಚು ಒಮ್ಮೊಮ್ಮೆ. ಇಷ್ಟು ಜಾತಿ—ಇಷ್ಟು ಮೋತಿಗಳಲ್ಲಿ ಪರಸ್ಪರ ಸಹಾನುಭೂತಿ-ಪ್ರೀತಿಗಳಿರದಿದ್ದರೂ

ನಿರ್ಜೀವ ಗುಡಿಸಲುಗಳಲ್ಲಿ ಪರಸ್ಪರ ಪ್ರೇಮೋದಯವಾಗಿ ಬಿಟ್ಟಂತೆ, ಒಂದಕ್ಕೊಂದು ಹತ್ತಿದ ಗುಡಿಸಲುಗಳು ಬಿನ್ ಇಯತ್ತೆಯ ಹುಡುಗರು ಡ್ರಿಲ್‌ಗೆ ನಿಂತಂತೆ ನಿಂತವು.

ನೆರೆಹೊರೆಯ ಹಳ್ಳಿಗಳಲ್ಲಿ ಪ್ಲೇಗರಾಜನ ಕ್ರೌರ್ಯದ ಕತೆಗಳನ್ನು ಕೇಳಿದ ನಾಗೂರಿನ ಜನರು ಇಲಿಗಳು ಬೀಳಹತ್ತಿದಾಗಲೆ ಪಟಪಟ ಊರು ಬಿಟ್ಟು, ಅಡವೀ ಸೇರಿದ್ದರಿಂದ ಊರ ಗೌಡನು 'ಜನನ ಮರಣ ಪತ್ರಿಕೆ'ಯಲ್ಲಿ ಬರೀ ಜನನದ ಲೆಕ್ಕವನ್ನೇ ಬರಕೊಂಡು ಬರಬೇಕಾಯ್ತು. ಪ್ಲೇಗಿನಲ್ಲಿ ಮರಣ ಸಂಖ್ಯೆಯೇ ಶೂನ್ಯ. ಬರೀ ಹುಟ್ಟಿದವರು! ಕೆಲವು ದೊಡ್ಡ ಮನುಷ್ಯರು ಒಳಗೊಳಗೆ ಮಿಡುಕಿಯೂ ಬಿಟ್ಟರು. ಪ್ಲೇಗವೆಂದು ಮೋಸಹೋಗಿ ಸುಮ್ಮನೇ ಊರು ಬಿಟ್ಟು ಖರ್ಚಿಗೀಡಾದೆವಲ್ಲಾ ಎಂದೇ ಅವರ ವಿಚಾರ. ಮದುವೆಯಲ್ಲಿ ಬೀಗಬೀಗರಲ್ಲಿ ಜಗಳವಾಗುವುದೇ ಸಂಪ್ರದಾಯವಾಗಿರುವಂತೆ ಮರಣವಿಲ್ಲದ ಪ್ಲೇಗದಿಂದೇನು ಪ್ರಯೋಜನ? ನೂರು ಬಿದ್ದು ನೂರಾರು ಸತ್ತಿದ್ದರೆ ಸೊಗಸಿತ್ತು!—ಅರಿವೆಯಂಗಡಿಯವರಿಗೆ. ಅಲ್ಲದೆ, ಮತ್ತೆ ಆ ಪಾಳಿ ತಮಗೆ ಬಂದಿದ್ದರೆ? ಅಡವಿಗೆ ಬಂದವರೆಲ್ಲಾ ಸುಖರೂಪದಿಂದ ಮನೆ ಸೇರುವೆವಲ್ಲಾ ಎಂಬ ಹಿಗ್ಗೂ ಬಹು ಜನರಿಗಿತ್ತು.

ಇನ್ನೆಂಟು ದಿನಕ್ಕೆ ಈ ವನವಾಸವು ತೀರುವುದಿತ್ತು. ಮಾರಿಯ ಬಾಯಿಂದುಳಿದ ಜನರೆಲ್ಲಾ ಸೇರಿ ಕಾಳುಬೆಲ್ಲ ಕೂಡಿಸಿ, ಸಮಾರಂಭವೊಂದು ಹೂಡಿದರು. ನುಂಗದೆ ಬಿಟ್ಟು ಕರುಣೆ ತೋರಿಸಿದ ಮರಗವ್ವನಿಗೆ ನೈವೇದ್ಯ ಬೇಡವೇ? ನೀಲಕಂಠೇಶ್ವರ ಗುಡಿಯೊಂದರಲ್ಲಿ ಅಡಿಗೆ ಮಾಡಿಸಿ, ಆ ಭಾಗದ ಗುಡಿಸಲಿನವರಿಗೆಲ್ಲಾ ಊಟಕ್ಕೆ ಹೇಳಿದರು.

ದಾನವ್ವ ಎಂದಿನಂತೆ ತನ್ನ ಹೊಲದ ಕೂಲಿಗೆ ಹೋಗಿದ್ದಳು. ಮಕ್ಕಳ ಮಾಲೆಯು ನಂಜನ ಕೊರಳಿಗೆ. ಈವೊತ್ತು ಊಟಕ್ಕೆ ಹೇಳಿದ್ದರಿಂದ ದಾನವ್ವ ರೊಟ್ಟಿ ಸಹ ಮಾಡಿದ್ದಿಲ್ಲ. ಇದ್ದ ತಂಗುಳ ರೊಟ್ಟಿಯಲ್ಲಿ ಎರಡು ಮಕ್ಕಳಿಗಿಟ್ಟು ತಾನೊಂದು ಸುತ್ತಿಕೊಂಡು ಒಯ್ದಿದ್ದಳು. ನಂಜುಂಡ ಹುಡುಗರೊಡನೆ ಮೊದಲನೇ ಊಟವನ್ನು ಮನೆಯಲ್ಲಿ ಮುಗಿಸಿ, ಇನ್ನೆಂಟು ದಿನಕ್ಕೆ ಶಾಲೆಯ ಅಭ್ಯಾಸ ಪ್ರಾರಂಭವಾಗುವದಲ್ಲಾ ಎಂದುಕೊಂಡು ಗಂಟನೊಳಗಿನ ಪುಸ್ತಕ ತೆಗೆದು ಧೂಳು ಜಾಡಿಸಿ ಓದುತ್ತ ಕುಳಿತ. ಹುಡುಗರೆಲ್ಲಾ ಅಲ್ಲಿ-ಇಲ್ಲಿ

ಆಡುತ್ತ ಹೋದರು. ಉಂಡು ಓದುತ್ತ ಕುಳ್ಳಿರುವದೆಂದರೆ, ನಿದ್ರೆಯ ಔಷಧಿ ಕುಡಿದಂತೆಯೇ. ನಿದ್ದೆ ಬರಲು ಅಲ್ಲಿಯದಲ್ಲೇ ಮಲಗಿದ ಆ ನಂಜ.

* * * * * *

ಆರು ತಾಸು. ಹೊಲಗೆಲಸ ಮಾಡಿಕೊಂಡು ಬಂದವರೂ, ಊರೊಳಗಿನ ನೇಕಾರ ಮುಂತಾದವರೂ ಜಳಕಮಾಡುವ ಹೊತ್ತು. ಹಳ್ಳದಲ್ಲಿ ನೆರೆದ ಜನರಿಗದೊಂದು ಉಲ್ಲಾಸ. ಗುಡಿಯಲ್ಲಿ ನೆರೆದ ಕಾರುಭಾರಿಗಳಿಗೊಂದು ಸೊಗಸು. ಖಟಪಿಟ ಮಾಡಿ, ಜನರಿಗೆಲ್ಲಾ ಪ್ರಸಾದಲಾಭ ಮಾಡಿಕೊಟ್ಟೆವೆಂದು ಹೆಮ್ಮೆಯಿಂದ ವೇದಮೂರ್ತಿ—ರಾಚಯ್ಯನವರು ಗುಡಿಯ ಪಾವಟಿಗೆಯ ಮೇಲೆ, ಕಾಲ ಮೇಲೆ ಕಾಲು ಹಾಕಿ ಕುಳಿತು ತಮ್ಮ ಕೈಗುಣವನ್ನು ಹೊಗಳಿಕೊಳ್ಳುತ್ತಿದ್ದರು. ಭಕ್ತಜನರೂ ಹಿಂದೆ ಕೈ ಕಟ್ಟಿಕೊಂಡು ಸುತ್ತಲು ನೆರೆದು ನಿಂತು, ಕೇಳಿ ತಮ್ಮ ಗುರುವರ್ಯರ ಪೌರುಷಕ್ಕೆ ತಲೆದೂಗುತ್ತಿದ್ದರು. ಆಗ ನಿಂತವರು ನಿಂತಲ್ಲೇ ಬೆಚ್ಚಿಬಿದ್ದರು! ಬೊಬ್ಬೆ! ಬೊಬ್ಬೆಯ ಮೇಲೆ ಬೊಬ್ಬೆ!! ಹೊರಳಿ ನೋಡಿದರೆ ಗುಡಿಸಲ ಗುಂಪಿನೊಳಗಿಂದ ಒತ್ತರಿಸಿ ಹೊಗೆ ಯೇಳುತ್ತಿದೆ! ಹಳ್ಳದೊಳಗಿನ ಜನರು ಹಸಿಯರಿವೆ ಉಟ್ಟುಕೊಂಡೇ ಕೊಡ ಹೊತ್ತು—ಹೊತ್ತುಕೊಂಡು ಓಡುತ್ತಿದ್ದಾರೆ! ಗುಡಿಸಲಿಗೆ ಬೆಂಕಿ ಬಿದ್ದಿದೆ. ಜನರೆಲ್ಲಾ ಓಡಿ ಓಡಿ ಬಂದರು, ನೀರು ತಂದರು. ಗೌಡ ಬಂದು—'ಪಾಪಿ ದಾನಮ್ಮನ ಕಾಳುಕಡ್ಡಿಯ ಗಂಟನ್ನಾದರೂ ಹೊರಗೆಳಕೊಳ್ಳಿರೋ' ಎಂದು ಕೂಗಿದ. ಅಷ್ಟರಲ್ಲಿ ಎಲ್ಲಾ ಸುಟ್ಟು, ಹೊಂದಿದ ನಾಲ್ಕಾರು ಗುಡಿಸಲುಗಳಿಗೆ ಕೊಳ್ಳಿ ಬಿದ್ದುದನ್ನು ಜನರು ನೋಡುತ್ತಿದ್ದರು. ಹಾಗೇ ನನ್ನದು—ಪರರದು ಎಂಬ ಭೇದವಿಲ್ಲದೆ ಹೌಹಾರಿ ಜನರು ಉರಿಗೆ ನೀರೆರಚುತ್ತಿದ್ದರು. ಈ ಗುದುಮುರಿಗೆ ಅರ್ಧ ತಾಸಿನಲ್ಲಿಯೆ ಕೊನೆಗಂಡಿತಾದರೂ ಒಂಬತ್ತು ಗುಡಿಸಲುಗಳು ಬೂದಿಯಾಗಿ ಮಣ್ಣುಗೂಡಿಬಿಟ್ಟಿದ್ದವು. ಮುಗಿಯುವ ಹೊತ್ತಿಗೆ ನೆರೆದ ಜನ ಏಳೆಂಟು ನೂರಕ್ಕೆ ಮಿಕ್ಕಿತ್ತು. 'ಕಾಯ'ದವರಾದ ಗಂಡಸರ ಕಾಯಕಷ್ಟವು ಮುಗಿಯುವಷ್ಟರಲ್ಲಿ, 'ವಾಚೆ'ಯವರಾದ ಹೆಂಗಸರು ನೆರೆದು ತಮ್ಮ ವಾಚಾಳತನವನ್ನು ಮೊದಲು ಮಾಡಿದರು.—"ಆಯ್, ಎಳೀ ಮಕ್ಕಳೀಗಿ ಬಿಟ್ಟು ಕೂಲೀಗ್ಹೋಗ ಬೇಕೇನ ಮುದೋಡಿ?" "ದೇವರ ಹಬ್ಬ ಇಂದ. ಇಂದೂ ಬಿಡಬಾರದಾ ದಾವತೀನ್ನ? ಅದಕೇ ನೀಲಕಂಟಪ್ಪ ಸಿಟ್ಟು ಕಾರಿದ." "ಏನ್ರೇ,

ಹ್ಯಾಂಗಿದ್ರೂ ಉಳ್ಳಿಕ್ಕಿ ಹೇಳಿದ್ರು, ಹೊಟ್ಟೇ ಚಿಂತೇನಿತ್ತು ಇಕೀಗಿ,—ಹಾ ತೊರೆದು ಹೊಲಕ್ಕ ಹೋಗಲಿಕ್ಕ." ಹೀಗೆ ಹಿಂದು ಮುಂದಿನ ವಿಚಾರವಿಲ್ಲದ ತಲೆಗಳು ಬಾಯಿಯ ಗಂಟೆಯನ್ನು ಬಾರಿಸತೊಡಗಿದವು. ಆದರೆ ನೆರೆದ ಗಂಡಸರಿನ್ನೂ ಬೆಂಕಿಯಲ್ಲಿ ಸಿಕ್ಕ ಸಾಮಾನುಗಳನ್ನೆತ್ತಿ ಕಡೆಗೊಗೆಯುವುದು, ಉರಿಯುತ್ತಿದ್ದುದನ್ನು ನೊಂದಿಸುವುದು ಮುಂತಾದುದರಲ್ಲೇ ತೊಡಗಿದ್ದರು.

ಯಾರೋ ಕೂಗಿದರು—"ಗೌಡರೇ, ಹೆಣ ಇಲ್ಲಿ". ಗೌಡ ಓಡಿ ಹೋಗಿ ನೋಡುತ್ತಾನೆ—ಬೂದಿಯ ಗುಂಪಿನಲ್ಲೊಂದು ಹೆಣ! ಮುದುಡಿ ಯಾಗಿ ಬಿದ್ದಿದೆ!! ಆದರೆ ಯಾರದದು? ಅರಿವೆ ಗುರುತಿಗೂ ಇಲ್ಲ! ಮೈತೊಗಲು ಸುಟ್ಟು ಸುಲಿದಿದೆ! ಎಲುವು ಕರಕಾಗಿವೆ! ಆಗ ಎದ್ದಿತು ಜನರಲ್ಲಿ ಹಾಹಾಕಾರ! ಬೆಂಕಿ ಆರಿಸುವಾಗ ಯಾರು ಬಿದ್ದರೋ? ಯಾರ ಹೆಣವೋ? ಪ್ರತಿ ಒಂದು ಮನೆಯವರೆಲ್ಲಾ ತಂತಮ್ಮ ಜನರನ್ನು ನೋಡಿಕೊಂಡರು, ಲೆಕ್ಕಸರಿಯಾಗಿತ್ತು. ಕಡೆಗೆ, ಸತ್ತವನು ನಂಜುಂಡನೇ ನಿಜವೆಂದು ನಿರ್ಧಾರವಾಯ್ತು.

ತಾಸಿನ ಮೇಲೆ ಈ ಸುದ್ದಿ ದಾನಮ್ಮನಿಗೆ ತಿಳಿಯಲು, ಆಕೆ ಬಡ ಕೊಳ್ಳುತ್ತ ಓಡಿ ಬಂದು ಮಗನ ಮೇಲೆ ಬಿದ್ದಳು!—"ಮಗನೇ, ಪಾಪಿ-ನನ್ನ ಬಿಟ್ಟನ್ನೆಲ್ಲಿಗೆ ಹೋದೆಯೋ? ಯಾರೂ ಸಾಯದಿದ್ದ ಈ ಸಾರೆಯ ಪ್ಲೇಗಿಗೆ, ಊರವತಿಯಿಂದ ನೀನೊಬ್ಬ ಆಹುತಿಯಾದೆಯಾ?" ಎಂದು ಹಾಡಿಹಾಡಿ ಕೊಂಡು—ಬಡಬಡಕೊಂಡು ಅಳಹತ್ತಿದಳು.

ನೀಲಕಂಠ ದೇವರ ಉತ್ಸವಕ್ಕೆ ಕೂಡಿಸಿದ ವರ್ಗಣೀ ಹಣದಿಂದ ನಂಜುಂಡನ ಅಂತ್ಯವಿಧಿಯನ್ನು ಮಾಡಿ ಮುಗಿಸದೆ ಗತ್ಯಂತರವೇ ಇರಲಿಲ್ಲ. ಮಾಡಿದ ಪ್ರಸಾದವು ಹಳಸಿ ನಂಜ-ನಿವಾಳಿ ಆಯ್ತು.

ಹಗಲು, ಮಧ್ಯಾಹ್ನ, ಊರಲ್ಲೆಲ್ಲಾ ಜನರಿದ್ದು ಗುಡಿಸಲಿಗೆ ಬೆಂಕಿಹತ್ತಿ, ಏಳೆಂಟುನೂರರ ವರೆಗೆ ಜನನೆರೆದು, ಜೀವದ ಹಂಗುದೊರೆದು ಬೆಂಕಿಯನ್ನು ನೊಂದಿಸಿದವರು ಜೀವವನ್ನುಳಿಸಲಿಲ್ಲವಲ್ಲಾ! ತಾಯಿಗೆ ಆಡವಿಗಟ್ಟಿ, ಹುಡುಗ ರಿಗೆ ಆಡಲಿಕ್ಕೆ ಕಳಿಸಿ, ಓದುತ್ತ ಮಲಗಿದ ನಂಜುಂಡನಿಗೆ ನಂಜು ಉಣಿಸಿದ ವಿಧಿಯ **ಕಣ್ಣ ಸಕು** ಅಲ್ಲವೇ ಇದು?

---



## ಶ್ರೀ ಹನುಮಂತ ರಾವ್ ಮೂಂಜರೇಕರರು, ಬಿ.ಎ., ಕಾರವಾರ

ಇವರು ಒಳ್ಳೆಯ ಲೇಖಕರು, ವಿಮರ್ಶಕರು ಮತ್ತು ಕತೆಗಾರರು. ಕನ್ನಡದ ಬೆಳವಣಿಗೆಗಾಗಿ ಹೃದಯತಃ ಹೆಣಗಾಡುವವರು. ೧೯೩೧ರ ಕಾರವಾರದ ಸಾಹಿತ್ಯ ಸಮ್ಮೇಳನದ ಕಾರ್ಯದರ್ಶಿಗಳಾಗಿದ್ದರು. ಮಹಾತ್ಮಾ ಗಾಂಧಿಯವರ ಮತ್ತು ಅರವಿಂದ ಘೋಷರ ಆಧ್ಯಾತ್ಮಿಕ ಗ್ರಂಥಗಳಲ್ಲಿ ಕೆಲವನ್ನು ಭಾಷಾಂತರಿಸಿ 'ಸ್ವಬೋಧ' ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಇವರು ಮಾಡಿದ ರವೀಂದ್ರನಾಥ ಟಾಗೋರರ ಕಿರುಗತೆಗಳ ಅನುವಾದವೂ ಕಾಕಾ ಕಾಲೇಲ್ಕರರ 'ಜೀವನ ಸಾಹಿತ್ಯ'ದ ಅನುವಾದವೂ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಉತ್ತರ ಕನ್ನಡದ ಬರೆಹಗಾರರ ಪರಿಚಯಾತ್ಮಕವಾದ ಒಂದು ಚಿಕ್ಕ ಕೈಪಿಡಿಯನ್ನು ಬರೆದು ಪ್ರಕಟಿಸಿದ್ದಾರೆ.

ಕಥಾಪ್ರಪಂಚದಲ್ಲಿ ಮೂಂಜರೇಕರರ ಹೆಸರು ಹೊಸದು. ಆದರೆ ಈ ಕತೆಯನ್ನು ನೋಡಿದಲ್ಲಿ ಪಳಗಿದ ಕೈಯ ಕೃತಿಯಂತೆ ಕಾಣುವುದು. ವಿಷಯಗಳನ್ನು ಮಿತ ಶಬ್ದಗಳಿಂದ ಚೊಕ್ಕವಾಗಿ ಹೇಳಿ ಮುಗಿಸುತ್ತಾರೆ. ಕೇಂದ್ರ ಪೋಷಕವಲ್ಲದ ವಿಚಾರಗಳು ಎಲ್ಲಿಯೂ ನುಸುಳುವುದಿಲ್ಲ. ಬಿಚ್ಚಿ ಹೇಳುವುದಕ್ಕಿಂತ ಮುಚ್ಚಿ ಹೇಳುವುದೇ ಲೇಸೆಂಬ ತತ್ವವನ್ನು ಅನುಸರಿಸಿರುವುದರಿಂದ ಕಥಾಲೇಖನದ ಕಲೆಗೆ ಎಲ್ಲಿಯೂ ಭಂಗ ಬಂದಿಲ್ಲ.

# ಹೊಸ ಹೊಸ....

ಹನುಮಂತರಾವ್ ಮಾಂಜರೇಕರರು

ಕಣ್ತೆರೆದು ತಿಳಿಯಿತಾ ಪಾಪಿಗಂದು:
ಪಾಪಕ್ಕೆ ಮೇರೆಯೊಂದಿರುವುದೆಂದು
ಪಾಪವನು ಶಿಕ್ಷಿಸುವನಿರುವನೆಂದು
ಶಿಕ್ಷೆ ತಪ್ಪದು ಗೈದ ಕರ್ಮಕೆಂದು.

—ವಿ. ಸೀ.

೧

ವಾಣೀವಿಲಾಸ ಕಾಲೇಜು,
೧೭—೯— '೩೧.

ಶ್ರೀ. ಕಾಮಾಕ್ಷನಿಗೆ—

ಅನೇಕ ವಂದನೆಗಳು. ನಿನ್ನ ಇತ್ತೀಚೆಯ ನಡೆವಳಿಕೆಯನ್ನು ನೋಡಿದರೆ ಮನಸ್ಸು ಬೇಸರಗೊಳ್ಳುತ್ತದೆ. ಕೈಯಲ್ಲಿ ಹಣದ ಅಡಚಣೆಯೆಂದು ವಾಸಂತಿಯನ್ನು ತವರುಮನೆಗೆ ಕಳಿಸಿಕೊಟ್ಟು, ಈಗ ಹತ್ತು ತಿಂಗಳುಗಳಾದರೂ ನೀನು ಅವಳನ್ನು ಹಿಂದಕ್ಕೆ ಕರೆದುಕೊಳ್ಳುವುದಿಲ್ಲವಂತೆ! ಇದರ ಅರ್ಥವೇನು? ನೀನು ಮೊದಲಿನಂತೆಯೇ ಈಗಲೂ ಭ್ರಮರವೃತ್ತಿಯಲ್ಲಿಯೇ ಮೋದಗೊಳ್ಳುವುದಾದರೆ, ಅವಳನ್ನು ಮದುವೆಯಾದದ್ದಾದರೂ ಏತಕ್ಕೆ?

ಆ ವಾಸಂತಿಯು ಮಾಡಿದ ಅಪರಾಧವೇನು? ನೀವು ಪ್ರೇಮವಿವಾಹದಿಂದಲೇ ಬದ್ಧರಾದವರಲ್ಲವೇ? ವಧೂಪರೀಕ್ಷೆಗೆಂದು ನೀನು ಎಷ್ಟು ಸಲ ಬಂದೆಯೋ? ಎಷ್ಟು ವಿಧವಾಗಿ ಪರೀಕ್ಷಿಸಿದೆಯೋ ಅವಳನ್ನು? ಈಗ ಎರಡು ವರುಷಗಳ ನಂತರ—"ಅವಳು ನನಗೆ ಯೋಗ್ಯಳಾದ ಹೆಂಡತಿಯಲ್ಲ; ಅವಳಿಗೆ ಹಿಸ್ಟೀರಿಯಾ ಅದೆ. ಇತ್ಯಾದಿ" ಹೇಳಿ, ನೀನು ಅವಳನ್ನು ಬಿಟ್ಟುಕೊಡುವ ವಿಚಾರ ಮಾಡುವುದೆಂದರೇನು? ಇಷ್ಟೆಲ್ಲ ಜ್ಞಾನೋದಯ(?)ವಾಗಲಿಕ್ಕೆ ನಿನಗೆ ಅವಳ ಸಹವಾಸವೂ ಬೇಕಾಯಿತಲ್ಲವೆ? ನಿನ್ನಲ್ಲಿ ಯಾವ ಕುಂದೂ ಇಲ್ಲವೆಂದು ನೀನು ಧೈರ್ಯವಾಗಿ ಹೇಳಬಲ್ಲೆಯಾ? ಯಾರಿಗೂ ಕಾಣಬಾರದೆಂದು ಬೆಕ್ಕು ಕಣ್ಮುಚ್ಚಿ ಹಾಲು ಕುಡಿಯುತ್ತದಂತೆ!

ನಿನ್ನ ಸಹವಾಸದ ಈ ಅವಧಿಯಲ್ಲಿ ಅವಳು ಸೊರಗಿ ಎಷ್ಟು ಬಡಕಾಗಿದ್ದಾಳೆ! ಪಾಪ! ಇದರ ಇಂಗಿತವನ್ನು ನಾನೇನೂ ಬಿಚ್ಚಿ ಹೇಳಬೇಕಾಗಿಲ್ಲ.

ಒಬ್ಬನು ಮಾಡಿದ ಪಾಪದ ಫಲವನ್ನು ಇನ್ನೊಬ್ಬನು ಉಣ್ಣಬೇಕಾಗುತ್ತದೆ. ಇದೇ ಇಂದಿನ ಜಗತ್ತಿನ ನ್ಯಾಯವಲ್ಲವೆ? ಈಗ ವಾಸಂತಿಯು ಬಾಡಿದ ಕುಸುಮ. ಅವಳ ಪರಿಮಲರಹಿತವಾದ ಸಾಹಚರ್ಯವು ನಿನಗೆ ಹೇಗೆ ಮೆಚ್ಚೀತು?

ನಿಮ್ಮ ದಾಂಪತ್ಯಜೀವನದ ಪ್ರಥಮ ಭಾಗದಲ್ಲಿ ನೀನು ನಿನ್ನ ಮಡದಿಯಲ್ಲಿ ಎಷ್ಟು ಮೋಹಗೊಂಡಿದ್ದೀಯೇ? ನಿಮ್ಮಿಬ್ಬರ ಸಂಸಾರವು ಸುಖವಾಗಿ ನಡೆದಿದೆಯೆಂದು ನೀನೇ ನನಗೊಮ್ಮೆ ಬರೆದಿದ್ದೆಯಲ್ಲವೇ? ನಿನ್ನ ಪ್ರೇಮಚೇಷ್ಟೆಗಳಿಗೆ ಸಂಪೂರ್ಣವಾಗಿ ಅವಕಾಶವು ಸಿಗಲೆಂದೇ ನೀನು ವಾಸಂತಿಯೊಂದಿಗೆ ತಂದೆಯಿಂದ ಬೇರೆಯಾಗಿ ನಿಂತಿದ್ದೆಯಲ್ಲವೇ? ಆದರೆ ಎರಡು ವರುಷಗಳೊಳಗೇ ಏನಾಯಿತು? ಪ್ರೇಮೋನ್ಮಾದವು ಇಷ್ಟರಲ್ಲಿಯೇ ಇಳಿದುಹೋಯಿತೇ? ಮಕರಂದರಸವನೀಂಟಿ ಆದ ಮೇಲೆ ಹೂವಿನ ಪರಿವೆ ತುಂಬಿಗೇತಕೆ? ಅಲ್ಲವೆ? ಗಂಡಸರು ಎಷ್ಟು ಕಠಿಣಹೃದಯಿಗಳೋ!

ತನ್ನ ತಾಯಿಯನ್ನು ಸಂತೋಷಗೊಳಿಸಲಿಕ್ಕೆಂದು ನಿರಪರಾಧಿಯಾದ ಹೆಂಡತಿಯನ್ನು ತ್ಯಜಿಸಿ, ಹದಿನೆರಡು ವರುಷಗಳ ವರೆಗೆ ಪುನರ್ವಿವಾಹಿತರಾಗದೆ ಇದ್ದ ಶ್ರೀ. ರಮೇಶ ಮಡಗಾಂವಕರರಿಗೆ ಹೆಣ್ಣು ಕೊಡಲು ಕನ್ಯಾಪಿತೃಗಳು ಮುಂದೆ ಬರುವರೆಂದು ಯಾರು ನಂಬಿದ್ದರು? ನೀನೂ ದ್ವಿತೀಯ ವಿವಾಹವನ್ನು ಮಾಡಿಕೊಳ್ಳುವುದಾದರೆ ಹುಡುಗಿಯರಿಗೇನೂ ಬರಗಾಲವಿಲ್ಲ! ಆದರೆ ಆ ವಾಸಂತಿಯ ಪಾಡೇನು? ಅವಳ ತಂದೆಯೂ ಈಗ ಬಡವನಾಗಿದ್ದಾನೆ. ಆಯುಷ್ಯವೆಲ್ಲ ದುಡಿದೂ ದುಡಿದು ಗಳಿಸಿಟ್ಟ ಒಂದುವರೆ ಸಾವಿರ ರೂಪಾಯಿಗಳನ್ನು ಅವನು ನಿನಗೆ ವರದಕ್ಷಿಣೆಯಾಗಿ ಕೊಡಲಿಲ್ಲವೇ?

ಹಿಂದಕ್ಕೆ ನೀನು ಶ್ರೀಮತಿ ಪ್ರಭು ಸುಲೋಚನಾದೇವಿಯ ಪ್ರೇಮಯಾಚನೆಯನ್ನು ಮಾಡಿದಾಗ ಅವಳು ನಿನ್ನನ್ನು ಧಿಕ್ಕರಿಸಿದುದೇ ಹಿತವಾಯಿತೆಂದು ನನಗೆ ಈಗ ತೋರುತ್ತದೆ. ನಿನ್ನಂಥವರು ಬಯಸುವುದು ಪ್ರೇಮವಲ್ಲ, ದೇಹ! ಇರಲಿ.

ಕಾಮಾಕ್ಷಾ, ಅವಿಚಾರ ಮಾಡಬೇಡ. ಪರಿಣಾಮವನ್ನು ನಿಧಾನವಾಗಿ ಆಲೋಚಿಸಿ ನೋಡು. ಈಶ್ವರನು ನಿನಗೆ ಸುಬುದ್ಧಿಯನ್ನೀಯಲಿ.

ನಿನ್ನ ವಾಸಂತಿಯ ಕ್ಷೇಮಾಭಿಲಾಷಿಣೀ,

**ಮನೋರಮಾ.**

೨

ಮಹಿಲಾ ಸದನ,

೮—೩—'೩೩.

...............ವರ ಸ॥ಕ್ಕೆ—

ಸಾಷ್ಟಾಂಗ ನಮಸ್ಕಾರಗಳು. ಮನೆಯನ್ನು ಬಿಟ್ಟು ಈಗ ಎರಡು ವರುಷಗಳಿಗೆ ಮೇಲಾಯಿತು. ಚಿತ್ತಕ್ಕೆ ಎಳ್ಳಷ್ಟೂ ಸ್ವಾಸ್ಥ್ಯವಿಲ್ಲ. ತವರು ಮನೆಗೆ ಬರುವಾಗ ನೀವು ನನಗೆ ತಂದುಕೊಟ್ಟ ಔಷಧಿಯ ಸುದ್ದಿಯನ್ನು ನಾನು ಯಾರಿಗೂ ಇನ್ನೂ ಹೇಳಿಲ್ಲ. ಆದರೂ ಮನಸ್ಸು ಮಾತ್ರ ತಳಮಳ ಗೊಳ್ಳುತಿದೆ. ತಮಗೆ ಯಾವ ರೀತಿಯಿಂದಲೂ ತ್ರಾಸ ಕೊಡದೆ ಆ ನನ್ನ ಕ....ಂ....ದನೊಡನೆ, ಅಯ್ಯೊ, ನಾನು ಹೇಗಾದರೂ ಆಯುಷ್ಯವನ್ನು ಕಳೆಯುತ್ತಿದ್ದೆನಲ್ಲ. ಈ ಆಶಾತಂತುವೂ ಮದ್ದಿನಿಂದ ಹರಿದುಹೋಯಿತು. ಈಗಾದರೂ ನನ್ನ ಮೇಲೆ ಕರುಣೆಯಿಟ್ಟು ಹಿಂದಕ್ಕೆ ಕರಿಸಿಕೊಳ್ಳಿ. ತಮ್ಮ ನೀಲಾಸಾನಿಯ ದಾಸಿಯಾಗಿಯೂ ಇರಲು ಸಿದ್ಧಳಿದ್ದೇನೆ. ಕೇವಲ ನಿಮ್ಮನ್ನು ಸಂತೋಷಗೊಳಿಸಲಿಕ್ಕೇ ಅವಳನ್ನು ಸಂಕೋಚವಿಲ್ಲದೆ ನಮ್ಮಲ್ಲಿ ಬರಮಾಡಿ ಹೂಮುಡಿಸುತ್ತಿದ್ದೆನಲ್ಲವೆ?

ನನ್ನ ಮನಸ್ಸು ಚಂಚಲವಾಗಬಾರದೆಂದು ತಾತ ನನ್ನನ್ನು ಇಲ್ಲಿಗೆ ಕಳಿಸಿದ. ತಾವು ಎಲ್ಲವರಿಗೂ ಹೇಳುತ್ತಿರುವಂತೆ ನಾನು ನಿಜವಾಗಿಯೂ ಅರೆಮರುಳಾಗಿದ್ದರೆ, ಇಲ್ಲಿಯ ಎರಡು ವರುಷಗಳ ಶಿಕ್ಷಣಕ್ರಮವನ್ನು ನನ್ನಿಂದ ಕೊನೆಗಾಣಿಸಲು ಆಗುತ್ತಿರಲಿಲ್ಲ! ತಮಗೆ ತಕ್ಕ ಹೆಂಡತಿಯಾಗಬೇಕೆಂದು ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದೇನೆ.

ನಾನೇನೂ ಯೋಗಿನಿಯಲ್ಲ; ನಾನೂ ಮನುಷ್ಯಪ್ರಾಣಿ. ಎಲ್ಲರಿಗೂ ಇರುವಂಥ ವಿಕಾರಗಳು ನನಗೂ ಅವೆ. ಮೇಲಾಗಿ ಇಲ್ಲಿ ಪ್ರಲೋಭನಗಳಿಗೇನೂ ಕೊರತೆಯಿಲ್ಲ! ನನ್ನ ಪಾತಿವ್ರತ್ಯವನ್ನು ತಾವೇ ಕಾಪಾಡಬೇಕು.

ಸದೈವ ತಮ್ಮ ಸುಖವನ್ನೇ ಬಯಸಿ ತಮ್ಮ ಕರುಣೆಯನ್ನು ಕೋರುವ,

ತಮ್ಮ ಪಾದಸೇವಿಕೆ,

**ನಾಸಂತಿ.**

೩

ಮದನಪುರ,

೧೨—೬—'೩೩.

ಪ್ರಿಯ ಮಂಗೇಶ,

ನಿನ್ನ ಪತ್ರ ಕೈಸೇರಿದೆ. ಕಾಮಾಕ್ಷನ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಕೇಳಿದ್ದೀ. ನನ್ನ ಕಿವಿಯ ಮೇಲೆ ಬಂದ ಸಂಗತಿಗಳನ್ನಷ್ಟು ನಿನಗೆ ತಿಳಿಸುತ್ತೇನೆ:

ನಿಮ್ಮ ಕಾಮಾಕ್ಷನೆಂದರೆ ಎಂಟನೆಯ ಹೆನ್ರಿಯ ನವಾವತಾರ ನೋಡು. ಅವನು ಅರಸನಾಗಿರುವುದಿಲ್ಲ, ಇಷ್ಟೇ ಭೇದ! ಅವನು ವಾಸಂತಿಯನ್ನು ಬಿಟ್ಟು ಬಿಡಬೇಕಾದರೆ ಶ್ರೀ. ಶ್ಯಾಮರಾಯರ ಮಗಳ ಮೇಲೆ ಕಣ್ಣಿಟ್ಟದ್ದನ್ನು ನೀನು ಬಲ್ಲೆಯಷ್ಟೆ! ತಿಂಗಳಿಗೆ ಮೂವತ್ತು ರೂಪಾಯಿ ತಲಬಿನ ಗುಮಾಸ್ತನಿಗೆ ಅವರು ತಮ್ಮ ಮಗಳನ್ನು ಕೊಡುತ್ತಾರೆಯೇ? ಮೇಲಾಗಿ ಕಾಮಾಕ್ಷನು ನಿಶಾಚರನಾಗಿದ್ದ ಸಂಗತಿಯೂ, ಸದ್ಯಕ್ಕೆ ಫಂಡರ ಪುರದಲ್ಲಿದ್ದ ಮಾಧುರೀ ಎಂಬ ಬಾಲವಿಧವೆಯನ್ನು ಅವನು ಮಾತೃ ಪದವಿಗೇರಿಸಿದ ಸುದ್ದಿಯೂ ಈಗ ಸರ್ವತೋಮುಖಿಯಾಗಿವೆ. ಶ್ರೀ. ಶ್ಯಾಮರಾಯರಿಗಂತೂ ಸಂಪೂರ್ಣವಾಗಿ ಗೊತ್ತಿವೆ. ಬಹಳ ಪ್ರಯತ್ನಮಾಡಿ ನೋಡಿದ! ಕೈಗೂಡಲಿಲ್ಲ!

ದ್ವಿತೀಯ ವಿವಾಹಕ್ಕೆ ತಂದೆಯೂ ಪ್ರೋತ್ಸಾಹಿಸಿದನಂತೆ. ಮತ್ತೆ ಸಾವಿರ ರೂಪಾಯಿ ವರದಕ್ಷಿಣೆ ಸಿಕ್ಕುವುದೆಂದು ಆ ಮುದುಕನಿಗೆ ಆಸೆ! ಕಾಮಾಕ್ಷನೂ ಹಲವೆಡೆಗೆ ಕನ್ಯಾರ್ಥಿಯಾಗ ಹೋಗಿದ್ದನಂತೆ! ಕೊನೆಗೊಬ್ಬಳು ಗಂಟು ಬಿದ್ದಳು, ಮಹಾರಾಯಾ! ಆ ಹುಡುಗಿ ಅನಾಥೆ; ಭಾವನಲ್ಲಿಯೇ ಇರುತ್ತಿದ್ದಳು. ಭಾವ ಮಾಮಲೇದಾರ. ಇವನಿಗೆ ಅವಳ ಮದುವೆ ಆದಷ್ಟು ಬೇಗನೆ ತೀರಿಸಿಕೊಂಡರೆ ಸಾಕಾಗಿತ್ತು. ಕಾಮಾಕ್ಷನೂ ಹಿಂದೆ ಮುಂದೆ ನೋಡದೆ ಒಪ್ಪಿದ. ರೋಗಿ ಬಯಸಿದ್ದೂ ವೈದ್ಯ ಹೇಳಿದ್ದೂ ಒಂದೇ ಆಯಿತು. ವಿವಾಹಾದಿಗಳು ನಡೆದು ಹೋದವು. ಈಗ ಮಾಮಲೇದಾರನು ಅವಳನ್ನು ಇವನಿದ್ದಲ್ಲಿಗೆ ಕಳಿಸುತ್ತಾನೆಯೇ? ಅವಳು ಇನ್ನೂ ಭಾವನೊಂದಿಗೆ ಆರಾಮ ಇದ್ದಾಳೆ. ಜನರು ಮಾಮಲೇದಾರನ ವಿಷಯಕ್ಕೆ ಏನೇನೋ ಆಡಿಕೊಳ್ಳುತ್ತಾರೆ!

ಹೈಸ್ಕೂಲಿನಲ್ಲಿದ್ದಾಗ ಇವನಿಂದಲೇ ಪತಿತೆಯಾದ ಸುಲೋಚನೆಯನ್ನಾದರೂ ಮದುವೆಯಾಗಬಾರದಿತ್ತೇ. ಆದರೆ ಈ ವಿವೇಕ ಅವನಿಗೆಲ್ಲಿ ಹುಟ್ಟಬೇಕು? ಅವಳು ಇನ್ನೂ ಅವಿವಾಹಿತಳಾಗಿಯೇ ಇದ್ದಾಳೆ, ಪಾಪ!

ವಿಜಯನಗರ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಗಾಗಿ ಓದುತ್ತಿದ್ದ ಶ್ರೀ. ಸುಂದರ ನಾಡಕರ್ಣಿಯ ಹೆಂಡತಿಯ ವಿಷಯಕ್ಕೆ ನೀನು ಕೇಳಿದ ಸುದ್ದಿಯನ್ನು ನಾನೂ ಕೇಳಿದ್ದೇನೆ. ಆದರೆ ಅದು ಎಷ್ಟರ ಮಟ್ಟಿಗೆ ನಿಜವಿದೆ ಎಂಬುದನ್ನು ಹಿಂದಿನಿಂದ ತಿಳಿಸುವೆನು. ಒಟ್ಟಿನ ಮೇಲೆ ಕಾಮಾಕ್ಷನ ಚರಿತ್ರೆಯು ಒಂದು ಕಾದಂಬರಿಯೇ ಆಗಿ ಬಿಟ್ಟಿದೆ. ಎಲ್ಲ ಸಂಗತಿಗಳನ್ನು ಪತ್ರಮುಖೇನ ತಿಳಿಸಲು ಸಾಧ್ಯವಿಲ್ಲ. ಸಮಕ್ಷಮ ಭೆಟ್ಟಿಯಾದಾಗ ಹೇಳುವೆನು.

ಸೌ॥ ಲಲಿತೆಯೂ, ಬೇಬಿಯೂ ಕ್ಷೇಮವಾಗಿದ್ದಾರೆ.

ನಿನ್ನ ಸ್ನೇಹಾಂಕಿತ,
**ಆನಂದರಾಯ.**

೪

## ಮದನ ಪುರದ ಸುದ್ದಿಯೋಲೆ.

(ಸಾಂಜ ವರ್ತಮಾನದಿಂದ ಕನ್ನಡಿಸಿದುದು)

ಮದನಪುರ,
೨೯—೫—'೩೪.

ತಾ॥ ೨೮ನೆಯ ಅಪರಾಹ್ಣದಲ್ಲಿ ಇಲ್ಲಿಯ ಸೇಶನ್ ಕೋರ್ಟಿನಲ್ಲಿ ಜನರು ಕಿಕ್ಕಿರಿದು ನೆರೆದಿದ್ದರು. ಒಂದು ತಿಂಗಳ ವರೆಗೆ ಇಲ್ಲಿ ಎಲ್ಲವರ ಚರ್ಚೆಯ ವಿಷಯುವಾಗಿದ್ದ ಒಂದು (Sensational) ಖಟ್ಲೆಯ ಇತ್ಯರ್ಥವಾಗುವದಿತ್ತು ಆ ದಿನ. ಖಟ್ಲೆಯ ವಿಚಾರ ಸ್ವಲ್ಪದರಲ್ಲಿ ಹೀಗಿದೆ—''ಶಕುಂತಲೆಯು ತುಂಬ ಸ್ಫುರದ್ರೂಪಿಣಿ. ಆದರೆ ಅವಳ ತಾಯಿಯು ದರಿದ್ರನಾರಾಯಣನ ಕುಟುಂಬಕ್ಕೆ ಸೇರಿದವಳು. ಹೀಗಾಗಿ ಮೋಹಿಸುವ ರೂಪವಿದ್ದರೂ ಅವಳನ್ನು ಮದುವೆಯಾಗಲಿಕ್ಕೆ ಯಾರೂ ಮುಂದೆ ಬರಲಿಲ್ಲ! ಕೊನೆಗೆ ಅವಳ ತಾಯಿಯು ಸುಧಾರಕ ಮಂಡಳದ ಕಾರ್ಯದರ್ಶಿಗಳಿಗೆ ಮೊರೆಯಿಟ್ಟಳು. ಅವರು ದಯೆ ತೋರಿ 'ವರನು ಬೇಕು' ಎಂಬ ಜಾಹೀರಾತನ್ನು 'ವಸಂತ' ಪತ್ರಿಕೆಯಲ್ಲಿ ಕೊಟ್ಟರು. ಶ್ರೀ. ಕಾಮಾಕ್ಷನೆಂಬವನು ಒಂದು ಅರ್ಜಿಯನ್ನು ಕಳಿಸಿದ್ದನಂತೆ.

ಶಕುಂತಲೆಯ (Snap-Shot) ಛಾಯಾ ಚಿತ್ರವೂ ಅವನಿಗೆ ಮುಟ್ಟಿತಂತೆ. ಕಾಮಾಕ್ಷನು ಹರ್ಷಿತನಾಗಿ ಮದುವೆಗೆ ಒಪ್ಪಿದನಂತೆ. ಪತ್ರ ದ್ವಾರಾ ಮುಹೂರ್ತ ನಿಶ್ಚಯವೂ ಆಯಿತಂತೆ. ಕಾಮಾಕ್ಷನು ಲಗ್ನಕ್ಕೆ ಪರಿವಾರ ಕಟ್ಟಿಕೊಂಡು ಆ ಊರಿಗೆ ಹೋದನು. ಆದರೆ ಶ್ರೀ. ಕೇ. ಉಮೇಶರಾಯ ರೊಂದಿಗೆ ಶಕುಂತಲೆಯ ವಿವಾಹವು ಆ ದಿನ ಗೋಪಾಲ ಮುಹೂರ್ತದಲ್ಲಿ ನಡೆದು ಹೋಗಿತ್ತು! ಅದೇ ರಾತ್ರಿ ಕಾಮಾಕ್ಷನು ಕಾಣೆಯಾದನು. ಒಮ್ಮೆ ಅವನು ಬ್ರಾಂಡಿ ಕುಡಿದು ಅಲೆಯುತ್ತಿದ್ದಾಗ ಮೂರುಸಂಜೆಗೆ ತಿರುಗಾಡಲಿಕ್ಕೆ ಹೋದ ಶಕುಂತಲೆಯನ್ನೂ ಉಮೇಶರಾಯರನ್ನೂ ಹಿಂದಿನಿಂದ ನೋಡಿದನು. ರಸ್ತೆಯ ಮೇಲೆ ಯಾರೂ ಇರಲಿಲ್ಲ. ಇರುವ ಸಂಭವವೂ ಕಡಿಮೆ. ಅವನಲ್ಲಿ ಸೇಡು ಬುದ್ಧಿಯು ಜಾಗೃತವಾಯಿತು. ಹಿಂದಿನಿಂದ ಹೋಗಿ ಉಮೇಶರಾಯರ ಕೊರಲನ್ನು ತನ್ನ ಜೇಬಿನೊಳಗಿನ ಟುವಾಲದಿಂದ ಹಿಸುಕಿದನು. ಅವರು ಮೂರ್ಛೆಹೋಗಿ ನೆಲದ ಮೇಲೆ ಬಿದ್ದರು. ಶಕುಂತಲೆಯು ಚೀರಿದಳು. ಕಾಮಾಕ್ಷನು ಕಾಲಿಗೆ ಬುದ್ಧಿ ಹೇಳಿದನು. ಅಷ್ಟರಲ್ಲಿ ಸತ್ಯಾಗ್ರಹಿ ಕೈದಿಗಳನ್ನು ತಗೊಂಡು ವಿಷಪುರಕ್ಕೆ ಹೋಗುತ್ತಿದ್ದ ಪೋಲಿಸ ಲಾರಿಯು ಹಿಂದಿನಿಂದ ಬಂದಿತು. ಪೋಲೀಸರಿಗೆ ಅನಾಯಾಸವಾಗಿ ಬೇಟೆ ಸಿಕ್ಕಿದಂತಾಯಿತು. ಶ್ರೀ. ಉಮೇಶರಾಯರ ಕೊಲೆ ಮಾಡಲಿಕ್ಕೆ ಪ್ರಯತ್ನ ಮಾಡಿದ ಅಪರಾಧ ಕ್ಕಾಗಿ ನ್ಯಾಯಾಧೀಶರು ಆರೋಪಿಗೆ ೭॥ ವರುಷಗಳ ಸಶ್ರಮ ಕಾರಾಗೃಹ ವಾಸದ ಶಿಕ್ಷೆಯನ್ನು ವಿಧಿಸಿದ್ದಾರೆ.''

ಕಾಮಾಕ್ಷನಿಗಾದ ಶಿಕ್ಷೆಯು ಕಡಿಮೆಯಾಯಿತೆಂದು ಕೆಲವರೂ ಸಮಾಜ ಕಂಟಕವು ದೂರವಾಯಿತೆಂದು ಕೆಲವರೂ ಅಲ್ಲಲ್ಲಿ ಆಡಿಕೊಳ್ಳುತ್ತಾರೆ. ಆದರೆ ಮದುವೆಯ ಕುಚೋದ್ಯವನ್ನು ಯಾರು ಇಷ್ಟು ಯಶಸ್ವಿಯಾಗಿ ಮಾಡಿದರೆಂಬ ಬಗ್ಗೆ ತರ್ಕವಿತರ್ಕಗಳು ಇನ್ನೂ ನಡೆದೇ ಇವೆ!

ಕಾಮಾಕ್ಷನ ಮೊದಲನೆಯ ಹೆಂಡತಿಯ ತಂದೆಯು ಮಗಳ ಪಾಡನ್ನು ನೋಡಲಾರದೆ ಹೃದ್ರೋಗದಿಂದ ಸತ್ತು, ಹಾಗೂ ಅವನ ಮರಣಾನಂತರ ದಿಕ್ಕು ಗಾಣದೆ ಅವಳು ಒಬ್ಬ ಇರಾಣಿಯ ಬಲೆಯಲ್ಲಿ ಬಿದ್ದ—ಸಂಗತಿಗಳೂ ಈ ಖಟ್ಲೆಯ ವಿಚಾರಕಾಲಕ್ಕೆ ಬೆಳಕಿಗೆ ಬಂದಿವೆ!!

ಅಗಸ್ಟ್, ೧೯೩೪



## ಶ್ರೀಮತಿ ಆರ್. ಕಲ್ಯಾಣಮ್ಮನವರು, ಬೆಂಗಳೂರು

ಇವರ ಪರಿಚಯವಿಲ್ಲದವರು ಕನ್ನಡ ಸಾಹಿತ್ಯ ಲೋಕದಲ್ಲಿಯೇ ವಿರಳವೆನ್ನಬಹುದು. 'ಸರಸ್ವತಿ' ಎಂಬ ಸ್ತ್ರೀಯರ ಏಳಿಗೆಯೇ ದೃಷ್ಟಿಯಾಗಿ ಉಳ್ಳ ಮಾಸಿಕ ಪತ್ರವನ್ನು ಸುಮಾರು ಹದಿನಾಲ್ಕು ವರ್ಷಗಳಿಂದ ನಡೆಸುತ್ತ ಬಂದಿರುವರು. 'ಸುಖಲತಾ' 'ಇಂದಿರಾ' ಮೊದಲಾದ ಕಾದಂಬರಿಗಳನ್ನೂ 'ಸ್ನೇಹಲತೆ', 'ಸತೀ ಪದ್ಮಿನಿ' 'ರಣಕೇಸರಿ' ಮೊದಲಾದ ನಾಟಕಗಳನ್ನೂ ಈ ವರೆಗೆ ಬರೆದು ಪ್ರಕಟಿಸಿದ್ದಾರೆ. ಕೆಲವು ಚಿಕ್ಕ ಕಥೆಗಳನ್ನೂ ಬರೆದಿದ್ದಾರೆ. ಇವರ ಗ್ರಂಥಗಳು ಒಂದಲ್ಲ ಒಂದು ಉದ್ದೇಶ (ಹೆಚ್ಚಾಗಿ ಹೆಂಗುಸರ ದುಃಖ ನಿವಾರಣೆ) ಕ್ಕಾಗಿ ಬರೆಯಲ್ಪಟ್ಟಿರುವುದರಿಂದ ಕೆಲವು ಬಾರಿ ಕಲೆಯ ಕಡೆಗೆ ಅಷ್ಟೊಂದು ಗಮನ ಪೂರೈಸದಿರುವುದು ಆಶ್ಚರ್ಯವಲ್ಲ.

ಇವರ ಕತೆಗಳಲ್ಲಿ ಸಾಕಷ್ಟು ಕಲ್ಪನಾ ಸಾಮರ್ಥ್ಯವೂ ಪಾತ್ರ ಸೃಷ್ಟಿ ಕೌಶಲವೂ ಇದ್ದರೂ ಮೇಲೆ ಹೇಳಿದ ಕಾರಣದಿಂದಲೊ ಏನೊ ಆ ಕತೆಗಳ ಪರಿಣಾಮವು ಮನಸ್ಸಿನಲ್ಲಿ ಚಿರಕಾಲ ನಿಲ್ಲುವಂತಿರುವುದಿಲ್ಲ. ಆದರೆ ಕನ್ನಡ ಸಾಹಿತ್ಯ ಮತ್ತು ಸ್ತ್ರೀ ಸಮಾಜದ ಸೇವೆಯನ್ನು ಇವರಷ್ಟು ಅವ್ಯಾಹತವಾಗಿ ಮಾಡಿದ ಸ್ತ್ರೀಯರು ಕರ್ನಾಟಕದಲ್ಲಿ ವಿರಳವೆನ್ನಬಹುದು.

## ದೇವನೆಲ್ಲಿ

ಆರ್. ಕಲ್ಯಾಣಮ್ಮನವರು

ಗುಂಡಿನಿಂದ ಸುಟ್ಟರೂ ಸೀಳದಂತಹ ದೇಹವುಳ್ಳ ಕಟ್ಟಾಳಾದ ಭೀಮನಂತಿದ್ದ ಬೀರನು ನದಿಯ ಪಾಲಾದ ನಂತರ ಚಿನ್ನಿಯು ಪುನರ್ವಿವಾಹ ಮಾಡಿಕೊಳ್ಳಲಿಲ್ಲ. ಅವರ ಪಂಗಡದಲ್ಲಿ ವಿಧವಾವಿವಾಹವು ನಿಷೇಧಿಸಲ್ಪಟ್ಟಿರಲಿಲ್ಲ. ಚಿನ್ನಿಯ ಮನಸ್ಸು ಸ್ಥಿರವಾದುದು. ಬೀರನಂತಹ ಮನುಷ್ಯನು ಈ ಜಗತ್ತಿನಲ್ಲಿ ನೋಡಲು ಸಿಗುವನೇ? ನಿತ್ಯವೂ ಮನೆ ಬಿಟ್ಟು ಕೆಲಸಕ್ಕೆ ಹೋಗುವಾಗಲೆಲ್ಲಾ "ಕುಡಿಯಲು ನೀರು ತಾ ಚಿನ್ನೀ!" ಎಂದು ಪ್ರೇಮರಸದಿಂದ ತುಂಬಿದ ಮಾತುಗಳಿಂದ ಯಾರು ಕೇಳುವನು? ಅಷ್ಟೊಂದು ಪ್ರೇಮ ಮತ್ತಾರ ಹೃದಯದಲ್ಲಾದರೂ ಇದೆಯೇ ಎಂಬುದು ಸಂಶಯ ಮೂವತ್ತು ನಲವತ್ತು ಮೈಲಿಗಳಾಚೆ ಇರುವ ಪಟ್ಟಣಗಳಲ್ಲಿ ಜಾತ್ರೆಯಾದರೂ ತನ್ನನ್ನು ಕರೆದುಕೊಂಡು ಹೋಗುತ್ತಿದ್ದ ಬೀರನನ್ನು ಅವಳಿಂದ ಮರೆಯಲು ಸಾಧ್ಯವೇ?

* * * * * *

ಆಲೂರಿನ ಮಹದೀಶ್ವರ ಸ್ವಾಮಿಯಲ್ಲಿ ಬೀರನಿಗೆ ಪರಮ ಭಕ್ತಿ. ಪ್ರತಿನಿತ್ಯವೂ ತಾನು ಕೆಲಸಕ್ಕೆ ಹೊರಡುವ ಮುಂಚೆ ಆ ದಿನ ಮಾಡಲಿರುವ ಪ್ರತಿಯೊಂದು ಕಾರ್ಯವನ್ನೂ ನಿವೇದಿಸಿ ತನ್ನೆಲ್ಲ ಕಾರ್ಯಗಳೂ ನಿರ್ವಿಘ್ನವಾಗಿ ನಡೆಯುವಂತೆ ಅನುಗ್ರಹಿಸಬೇಕೆಂದು ಭಕ್ತಿಯಿಂದ ಸ್ವಾಮಿಪಾದಕ್ಕೆರಗುವನು. ಸಂಜೆಯಾದೊಡನೆ ಮರಳಿ ಬಂದು ತಾನು ಆ ದಿನ ಮಾಡಿದ ಕೆಲಸಗಳ ವರದಿಯನ್ನೊಪ್ಪಿಸಿ ತನ್ನನ್ನನುಗ್ರಹಿಸಿದ್ದಕ್ಕಾಗಿ ಮತ್ತೊಮ್ಮೆ ವಂದಿಸುವನು. ಬೀರನಿಗೆ ಮಕ್ಕಳಿಲ್ಲ. ಕಂಡಕಂಡ ದೇವರಿಗೆಲ್ಲಾ ಕೈ ಮುಗಿದುದಾಯಿತು; ಬೇಡಿದ್ದಾಯಿತು. ಬಹು ದಿನಗಳು ಅಂತಹ ಭಾಗ್ಯವೊದಗಲಿಲ್ಲ. ಕೊನೆಗೆ ಮಹದೀಶ್ವರ ಸ್ವಾಮಿಯನ್ನು ಪೂಜಿಸಿ ಪ್ರಾರ್ಥಿಸಿ ತನ್ನ ಇಷ್ಟವನ್ನು ಸಲಿಸುವಂತೆ ಕೇಳಿಕೊಂಡನು. ಬೀರನ ಪ್ರಾರ್ಥನೆಯು ದೇವನಿಗೆ ಮುಟ್ಟಿತು. ದೇವನು ಪ್ರೀತನಾದನು. ಅಂದಿಗೆ ಸರಿಯಾಗಿ ಹತ್ತನೇ ತಿಂಗಳಲ್ಲಿ ಸ್ವರ್ಣ ಪುತ್ಥಳಿಯಂತಹ ಪುತ್ರನುದಿಸಿದನು. ಬೀರ ಚಿನ್ನಿಯರ ಆನಂದಕ್ಕೆ ಮಿತಿಯಿಲ್ಲ. ಮಹದೀಶ್ವರನಿಗೆ ಬೇಕಾದಷ್ಟು ಅರ್ಚನೆ ಅಭಿಷೇಕಗಳಾದವು.

ಮಗನು ಹುಟ್ಟಿದ್ದು ಮೊದಲು ಬೀರನ ಚರ್ಯೆಯು ಸಂಪೂರ್ಣವಾಗಿ ಬದಲಾಯಿಸಿತು. ಹೆಂಡದಂಗಡಿಯ ಕಡೆ ತಿರುಗಿ ಕೂಡ ನೋಡುತ್ತಿರಲಿಲ್ಲ. ಮೊಟ್ಟೆ, ಮಾಂಸಾಹಾರಗಳನ್ನು ತ್ಯಜಿಸಿದನು. ಚಿನ್ನಿಯು ನಿತ್ಯವೂ ಮಿಂದು ಶುಚಿಯಾಗಿ ಕಾಯಿ ಪಲ್ಯಗಳನ್ನು ತಂದು ರುಚಿಯಾಗಿ ಅಡಿಗೆ ಮಾಡುವಳು. ದೇವರಿಗೆ ನೈವೇದ್ಯಮಾಡಿ ಪತಿಪತ್ನಿಯರೀರ್ವರೂ ಸಂತೋಷದಿಂದ ಭೋಜನ ಮಾಡುವರು. ಇವನ ನಡತೆಯನ್ನು ಕಂಡ ಹೆಗ್ಗಡೆಯು ಸಂತೋಷಗೊಂಡವನಾಗಿ ಇವನನ್ನು ಅತ್ಯಾದರದಿಂದ ಕಾಣುತ್ತಿದ್ದುದಲ್ಲದೆ ಇವನಿಗೆ ಬೇಕಾದ ಸಹಾಯವನ್ನೆಲ್ಲಾ ಮಾಡುತ್ತಿದ್ದುದರಿಂದ ಈ ಕುಟುಂಬವು ಕಷ್ಟದ ಸೆಳೆಯನ್ನೇ ಕಾಣದೆ ಸುಖದಿಂದಿತ್ತು.

* * * * * *

“ನೀಚಕುಲದಲ್ಲಿ ಜನಿಸಿದರೇನು? ಎಲ್ಲರೂ ಆ ಪರಮಾತ್ಮನ ಮಕ್ಕಳೇ ಅಲ್ಲವೇ? ನಮ್ಮ ನಡೆ ನುಡಿಗಳಲ್ಲಿ ಕಾಯಾ ವಾಚಾ ಮನಸಾ ಶುಚಿಯಾಗಿದ್ದರೆ ದೇವದೇವನು ಒಳ್ಳೆಯ ಮಗುವೆಂದು ನಮ್ಮನ್ನೂ ತನ್ನ ಸಮೀಪಕ್ಕೆ ಕರೆದು ಕೊಳ್ಳುವನು. ಕಮಲಪುಷ್ಪವು ಹುಟ್ಟುವುದು ಕೆಸರಿನಲ್ಲಿ. ಹಾಗಿದ್ದರೂ ಆ ಪುಷ್ಪವು ಪರಮಾತ್ಮನ ಪ್ರೀತಿಯ ವಸ್ತುವಾಗಿಲ್ಲವೇ? ಮಹಾಲಕ್ಷ್ಮಿಯ ವಾಸ ಸ್ಥಾನವಾಗಿಲ್ಲವೇ? ಮುಖ್ಯವಾದುದು ಜಾತಿಯಲ್ಲ; ಅಂತಃಶುದ್ಧಿ, ಬಹಿಃಶುದ್ಧಿ, ನ್ಯಾಯದಿಂದ ನಡೆಯುವುದು. ಇವುಗಳೇ ಭಗವಂತನ ಬಳಿ ಸಾರಲು ಹತ್ತಿರದ ಸೋಪಾನಗಳು” ಎಂದು ಉಪದೇಶ ಮಾಡುತ್ತ, ಬೀರನು ನಿಂತನೆಂದರೆ ಎಲ್ಲರೂ “ಮಹಾಪುರುಷ”ನೆಂದು ಕೊಂಡಾಡುವರು.

* * * * * *

ಒಂದು ದಿನ ಬೆಳಿಗ್ಗೆ ಹತ್ತು ಘಂಟೆಯ ವೇಳೆ. ಬೀರನು ಮಗನಿಗೆ “ಒಂದು, ಎರಡು, ಮೂರು” ಎಂದು ಲೆಕ್ಕ ಹೇಳಿಕೊಡುತ್ತಾ ನದಿಯ ದಂಡೆಯ ಮೇಲೆ ಕುಳಿತಿದ್ದಾನೆ. ನದಿಗೆ ಸ್ನಾನಕ್ಕೆಂದು ಬಂದಿದ್ದ ಉತ್ತಮ ಕುಲದ ವನಿತೆಯೊಬ್ಬಳು ನೀರಿನಲ್ಲಿ ಮುಳುಗಿದವಳು ಮೇಲಕ್ಕೇಳಲಿಲ್ಲ. ಸ್ನಾನ ಮಾಡುತಿದ್ದವರೆಲ್ಲರೂ ಹಾಹಾಕಾರ ಮಾಡಿದರೇ ವಿನಾ ನೀರಿನಲ್ಲಿಳಿದು ಆ ಹೆಂಗಸನ್ನು ಮೇಲಕ್ಕೆತ್ತಲು ಯಾರೂ ಮುಂದಾಗಲಿಲ್ಲ. ಬೀರನು ನೋಡಿದನು; ನೀರಿನಲ್ಲಿ ಹಾರಿದನು. ಹಾರಿದವನು ಮತ್ತೆ ಮೇಲಕ್ಕೇಳಲಿಲ್ಲ.

* * * * * *

ಸುಖಮಯವಾದ ಚಿನ್ನಿಯ ಸಂಸಾರವು ಅಂಧಕಾರಮಯವಾಯಿತು. ಪತಿಯ ಪ್ರೇಮವನ್ನು ನೆನೆನೆನೆದು ದುಃಖಿಸುವ ಚಿನ್ನಿಯು, ಮಗ ಮಾದ ನನ್ನು ನೋಡಿ ಸ್ವಲ್ಪ ಮರೆಯುವಳು. ಪರಮಾತ್ಮನಿಗೆ ಇದೂ ಸಹಿಸ ದಾಯಿತು. ಮೂರು ದಿನಗಳಿಂದ ಮಾದನಿಗೆ ವಿಪರೀತ ಜ್ವರ. ಕಣ್ಣೇ ತೆರೆಯ ಲಿಲ್ಲ. ಪ್ರಶ್ನೆ ಕೇಳಿದ್ದಕ್ಕೆ ಸಮಂಜಸವಾದ ಉತ್ತರ ದೊರೆಯಲಿಲ್ಲ. ಪೂಜೆ ಹಾಕಿಸಿದ್ದಾಯಿತು. ಎಷ್ಟೋ ಹರಸಿಕೊಂಡದ್ದಾಯಿತು. ಚಿನ್ನಿಯು ಅನ್ನಾ ಹಾರವಿಲ್ಲದೆ ಕಣ್ಣೀರನ್ನು ಸುರಿಸುತ್ತ ಮಗುವಿನ ಬಳಿಯಲ್ಲೇ ಕುಳಿತು ಕೊಂಡಿದ್ದಾಳೆ.

* * * * * *

ಕಗ್ಗತ್ತಲೆಯ ರಾತ್ರಿ. ಜಗತ್ತಿನ ಮೇಲು—ಕೀಳನ್ನು ಅವಹೇಳನ ಮಾಡುವುದೋ ಎಂಬಂತೆ ಅಲ್ಲಲ್ಲಿ ಒಂದೊಂದು ನಕ್ಷತ್ರಗಳು ಮಿಣಮಿಣನೆ ಪ್ರಕಾಶಿಸುತ್ತಿವೆ. ಪಟ್ಟಣದ ಆ ಭಾಗವೆಲ್ಲವೂ ನಿಶ್ಶಬ್ದವಾಗಿದೆ. ಗಿಡದ ಎಲೆಗಳು ಕೂಡ ಅಲ್ಲಾಡಲಿಲ್ಲ. ಬೀರನ ಗುಡಿಸಿಲಿನಲ್ಲಿ ಮಾತ್ರ ಸಣ್ಣದೊಂದು ಮಣ್ಣಿನ ಹಣತೆಯು ಮಿಣಕ್-ಮಿಣಕ್-ಎಂದು ಉರಿಯುತ್ತಿದೆ. ಬಳಲಿ ನಿದ್ರಿಸುತ್ತಿದ್ದ ಚಿನ್ನಿಯು ಒಮ್ಮಿಂದೊಮ್ಮೆ ಬೆಚ್ಚಿ ಎದ್ದಳು. ಬೀದಿಯ ಬಾಗಿಲನ್ನು ತೆರೆದಳು ಈ ಕಡೆ ಆ ಕಡೆ ಕಣ್ಣಿಗೆಟಕುವಷ್ಟು ದೂರ ನೋಡಿ ಬಂದು, ಮಲಗಿದ್ದ ಮಗುವಿನ ಹಣೆಗೆ ವಿಭೂತಿಯನ್ನು ಹಚ್ಚಿ ದೇವರಿಗೆ ಕೈ ಮುಗಿದಳು.

* * * * * *

ಅವಳು ಮಲಗಿದ್ದುದು ಸ್ವಲ್ಪ ಹೊತ್ತು. ಆ ಸ್ವಲ್ಪಹೊತ್ತಿನ ನಿದ್ರೆಯ ಲ್ಲವಳೊಂದು ಕನಸು ಕಂಡಳು. ಮೃತನಾದ ಬೀರನು ನಾಲ್ಕು ವರ್ಷಗಳ ನಂತರ ಬಂದಿದ್ದಾನೆ. ಮಗುವನ್ನು ಜೋಪಾನವಾಗಿ ನೋಡಿಕೊಳ್ಳುವಂತೆ ಚಿನ್ನಿಗೆ ಹೇಳಿದನು. "ಮಗುವಿನ ಕಾಯಿಲೆಗೆ ಔಷಧಿಯೇನೂ ಬೇಡ. ಮಹ ದೀಶ್ವರ ಸ್ವಾಮಿ ದೇವಾಲಯದ ಧ್ವಜಸ್ತಂಭದಡಿ ಮಗುವನ್ನು ಮಲಗಿಸಿ ಕರ್ಪೂರಾರತಿ ಮಾಡು. ಮಗುವು ಸ್ವಸ್ಥವಾಗುತ್ತದೆ" ಎಂದು ಹೇಳಿ ಗುಡಿ ಸಲಿನ ಬಾಗಿಲನ್ನು ದಾಟಿ ಹೋದಂತಾಯಿತು. ಆಗ ಚಿನ್ನಿಗೆ ಎಚ್ಚರವಾಯಿತು.

* * * * * *

ಕನಸನ್ನು ನೆನೆದು ಚಿನ್ನಿಯು ಚಿಂತೆಗೀಡಾದಳು. “ದೇವಾಲಯ, ದೇವರು ಎಲ್ಲವೂ ಉತ್ತಮ ವರ್ಗದವರ ಸ್ವತ್ತುಗಳು. ದೇವಸ್ಥಾನದಾಚೆ ನೂರೈವತ್ತು ಗಜದ ವರೆಗೆ ಮಾದಿಗರು ತಿರುಗಾಡಬಾರದು. ಒಂದು ವೇಳೆ ಹಾದಿ ತಪ್ಪಿ ಯಾರಾದರೂ ಬಂದರೆ ತೀರಿತು. ಆ ಗ್ರಾಮದ ಹೆಗ್ಗಡೆಯ ಮನೆಯ ಮುಂದಿರುವ ಮರಕ್ಕೆ ಅವನನ್ನು ಕಟ್ಟಿ ಅವನ ಮೈ ಚರ್ಮವನ್ನು ಸುಲಿದುಬಿಡುವರು. ಆದರೆ ನಾಲ್ಕು ವರ್ಷಗಳ ನಂತರ ಬೀರನು ತನ್ನ ಗುಡಿಸಲನ್ನು ಹುಡುಕಿಕೊಂಡು ಬಂದು ಹೇಳಿ ಹೋಗಿದ್ದಾನೆ. ತನ್ನ ಬೆನ್ನಿನ ಚರ್ಮವನ್ನು ತಾನೇ ಸುಲಿದಾರು! ಸುಲಿದರೆ ಚಿಂತೆಯಿಲ್ಲ. ಮಗುವು ಜೀವಿಸಿದರೆ ಅಷ್ಟೇ ಸಾಕು. ಮಹದೀಶ್ವರನ ಸನ್ನಿಧಿಗೆ ಮಗುವನ್ನು ಕರೆದುಕೊಂಡು ಹೋಗದೆ ಮಗುವು ಸತ್ತುಹೋದರೆ ನನಗೆ ಮುಂದೆ ಯಾರು ಗತಿ?” ಎಂದು ಬಹಳ ಹೊತ್ತು ಚಿಂತಿಸಿ ಕೊನೆಗೊಂದು ನಿಶ್ಚಯ ಮಾಡಿಕೊಂಡಳು.

* * * * * *

ಮಾರನೆಯ ದಿನ ಬೆಳಿಗ್ಗೆ ಎಂಟು ಘಂಟೆಯ ವೇಳೆ. ಎಲೆಯಡಿಕೆಯನ್ನುಗಿಯುವುದಕ್ಕೆಂದು ದೇವಾಲಯದ ಪೂಜಾರಿಯು ಈಚೆಗೆ ಬಂದನು. ಧ್ವಜಸ್ತಂಭಕ್ಕೆ ಸ್ವಲ್ಪ ದೂರದಲ್ಲಿ ಪಂಚಮ ಸ್ತ್ರೀಯೊಬ್ಬಳು ಮಗುವನ್ನು ಮಲಗಿಸಿ ನಿಂತಿದ್ದಾಳೆ. ಏನಾಶ್ಚರ್ಯ! ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತಾಯಿತು ಪೂಜಾರಿಗೆ. ಬಂದಿತು ರೌದ್ರಾವತಾರ. ಕನ್ನಡ ಮಾತಿನಲ್ಲಿ ಕರ್ಣಾಟಕದಲ್ಲಿ ಎಷ್ಟೊಂದು ಬೈಗಳ ಶಬ್ದಗಳು ರೂಢಿಯಲ್ಲಿವೆಯೋ ಅಷ್ಟೊಂದು ಬೈಗಳನ್ನೂ ಆ ಮಹದೀಶ್ವರನ ಎದುರಿನಲ್ಲೇ ಬೈದಾಯಿತು. “ಆ ಮೂರ್ಖ ಗಾಂಧಿಯು ಕರ್ಣಾಟಕಕ್ಕೆ ಬಂದ ನಂತರವಂತೂ ಇವರನ್ನು ಕೇಳುವವರೇ ಇಲ್ಲ! ಇವರ ಪಾರುಪತ್ಯವೇ ಎಲ್ಲೆಲ್ಲಿ ನೋಡಿದರೂ! ಇವರಿಗೆಷ್ಟು ಕೊಬ್ಬು! ಇನ್ನು ಈ ಚಳಿಯಲ್ಲಿ ತಣ್ಣೀರಿನಲ್ಲಿ ಮುಳುಗಿ ಸಾಯಬೇಕು. ಲೋ ಸಿದ್ದಾ! ಹೋಗಿ ಹೆಗ್ಗಡೆಯವರನ್ನು ಕರೆದುಕೊಂಡು ಬಾ” ಎಂದು ಹೇಳಿ ಮನೆಯೊಳಕ್ಕೆ ಹೊರಟು ಹೋದರು. ಮೈಲಿಗೆ, ಕುಂಭಾಭಿಷೇಕ, ಸಂಪ್ರೋಕ್ಷಣೆ, ವರಮಾನ, ದಕ್ಷಿಣೆ ಇವುಗಳು ಅವನ ಮನಸ್ಸಿನಲ್ಲಿ ಒಂದರ ಹಿಂದೊಂದು ಬರತೊಡಗಿದವು.

* * * * * *

ದೇವಾಲಯದೆದುರಿನಲ್ಲಿ ದೊಡ್ಡದೊಂದು ಗುಂಪು ಕೂಡಿತು. ಮಗುವನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಚಿನ್ನಿಯು ಕುಳಿತಿದ್ದಾಳೆ. ತಾನು ಮಾಡಿದ್ದು ನ್ಯಾಯವೆಂಬುದೂ, ಹಾಗೆ ಮಾಡಲು ತನಗೆ ಹಕ್ಕುಂಟೆಬುದೂ ಅವಳ ಅಭಿಪ್ರಾಯ. ತನ್ನನ್ನು ಆದರಿಸಲು ಚಾಟಿಯು ಕಾದು ನಿಂತಿದೆ. ಆ ಗ್ರಾಮದ ಹೆಗ್ಗಡೆಯು ರೌದ್ರಾವತಾರವನ್ನು ತಾಳಿ ಎದುರಿನಲ್ಲಿ ನಿಂತಿದ್ದಾನೆ. ಕಗ್ಗಲ್ಲೂ ಕರಗುವಂತಹ ದೀನ ಸ್ವರದಿಂದ ಚಿನ್ನಿಯು ತನ್ನ ಅಹವಾಲನ್ನು ಹೇಳಿಕೊಂಡಳು. "ಲೋ! ಯಾರಲ್ಲಿ? ಇವಳಿಗೆ ಪಿತ್ತ ನೆತ್ತಿಗೆ ಹತ್ತಿದೆ. ಮುಚ್ಚು ದೇವಾಲಯದ ಬಾಗಿಲನ್ನು. ಈ ನಾಯಿಯು ಎಲ್ಲಾದರೂ ಒಳಗೆ ಹೋದೀತು. ಊರೊಳಕ್ಕೆ ಹೋಗಿ ನಾಲ್ಕಾಳುಗಳನ್ನು ಕರೆದುಕೊಂಡು ಬಾ" ಎಂದು ಕಟ್ಟಪ್ಪಣೆಯಿತ್ತನು ಹೆಗ್ಗಡೆಯು. ಚಿನ್ನಿಗೆ ಅರ್ಧಚಂದ್ರ ಪ್ರಯೋಗವಾಯಿತು. ದೇವಾಲಯದ ಬಾಗಿಲುಗಳು ಬಂಧಿಸಲ್ಪಟ್ಟವು.

* * * * * *

ಅಲ್ಲಿದ್ದವರಲ್ಲೊಬ್ಬನು ಸಮೀಪಲ್ಲಿದ್ದ ನಾಯೊಂದನ್ನು ಚಿನ್ನಿಯ ಮೇಲೆ 'ಛೂ'ಬಿಟ್ಟನು. ಮತ್ತೊಬ್ಬನು ಕಲ್ಲುಗಳನ್ನೆಸೆಯಲಾರಂಭಿಸಿದನು. "ಅಯ್ಯೋ! ಈಶ್ವರಾ! ಈ ಶ್ವಾನಕ್ಕಿರುವ ಮರ್ಯಾದೆಯೂ ಗೌರವವೂ ಈ ಪಂಚಮ ಸ್ತ್ರೀಗಿಲ್ಲವೇ? ನನ್ನನ್ನು ಕೊಂದುಬಿಟ್ಟರೂ ಸರಿ. ಈ ಮಗುವನ್ನು, ಈ ನನ್ನ ಜೀವನ ಸರ್ವಸ್ವವನ್ನು ಮಾತ್ರ ರಕ್ಷಿಸಿರಿ; ಉಳಿಸಿರಿ; ಕಾಪಾಡಿರಿ. ನನಗೆ ಪುತ್ರಭಿಕ್ಷೆಯನ್ನು ಕೊಡಿರಿ" ಎಂದು ಕಣ್ಣೀರು ಸುರಿಸುತ್ತಾ ಅಂಗಲಾಚಿ ಬೇಡಿದಳು.

* * * * * *

ಆಳುಗಳು ಬಂದರು. ಅವಳನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋಗಿ ದಂಡಿಸುವುದು ನಿಶ್ಚಯವು. ಆ ಸಮಯದಲ್ಲಿ "ಅಮ್ಮಾ" ಎಂದು ಮಗುವು ಅರಚಿತು. "ಮಹದೀಶ್ವರಾ! ನನ್ನ ಮಗುವನ್ನು ಅನ್ಯಾಯವಾಗಿ ಸಾಯಿಸುವರಲ್ಲಾ!" ಎಂದು ಕಲ್ಲೂ ಕರಗುವಂತೆ ಗೋಳಾಡಿದಳು. ಎರಡಾವರ್ತಿ ದೀರ್ಘಶ್ವಾಸವನ್ನು ಬಿಟ್ಟು ಮಗುವು ತಣ್ಣಗಾಯಿತು. ಚಿನ್ನಿಯು ಮಗುವಿನ ನೆತ್ತಿಯನ್ನು ಮುಟ್ಟಿ ನೋಡಿದಳು. ಬೆಚ್ಚಿದಳು. ಅವಳಲ್ಲೊಂದು ವಿಧವಾದ ಬದಲಾವಣೆಯುಂಟಾಯಿತು. ಅಳುವುದನ್ನು ನಿಲ್ಲಿಸಿದಳು. ಎದ್ದು

ನಿಂತಳು. ಆಗವಳನ್ನು ಯಾರಾದರೂ ನೋಡಿದರೆ ಸಾಕ್ಷಾತ್ ಮಹಾಕಾಳಿ ಯೆಂದೇ ಭಾವಿಸುತಿದ್ದರು.

* * * * * *

"ಇನ್ನೀ ದೇವಾಲಯಗಳೇಕೆ? ಅವುಗಳನ್ನು ಮುಚ್ಚಿರಿ. ದೇವರನ್ನು —ನಿಮ್ಮ ಕೈಗೊಂಬೆಯಾಗಿರುವ—ಆ ದೇವರನ್ನು ಒಳಗಿಟ್ಟು ಭದ್ರವಾಗಿ ಬೀಗ ಹಾಕಿರಿ! ಎದುರಿನಲ್ಲಿದ್ದರೆ ಈ ಅನ್ಯಾಯವು ಕಣ್ಣಿಗೆ ಬಿದ್ದೀತು! ನನಗಿನ್ನು ಈ ದೇವರು ಬೇಡ—ದೇವರ ದಯೆ ಬೇಡ—ನನ್ನ ಮಗನೊಂದಿಗೆ ನಾನೂ ಹೋಗುತ್ತೇನೆ. ದೇವನೆಲ್ಲಿ? ಅವನಿಲ್ಲ. ಅವನಿಲ್ಲದ್ದರಿಂದಲೇ ಹೀಗೆಲ್ಲಾ ನಡೆಯುತ್ತಿದೆ. ದೇವನೆಲ್ಲಿ?—ಎಲ್ಲಿ ಆ ದೇವ?—ಆ ದೇವದೇವನೆಲ್ಲಿ?" ಎಂದು ಉನ್ಮಾದಿನಿಯಂತೆ ಕೂಗುತ್ತಾ ಮಗುವಿನ ಪ್ರೇತವನ್ನು ಕೆಳಗೆ ಹಾಕಿ ಓಡಿ ಹೋದಳು. ಇಷ್ಟು ಹೊತ್ತೂ ಅಲ್ಲಿ ನೆರೆದಿದ್ದವರಲ್ಲಿ ಒಬ್ಬರೂ ಬಾಯ್ಬಿಡಲಿಲ್ಲ. ನಿಶ್ಶಬ್ದ—ನೀರವ. ದುಃಖಾತಿರೇಕದಿಂದ ಮನುಷ್ಯನ ಕ್ರೌರ್ಯವು ಶಾಂತ ವಾಗುತ್ತದೆ. ಆದರೆ ಮರು ಕ್ಷಣದಲ್ಲಿಯೇ ದೂರ ಸರಿದಿದ್ದ ಅಹಂಕಾರ, ಗರ್ವ ಮೊದಲಾದ ಭೂತಗಳು ಸೇರಿಕೊಳ್ಳುತ್ತವೆ.

* * * * * *

ಮಗುವಿನ ಪ್ರೇತವನ್ನು ಮಾದಿಗರು ಹೊತ್ತುಕೊಂಡು ಹೋಗಿ ಅಂತಿಮ ಸಂಸ್ಕಾರವನ್ನು ಮಾಡಿದರು. ಆ ಕೇರಿಯೆಲ್ಲಾ ಆ ಮಗುವಿಗಾಗಿ ಕಣ್ಣೀರು ಸುರಿಸಿತು. "ಈ ಪಾಪಕ್ಕೆ ಹೊಣೆ ಯಾರು? ಈ ದೋಷವು ಯಾರನ್ನು ಸೇರುವುದು?" ಎಂಬ ಪ್ರಶ್ನೆಯು ಆ ಅಗ್ರಹಾರದಲ್ಲೇ ರಹಸ್ಯವಾಗಿ ಕೇಳಲ್ಪಡು ತ್ತಿತ್ತು. ರೈತರು ಉನ್ಮತ್ತಳಾದ ಚಿನ್ನಿಯನ್ನು ಅಲ್ಲಲ್ಲಿ ಹುಡುಕಿ ನೋಡಿದರು. ಎಲ್ಲೂ ಸಿಕ್ಕಲಿಲ್ಲ. ಒಂದು ವೇಳೆ ಮೇಲಿನ ಲೋಕಕ್ಕೆ ಹೋಗಿ ಭಗವಂತನ ಬಳಿ ತನ್ನ ಕಷ್ಟವನ್ನು ಹೇಳಿಕೊಳ್ಳುತ್ತಿರಬಹುದೆಂದು ತೀರ್ಮಾನಿಸಿದರು. ಆದರೆ ಅವಳು ಹೇಳಿದ "ದೇವನೆಲ್ಲಿ" ಎಂಬ ಪ್ರಶ್ನೆಯು ಮಾತ್ರ ಎಲ್ಲರ ಕಿವಿ ಗಳಲ್ಲಿಯೂ ಇನ್ನೂ ಕೇಳುತ್ತಿದೆ.

**"ದೇವನೆಲ್ಲಿ?"**



## ಶ್ರೀ ಕುಡ್ಪಿ ವಾಸುದೇವ ಶೆಣ್ಯೈಯವರು, ಮಂಗಳೂರು

ಇವರು ಮಂಗಳೂರಿನ 'ಪ್ರಭಾತ' ವಾರ ಪತ್ರಿಕೆಯ ಸಂಪಾದಕರು. ಉತ್ತಮ ವಿಡಂಬನ ಸಾಹಿತಿಗಳು. ಹಾಸ್ಯದ ಕತೆಗಳು, ಹರಟೆಗಳು ಇವನ್ನು ಬರೆಯುವುದರಲ್ಲಿ ಸಿದ್ಧ ಹಸ್ತರು. 'ಜೀವನದ ಸೊಗಸು' ಎಂಬ ಚಿಕ್ಕ ಕತೆಗಳ ಸಂಗ್ರಹವನ್ನು ಪ್ರಕಟಿಸಿದ್ದಾರೆ.

ಉಚ್ಚ ಶ್ರೇಣಿಯ ಹಾಸ್ಯಗಳನ್ನು ಬರೆಯುವುದರಲ್ಲಿ ಇವರ ಹಸ್ತವು ಕುಶಲವಾಗಿದೆ. ಇವರ ವಿಡಂಬನಾತ್ಮಕ ಕತೆಗಳೆಲ್ಲ ಕನ್ನಡ ಸಾಹಿತ್ಯದಲ್ಲಿ ಉತ್ತಮ ತರಗತಿಗೆ ಸೇರಲು ಯೋಗ್ಯವಾಗಿವೆ. ಎಂತಹ ಗಹನ ವಿಚಾರವನ್ನೂ ಹಾಸ್ಯದ ಸುಳಿಯಲ್ಲಿ ಕೆಡಹಿ ನಗೆಯ ಗುಳ್ಳೆಗಳನ್ನು ಎಬ್ಬಿಸಿ ಬಿಡುತ್ತಾರೆ. ವ್ಯಂಗ್ಯ ಹಾಸ್ಯಪೂರ್ಣ ಕಥೆಗಳನ್ನು ಚೆನ್ನಾಗಿಯೇ ಬರೆಯುತ್ತಾರೆ. ಅತ್ಯಂತ ಸಾಮಾನ್ಯದಿಂದ ಅತ್ಯಂತ ಗಹನದ ವರೆಗಿನ ಎಲ್ಲ ವಿಷಯಗಳೂ ಇವರಿಗೆ ಕಥಾವಸ್ತುಗಳಾಗುತ್ತವೆ. ಎಲ್ಲೆಲ್ಲಿಯೂ ಒಂದೇ ತೆರನಾದ ನಗೆ. ಸಾಮಾನ್ಯವಾಗಿ ಹಾಸ್ಯ ಯೋಗ್ಯವಾದ ವಿಷಯಗಳನ್ನೇ ಎತ್ತಿಕೊಂಡು ನಗೆಗೀಡುಮಾಡುವುದು ಎಲ್ಲರ ಸ್ವಭಾವವಾದರೆ ತಮಗೆ ಸಿಕ್ಕಿದ ಎಂತಹ ವಸ್ತುವನ್ನೂ ನಗೆಗೀಡುಮಾಡುವುದು ಶೆಣ್ಯೈಯವರ ವೈಶಿಷ್ಟ್ಯ. ಇದಕ್ಕೆ ಸರಿಯಾಗಿ ಇವರ ಶೈಲಿಯೂ ಫಲಿಸಿದೆ.

# ಹಣವೆಂಬ ಹೆಣ

ಕುಡ್ವಿ ವಾಸುದೇವ ಶೆಣೈಯವರು

ಭರ್ತೃಹರಿಗೂ ತಿಮ್ಮನಾಯಕರಿಗೂ ಭೇದವೆಂದರೆ ಇಷ್ಟು—ಭರ್ತೃಹರಿಯು ವಿದ್ಯೆಯನ್ನು ಗುಪ್ತ ಧನವೆಂದು ಕರೆದನು; ತಿಮ್ಮನಾಯಕರು ಗುಪ್ತ ಧನವನ್ನೆ ವಿದ್ಯೆಯೆಂದು ಕರೆಯುತಿದ್ದರು.

"ಹಣವನ್ನು ನೀವು ನಿಷ್ಪ್ರಯೋಜಕ, ನಶ್ವರ, ದುಃಖಸಾಗರ ಇತ್ಯಾದಿ ಗುಣವಾಚಕಗಳಿಂದ ಸಂಬೋಧಿಸಬಹುದು. ಆದರೆ, ನೀವು ಯಾವ ಬಾಯಿಯಿಂದ ಅದನ್ನುಸಿರುವಿರೋ, ಅದನ್ನು ಹೊರಡಿಸಲು ಚೈತನ್ಯ ಕೊಡುವ ಆಹಾರಕ್ಕಾಗಿ ಆ ಧನವೇ ನಿಮಗೆ ಬೇಕಾಯಿತು. ಮಾನವನಿಗೆ ವಿವೇಕ ವಿದ್ದಷ್ಟು ಕಾಲ ಹಣಕ್ಕೆ ಬೆಲೆಯಿದೆ" ಎಂದು ತಿಮ್ಮನಾಯಕರು, ಬಡ್ಡಿಗೆ ಹಣ ಕೇಳಲು ಬಂದ ನರಸಪ್ಪನವರೊಡನೆ ಹೇಳುತಿದ್ದರು.

ನಾಯಕರ ಸೊಸೆಯು, ಪದ್ಧತಿಯಂತೆ ಆ ಕೊಠಡಿಯಲ್ಲಿ ಕುಳಿತು, ಮಗುವನ್ನಾಡಿಸುತಿದ್ದವಳು "ಶೂ ನಾಯಿ!" ಎಂದು, ತಿಜೋರಿಯ ಕಡೆಗೆ ಬೆರಳು ತೋರಿಸಿ ಚಂಡಿ ಹಿಡಿದಳುವ ಮಗುವನ್ನು ಸಮಾಧಾನಗೊಳಿಸಲೆತ್ನಿಸಿದಳು.

ನಾಯಕರು ಸರಕ್ಕನೆ ಆ ಕಡೆ ತಿರುಗಿ, "ನೀನು ನಿತ್ಯವೂ ಇಲ್ಲಿ ಬಂದು ಕುಳಿತು ಆ ಮಗುವಿಗೆ ತಿಜೋರಿಯ ಅಭ್ಯಾಸ ಮಾಡಿಸುತ್ತೀ. ಅದು ರೂಪಾಯಿಗಳೊಡನೆ ಆಡಬೇಕೆಂದು ಹಟ ಹಿಡಿಯುತ್ತದೆ!" ಎಂದು, ನೊಂದ ನುಡಿಯಲ್ಲೆಂದರು.

ಸೊಸೆಯು ಮೌನವಾಗಿದ್ದಳು. ಮಗುವು ಅಳುತ್ತಲೇ ಇತ್ತು. ನಾಯಕರು ನರಸಪ್ಪನವರು ತಂದ ಬಂಗಾರದ ಒಡವೆಯನ್ನು ಕಾಗದದಲ್ಲಿ ಸುತ್ತಿ ಆ ತಿಜೋರಿಯಲ್ಲಿಟ್ಟು, ನೂರು ರೂಪಾಯಿಗಳನ್ನು ಎಣಿಕೆಮಾಡಿ ನರಸಪ್ಪನವರಿಗೆ ಕೊಟ್ಟು,—"ನಿಮಗೆ ತಿಳಿದೇ ಇದೆ—ಬಡ್ಡಿ ಹದಿನೆಂಟಾದರೂ ಪ್ರಾಮಾಣಿಕತನ ಇಲ್ಲೇ ಎಂದು! ನಿಮಗೆ ಯಾವ ದಿನ ಹಣ ಬೇಕಾದರೂ ಬರಬಹುದು. ಆದರೆ, ಬಡ್ಡಿ ತೆರುವ ವಾಯಿದೆಯನ್ನು ಮಾತ್ರ ನೀವು ನೆನಪಿನಲ್ಲಿಟ್ಟುಕೊಳ್ಳುವುದು ಅವಶ್ಯ" ಎನ್ನುತ್ತ, ಜಗಲಿ ತನಕವೂ ನರಸಪ್ಪನವರನ ಮೆಟ್ಟಲಿಂದ ಕೆಳಗಿಳಿಸಿ ಕೊಡಲು ಹೋದರು.

ಸೊಸೆಯ ಆ ಅಲಕ್ಷ್ಯಭಾವದ ನೇತ್ರಗಳು ಫಕ್ಕನೆ ಉಜ್ವಲಿಸಿದಂತೆ ತೆರೆದುಕೊಂಡುವು. ನಾಯಕರ ಆ ಮಹಾ ತಿಜೋರಿಯು ಆಕೆಯ ಕಣ್ಣುಗಳ ಕರಿಯ ಬಿಂಬದಲ್ಲಿ ಪ್ರತಿಬಿಂಬಿತವಾಯಿತು. ಶತ್ರುವನ್ನು ಘಾಸಿಗೊಳಿಸುವ ನಾಗರ ಹಾವಿನಂತೆ ಬುಸಕ್ಕೆಂದು ಆಕೆಯ ಕೈಯು ತಿಜೋರಿಯೊಳಗೆ ಹಾರಿತು. ಐದು ಬೆರಳುಗಳು ರೂಪಾಯಿ ನಾಣ್ಯಗಳ ಮೇಲೆ ಒಂದು ಕ್ಷಣ ವಿರಮಿಸಿದುವು; ಮರುಕ್ಷಣದಲ್ಲಿ ಅಲ್ಲೆ ಬಿಗಿಯಲ್ಪಟ್ಟು—ಕೆಲವು ನಾಣ್ಯಗಳ ಸಮೇತ ಹೊರಗೆ ಬಂದುವು. ಲಲನೆಯು ಅವುಗಳನ್ನು ತನ್ನ ಸೀರೆಸೆರಗಿನಲ್ಲಿ ಹಾಕಿಕೊಂಡಳು. ಮಗುವು ತಟ್ಟನೆ ಅಳುವದನ್ನು ನಿಲ್ಲಿಸಿತು!

ಸೊಸೆಯು ಆ ಮೇಲೆ ಮಗುವನ್ನು ಅಲ್ಲೆ ತೊರೆದು, "ಎಂತಹ ಮಗು! ನಾನು ರೂಪಾಯಿ ಮುಷ್ಟಿಯಿಕ್ಕಿ ತೆಗೆದ್ದಲ್ಲದೆ ಅಳು ನಿಲ್ಲಿಸದು! ಇನ್ನೂ ಬಾಯಿ ಬರುವುದಿಲ್ಲ........ಮುಂದೆ?........" ಎನ್ನುತ್ತ ತನ್ನ ಮನೆಕೆಲಸಗಳಿಗಾಗಿ ಹೊರಟುಹೋದಳು.

ನಾಯಕರು ಕೊಠಡಿಗೆ ಬಂದರು. ಮಗು ಸುಮ್ಮನೆ ಕುಳಿತು ಆಡುತಿತ್ತು. ಆದರೊಡನೆ ಒಂದೆರಡು ಮಾತುಗಳನ್ನಾಡುತ್ತ, ತಮ್ಮ ಲೆಕ್ಕಗಳನ್ನು ಬರೆಯ ತೊಡಗಿದರು. ಮಗು ಆಡಿತು; ನಾಯಕರು ಲೆಕ್ಕಗಳನ್ನು ಬರೆದರು. ಲೆಕ್ಕಗಳು ಮುಗಿವಾಗ ಮಧ್ಯಾಹ್ನ ಹನ್ನೆರಡು ಘಂಟೆ ದಾಟ ಹೋಗಿದ್ದಿತು. ನಾಯಕರು ಎದ್ದು, "ನಾನ್ಯಾಕೆ ಪರದೇಶಿ................" ಎಂಬ ದಾಸರ ಪದವನ್ನು ಮೆಲ್ಲಗೆ ಹಾಡುತ್ತ, ಲೆಕ್ಕ ಪುಸ್ತಕಗಳನ್ನು ಒಂದೊಂದಾಗಿ ತಿಜೋರಿಯೊಳಗಿಡಲಾರಂಭಿಸಿದರು.

"ಇನ್ನೂ ಸ್ನಾನಕ್ಕೆ ಹೋಗುವುದಿಲ್ಲವೇ?" ಎಂದು ಸೊಸೆಯ ಕೂಗು ಅಡಿಗೆ ಕೋಣೆಯಿಂದ ಕೇಳಿಸಿತು "ಹ್ಞಾ!" ಎನ್ನುತ್ತ ನಾಯಕರು ಅವಸರವಸರವಾಗಿ ಪುಸ್ತಕಗಳನ್ನೆಲ್ಲ ತಿಜೋರಿಯೊಳಗೆ ತುರುಕಿ, ಧಡಲ್ಲೆಂದು ಬಾಗಿಲಿಕ್ಕಿ, ಬೀಗ ಹಾಕಿ, ಸ್ನಾನಾರ್ಥ ತೆರಳಿದರು.

ಮಾವನನ್ನು ಸ್ನಾನಕ್ಕೆ ಕಳುಹಿಸಿಕೊಟ್ಟು, ಸೊಸೆಯು ಪುನಃ ಆ ಭಂಡಾರ ಗೃಹಕ್ಕೆ ಬಂದಳು. ವಿಸ್ಫುರಿತ ನಯನಗಳಿಂದ ಆ ಉಕ್ಕಿನ ರಾಕ್ಷಸನನ್ನು ನೋಡಿ, ದುರಾಶೆಯಿಂದ ಪುನಃ ಅದರ ಬಾಗಿಲಿನ ಕಡೆಗೆ ಕೈ ನೀಡಿ, ಮಾವನು ಎಲ್ಲಾದ್ಯರೂ ಬೀಗವಿಕ್ಕದೆ ಹೋಗಿರಬಹುದೇ ಎಂದ ಪರೀಕ್ಷಿಸಿ

ದಳು. ಆದರೆ, ಖಂಡಿತವಾಗಿ ಬೀಗವಿಕ್ಕಲ್ಪಟ್ಟಿತ್ತು. ಸ್ವಲ್ಪ ನಿರಾಶೆಯುಂಟಾಗಲು,—"ರಾಜೂ!" ಎಂದು ತನ್ನ ಮಗುವನ್ನು ಕರೆದಳು. ರಾಜುವು ಅಲ್ಲಿರಲಿಲ್ಲ. "ಎರಡೂವರೆ ವಯಸ್ಸಿನೊಳಗೆ ಈ ಮಗುವಿಗೆ ಊರೆಲ್ಲ ತಿರುಗಿ ಬರುವ ಆಟ!" ಎಂದುಕೊಳ್ಳುತ್ತ, ಮಾವನಿಗಾಗಿ ಎಲೆಯಿಡಲು ಹೊರಟುಹೋದಳು.

ಅಪರಾಹ್ನ ಒಂದೂವರೆ ಘಂಟೆಗೆ ಸರಿಯಾಗಿ ನಾಯಕರ ಮಗ ಸುಂದರನು ಮನೆಗೆ ಬಂದನು. ಊರಲ್ಲಿ ಅತಿಕಡಮೆ ದರದಲ್ಲಿ ಯಾರು ಧಾನ್ಯ ಮತ್ತು ತರಕಾರಿಗಳನ್ನು ವಿಕ್ರಯಿಸುತ್ತಿರುವರೋ, ಅವರನ್ನು ಹುಡುಕಿ, ಅವರಿಂದಲೇ ಕೊಂಡುಕೊಂಡು ತರಬೇಕೆಂದು ನಾಯಕರು ಸುಂದರನಿಗೆ ನಿತ್ಯವೂ ಬುದ್ಧಿವಾದ ಹೇಳುತಿದ್ದರು. ಅದುವೇ ಮಾನವನು ಕಲಿಯಬೇಕಾದ ಏಕಮಾತ್ರ ಆವಶ್ಯಕ ವಿದ್ಯೆಯೆಂದು ಅವರ ಮತವಾಗಿತ್ತು.

ಸುಂದರನಿಗೆ ಹಣದ ಮೇಲೆ ಪ್ರೇಮವಿತ್ತು; ಆದರೆ, ಮಗುವಿನ ಮೇಲೆ ಹೆಚ್ಚಿತ್ತು. ಮನೆಗೆ ಬಂದವನೇ "ರಾಜೂಽ!" ಎಂದು ಕರೆದನು.

ರಾಜು ಬರಲಿಲ್ಲ.

ಪುನಃ "ರಾಜೂಽಽ!" ಎಂದನು.

ರಾಜು ಬರಲಿಲ್ಲ.

ಮತ್ತೊಮ್ಮೆ "ರಾಜೂಽಽಽ!" ಎಂದನು.

ರಾಜು ಬರಲಿಲ್ಲ.

ಸುಂದರನು ಕರೆಯುತ್ತಲೆ, ರಾಜುವು ಎಲ್ಲಿದ್ದರೂ ಓಡಿಬಂದು, ತಂದೆಯ ಹೆಗಲೇರಿ, ಆತನ ಕಿಸೆಯಿಂದ ಯಾವ ನಾಣ್ಯಗಳನ್ನಾದರೂ ತೆಗೆದು ನೋಡಿ ಸಂತೋಷಪಡುವುದು ನಿತ್ಯದ ಪದ್ಧತಿಯಾಗಿತ್ತು. "ಭೇಟು ಅಜ್ಜ!" ಎನ್ನುತಿದ್ದರು ಜನರೆಲ್ಲ. ನಾಯಕರಿಗೆ, ತನ್ನ ಮೊಮ್ಮಗನ ಈ ಪ್ರಶಂಸೆಯನ್ನು ಕೇಳಿ—ತನಗೂ ಗೌರವದ ಸಂಬೋಧನೆಯಿದೆಂದು ಹೊಳೆದು—ಸಂತೋಷದಿಂದ ಎದೆ ಉಬ್ಬುತಿತ್ತು.

ರಾಜು ಇಂದೆಲ್ಲಿ ಹೋದನು?—ಸುಂದರನು "ರಾಜೂಽ!" ಎಂದು ಕರೆಯುತ್ತ ಮನೆಯ ಕೊಠಡಿಗಳೆಲ್ಲವನ್ನೂ ಆಲೆದನು.

ಇಲ್ಲ, ಖಂಡಿತವಾಗಿಯೂ ರಾಜು ಇಲ್ಲ. ಸುಂದರನ ಪತ್ನಿ ಗಿರಿಜೆ ಹುಡುಕಿದಳು. ನಾಯಕರು ಹುಡುಕಿದರು. ತಂದೆ—ಮಗ—ಸೊಸೆ—ಮೂವರೂ ಕಳವಳಕ್ಕೊಳಗಾದರು.

"ತುಂಟ ಹುಡುಗ—ಇನ್ನು ಬರಬಹುದು. ಎಲ್ಲಿಯೋ ಆಡಲು ಹೋಗಿರುವನೆಂದು ತೋರುವುದು. ನೀನು ನನಗೆ ಅನ್ನ ಬಡಿಸು!" ಎನ್ನುತ್ತ ಮಾವನು ಅಡಿಗೆಕೋಣೆಗೆ ಹೋದನು. ಸೊಸೆಯು, ಕಸವಿಸಿಗೊಳ್ಳುತ್ತಿದ್ದಂತೆ ಮಾವನಿಗೆ ಅನ್ನ ಬಡಿಸಿದಳು. ನಾಯಕರು ಮಂಜೇಶ್ವರ ವೀರಯ್ಯನ ಹಣದ ವಾಯಿದೆ ದಾಟಿ ಎಷ್ಟು ತಿಂಗಳಾದುವು ಎಂದು ಫಕ್ಕನೆ ಆಲೋಚನೆಯಾಗಿ, ಬಕಬಕನೆ ಊಟಮಾಡ ತೊಡಗಿದರು.

ನಾಯಕರ ಊಟ ಮುಗಿಯಿತು. ಮಡಿ ವಸ್ತ್ರವನ್ನು ಬಿಸುಡಿ, ಬೇರೊಂದು ಧೋತರವನ್ನುಟ್ಟುಕೊಂಡು ತಿಜೋರಿಕೊಠಡಿಗೆ ಬಂದರು. ತಿಜೋರಿಯ ಬಾಗಿಲು ತೆಗೆದರು. ತಿಜೋರಿಯಿಂದ ಧೊಪ್ಪನೆ ರಾಜು ಕೆಳಗೆ ಬಿದ್ದನು.

ಶವ!

ನಿಮಿಷಾರ್ಧದಲ್ಲಿ ಗೃಹವು ಶೋಕದ ಕರ್ಕಶ ಗಾನದಿಂದ ತುಂಬಿ ಹೋಯಿತು!

ಅತ್ತೆಯಿಲ್ಲದ ಸೊಸೆಗೆ ತಾಳ್ಮೆ ಕಡಿಮೆಯಾಗಿರಬೇಕು. ಗಿರಿಜೆಯು ಕಣ್ಣೀರನ್ನೊರಸಿಕೊಂಡು, ಫಕ್ಕನೆ ರೌದ್ರಾವತಾರ ತಾಳಿದಳು. ಕೈಯಲ್ಲಿ, ಮನೆಗತ್ತಿ!

"ಅದೇನಮ್ಮ ?" ಎಂದು ಕಣ್ಣೀರನ್ನೊರಸುತ್ತ ಮಾವನು ಪ್ರಶ್ನಿಸಿದನು.

"ಏನು? ನಿನ್ನ ರುಂಡ ಹಾರಿಸುವ ಪುಟ್ಟ ಆಯುಧ!" ಎಂದಳು ಸಿಂಹಿಣಿ.

"ನನ್ನ ರುಂಡ?"—ನಾಯಕರು ಅವಾಕ್ಕಾದರು.

"ನಿನ್ನದೇ! ಸಂದೇಹವೇಕೆ ನಿನಗೆ?" ಎಂದಳು ಗಿರಿಜೆ.

"ಛೀ—ಹುಚ್ಚು ನಿನಗೆ!" ಎಂದರು ನಾಯಕರು.

"ಮುಚ್ಚು ಬಾಯಿ—ಮುದಿ ಕೋತಿ! ನಿಷ್ಠುರ ಹೃದಯದ ಪಿಶಾಚಿ! ನನ್ನ ಮುದ್ದು ಮಗುವಿನ ಕೊಲೆ ಮಾಡಿದ ನರ ರಾಕ್ಷಸ!............ತೆಗೆ ಆ ತಿಜೋರಿಯ ಬಾಗಿಲನ್ನು!"

ನಾಯಕರು ಭೀತಿಯಿಂದ ತಿಜೋರಿಯ ಮತ್ತೊಂದು ಬಾಗಿಲನ್ನು ತೆರೆದರು. ಸುಂದರನು ಮಂಕನಂತೆ ಕುಳಿತು ನೋಡುತಿದ್ದನು.

"ಸುರುವು ಆ ರೂಪಾಯಿಗಳನ್ನೆಲ್ಲ ಹೊರಗೆ!" ಎಂದಾಜ್ಞಾಪಿಸಿದಳು ಆ ನರರೂಪೀ ರಾಕ್ಷಸಿ.

ನಾಯಕರು ಯಂತ್ರದಂತೆ—ಆಕೆಯ ಆಜ್ಞಾನುಸಾರ—ತಿಜೋರಿಯಿಂದ ಹಣವನ್ನೆಲ್ಲ ಹೊರಗೆಳೆದು ಹಾಕಿದರು.

"ಕುಳಿತುಕೊಳ್ಳಿಲ್ಲಿ—ಹಣದ ಮಗುನೇ!" ಎಂದಳು ಗಿರಿಜೆ.

ನಾಯಕರ ಭೀತಿಯು ಹೆಚ್ಚಿತು. ಗಿರಿಜೆ ಆಗಲೇ ಸಂಕೋಚಪಡುತ್ತಿರುವ ಅವರ ಕಡೆಗೆ ಹಾರಿದಳು. ನಾಯಕರು ಫಕ್ಕನೆ ಹಿಂದಕ್ಕೆ ನೆಗೆದು, ಮನೆಯೊಳಗಿಂದ ಮಾಯವಾದರು.

ಗಿರಿಜೆ, ಗೋಡೆಯಿಂದ ನಾಯಕರ ಒಂದು ಪಟವನ್ನೆತ್ತಿ ಆ ತಿಜೋರಿಯೊಳಗೆ ಹಾಕಿ ಬಾಗಿಲು ಹಾಕಿದಳು. ಆ ಮೇಲೆ, ಆ ಹಣದ ರಾಶಿಯಲ್ಲಿ ಕುಳಿತು ತನ್ನ ಮೃತ ಬಾಲಕನ ಶವವನ್ನು ಎದೆಗಪ್ಪಿಕೊಂಡು, ಜೋಗುಳ ಪಾಡಿದಳು.

ಧನಪಿಶಾಚಿಯು, ಬಿಸಿಲಿಗೆ ಓಡುತ್ತಿರುವ ನಾಯಕರನ್ನು ದಾರಿಯಲ್ಲೆ ತಡೆದು, "ನಿನ್ನನ್ನು ಮುಕ್ತನನ್ನಾಗಿ ಮಾಡಿದೆ!" ಎಂದಳೆಂಬಂತೆ-ಕಾಲು ತಾಸು ಓಡುತ್ತಿರುವಷ್ಟರಲ್ಲೆ ಹೃದ್ವಿಕಾರವಾಗಿ 'ನಾಯಕ'ನೆಂಬ ಆ ಹುಲುಜೀವಿಯು ಭೂಶಾಯಿಯಾಯಿತು. ಅದೇ ಧನಪಿಶಾಚಿಯು ಗಿರಿಜೆಯನ್ನು ಮಾತ್ರ ಪೂರ್ಣ ತೊಲಗಲಾರದೆ ಆಕೆಯ ಮಿದುಳನ್ನೊಯ್ದಿತು. ಮಾವನ ಕೃಪಣತನದಿಂದ ಚೌರ್ಯವನ್ನು ಕಲಿತ ಸೊಸೆಯು ಜೀವನ್ಮೃತಳಾಗಲು ಕಾರಣವಾದ ಆ ಮಗುವಿನ ಶವವನ್ನು,—"ಹಣ ಕಂಡಲ್ಲದೆ ಅಳು ನಿಲ್ಲಿಸಲಾರದ ಈ ಚಿಕ್ಕ ಪೋರನು ಬೆಳೆದಾಗ ಏನು ಮಾಡುತಿದ್ದನೋ!" ಎಂದು ಆಶ್ಚರ್ಯ ಪಡುತ್ತ ಭೂದೇವಿ ತನ್ನ ಎದೆಗವಚಿಕೊಂಡಳು. ಸುಂದರನು ಮಾತ್ರ ಇದ್ದೂ ಸತ್ತು, ಸತ್ತೂ ಇರುವನು. ಅವನ ತಲೆ ಬರಿದಾಗಿದೆ! ಹೊಟ್ಟೆಯನ್ನು ಮಾತ್ರ ಯಾವ ದೇವತೆಯೋ ಕರುಣೆಗೊಂಡು ತುಂಬಿಸುತ್ತಿರುವಳು.

ಅವನನ್ನು ನೀವು ಯಾವಾಗಲಾದರೂ ಎಲ್ಲಿಯಾದರೂ ಭೇಟಿಯಾಗಿ "ಏನು ಸುಂದರಾ?" ಎಂದು ಪ್ರಶ್ನಿಸಿದರೆ,—

"ಹಣಕ್ಕೂ ಹೆಣಕ್ಕೂ ಭೇದವೇನು?" ಅವನದೇ ನಿಮಗೊಂದು ಪ್ರಶ್ನೆ.

---



## ಶ್ರೀ ದೇವೇಂದ್ರ ಶೇಣ್ವೆಯವರು, ಚೆಂಡಿಯೆ, ಉ. ಕ.

ಇವರು ಕವಿಗಳು, ಕತೆಗಾರರು ಮತ್ತು ಚಿತ್ರಕಾರರು. ಕತೆಗಳಲ್ಲಿ ಪ್ರಕಟವಾದುವು ಕಡಿಮೆಯಾದರೂ ತುಂಬ ಬರೆದಿದ್ದಾರೆ. ಸಮಾಜದ ಕುರುಡು ನ್ಯಾಯವನ್ನು ಹಳಿಯುವ ಕತೆಗಳೇ ಹೆಚ್ಚು. ಚಿಕ್ಕ ವಿಷಯವನ್ನು ಜಾಲ ಜಾಲವಾಗಿ ಹರಡಿ ತುಂಬ ಮಾತುಗಳಿಂದ ಅಲಂಕಾರ ಬದ್ಧವಾಗಿ ಮಧುರ ಶೈಲಿಯಿಂದ ಬಣ್ಣಿಸುತ್ತಾರೆ. ಚೆಲುವಾದ ಉಪಮಾ ರೂಪಕಗಳು ಮತ್ತು ಹೊಸ ಹೊಸ ರೀತಿಯ ಪ್ರಯೋಗಗಳು ಅಲ್ಲಲ್ಲಿ ಕಾಣ ಸಿಗುವವು. ಜೀವನದ ಸುಖಕ್ಕಿಂತಲೂ ದುಃಖದ ಕಡೆಗೆ ಇವರ ಮನಸ್ಸು ಹೆಚ್ಚಾಗಿ ಹರಿಯುತ್ತದೆ. ಸಾಹಿತ್ಯ ಪ್ರಪಂಚದಲ್ಲಿ ಹೊಸಬರಾಗಿ ತೋರಿದರೂ ಇವರ ಕತೆಗಳೂ ಕವಿತೆಗಳೂ ಉಚ್ಚ ಶ್ರೇಣಿಗೆ ಸೇರಲು ಯೋಗ್ಯವಾಗಿವೆ. ಕನ್ನಡಿಗರು ಇವರಿಂದ ಇನ್ನೂ ಹೆಚ್ಚಾದ ಸಾಹಿತ್ಯ ಸೇವೆಯನ್ನು ನಿರೀಕ್ಷಿಸಬಹುದು.

# ಉತ್ಪಾತ

ದೇವೇಂದ್ರ ಶೇಣವಿಯವರು

ಜನರ ಕೈಗೈಮೆಗಳು ಬಾಳುವುವು ಕಣ್ಮುಂದೆ
ಬರೆದ ಭಿತ್ತಿಯ ಚಿತ್ರದಂತೆ.
ಕಳೆದ ಬಾಳಿನ ಬೇಗೆ— ಕನಸಿನೊಡವೆಯ ತೆರದಿ
ಮಾಯವಾಗಿದೆ ಸೃಷ್ಟಿಯೊಳಗೆ.

ಕಡೆಂಗೋಡ್ಲು ಶಂಕರ ಭಟ್ಟ.

ಹಳ್ಳಿಯ ಸ್ವಾತಂತ್ರ್ಯದ ವಾತಾವರಣವನ್ನು ಮೆದ್ದು ಬೆಳೆದ ನನ್ನ ಜೀವನವು ಪಟ್ಟಣದ ತುಂಬು ಜನದ ಗಲಭೆಗೆ ಮೂಲತಃ ಹೇಸುತ್ತಿತ್ತು. ಆದರೆ ತಪ್ಪುತ್ತದೆಯೇ! ವೃತ್ತಿಯ ದೆಸೆಯಿಂದಲಾದರೂ ನಾನು ಪಟ್ಟಣದ ವಾಸವನ್ನೇ ಕೈಗೊಳ್ಳಬೇಕಾಗಿ ಬಂದಿತು. ಏಕಾಂತದ ಕೊಂಪೆಯಾದರೂ ಚಿಂತೆಯಿಲ್ಲ; ನೀರವವಾದ ಜಾಗೆಯೊಂದು ಬೀಡಾರಿಗೆ ಸಿಗಲೆಂದು ಎಣಿಸಿದೆ. ಅದೂ ಕೂಡಿಬಂದಿತು. ಸುತ್ತಲೂ ನಾಲ್ಕಾರು ಸಣ್ಣ ಮನೆಗಳಿರುವ ಕೇರಿಯನ್ನೇ ನಾನು ಒಲುಮೆಯಿಂದ ಸ್ವೀಕರಿಸಿದೆ. ಹೇಗೂ ನನ್ನ ದಿನಚರಿಯು ಹಳ್ಳಿಯ ರೀತಿಯಲ್ಲಿ ವ್ಯತ್ಯಾಸವಾಗದೆ ನಡೆಯುವಂತಾಯಿತು.

ನನ್ನ ಬೀಡಾರಿನ ಮಗ್ಗುಲ ಮನೆಯೇ ಅನಂತಾಚಾರ್ಯರದು. ಅವರದು ವೈದಿಕ ವೃತ್ತಿ. ಹಾಗೆಯೇ ಅವರ ಸಂಪಾದನೆಯೂ ಆದೇ ರೀತಿಯದಿತ್ತು. ಮನೆಯಲ್ಲಿ ಗೃಹಿಣಿಯಿರಲಿಲ್ಲ. ಮದುವೆಗಾಗಿ ಕೊಬ್ಬಿ ಬೆಳೆದ ಮಗಳೊಬ್ಬಳೇ ಅವರ ಸಂಸಾರದಲ್ಲಿಯ ಪ್ರೇಮದ ಕೇಂದ್ರ. ಬೇರಾರೂ ಕೇಳುವರಿಲ್ಲ; ಹೇಳುವರಿಲ್ಲ. ಇದ್ದ ಒಬ್ಬಳೇ ಮಗಳ ಯಾವ ಇಚ್ಛೆ, ಆಸೆಗಳನ್ನೂ ತಡೆದಿಡಲಾರದೆ, ನಾಲ್ವರಿಗೆ ಸೊಗಸುಗಾಣುವಂತೆ ಪ್ರಪಂಚ ನಿರ್ವಹಿಸುವುದರಲ್ಲಿಯೇ ಅವರ ಸಂಪಾದನೆಯೆಲ್ಲವೂ ಕರಗುತ್ತಿತ್ತು. ಹೀಗಾಗಿ ಈಚಿನ ಹತ್ತು ವರುಷಗಳ ಕಾಲದಲ್ಲಿ ಅವರಿಂದ ಒಂದು ಪೈ ಸಹ ಸಂಚಯವೆಂದು ಬೇರೆಯಾಗಿ ಇಡುವದಾಗಿರಲಿಲ್ಲ.

ಹೆಣ್ಣಿನಷ್ಟು ಭಾರ ಹೊನ್ನಿರದೆ, ಬರಿ ಮಾತಿನಿಂದ ಮದುವೆಯಾಗುತ್ತಿರಲಿಕ್ಕೆ ಇದೇನು ಕಲಿಕಾಲವಲ್ಲವೇ! ಆಚಾರ್ಯರಿಗೂ ಇದುವೇ ಹರಿಯದ

ಸಮಸ್ಯೆಯಾಗಬಿಟ್ಟಿತು. ಮನವೊಪ್ಪುವ ಸ್ಥಳ ದೊರೆಯದೆ, ಕಂಡರೂ ಕೂಡಿ ಬರದೆ, ಮದುವೆಯ ವಿಚಾರವು ಒಂದರ ಹಿಂದೊಂದು ವರ್ಷಾಕಾಲವನ್ನು ಆಳುತ್ತಲೇ ಸಾಗಿದ್ದಿತು.

ಅವರ ಮಗಳಂತೂ ಹತ್ತರಲ್ಲೊಬ್ಬಳೆಂದು ಅಂಗುಲಿನಿರ್ದೇಶ ಗೈದು ತೋರುವಷ್ಟು ರೂಪಸಂಪನ್ನೆ. ಪ್ರೇಕ್ಷಕರನ್ನು ಮುಗ್ಧಗೊಳಿಸುವಂತಹ ಪ್ರಮಾಣಬದ್ಧ ತುಂಬು ಅವಯುವಗಳ ಸೌಷ್ಟವ. ಇನ್ನು ಗುಣಗಳೋ, ಕೇಳುವದೇ ಬೇಡ; ಅಷ್ಟು ಅಪ್ರತಿಮ. ಇದು ಬರಿಯ ಬಾಯಿ ಮಾತಲ್ಲ; ಊಹೆಯ ಸಂಗತಿಯಲ್ಲ.

ಕಳೆದ ಐದಾರು ತಿಂಗಳ ಹಿಂದೆ ಅದನ್ನು ನಾನು ಅನುಭವಿಸಿ ಬಲ್ಲೆ. ನನ್ನಾಕೆ ಒಂದು ವಾರದ ಮಾತಿಗೆಂದು ತವರು ಹೋಗಿದ್ದಳು. ನಾನು ಮನೆಯಲ್ಲಿ ಬೇಯಿಸಿಕೊಳ್ಳುತ್ತಿದ್ದೆ. ಆದರೆ ಅದೇ ಕಾಲಕ್ಕೆ ಸರಿಯಾಗಿ, ಶೀತ ಜ್ವರವೊಂದು ಎಲ್ಲಿಂದಲೋ ಹಾರಿ ಬಂದು ನನ್ನನ್ನಪ್ಪಿ ಬಿಟ್ಟಿತು. ಹೋಟೇಲು ಸನಿಹದಲ್ಲಿಲ್ಲದ ಮೂಲಕ ಬೇಯಿಸಿಕೊಳ್ಳುವಷ್ಟು ಸಾವಧಾನವೂ ಇಲ್ಲದೆ, ಇಂದೊಂದು ಏಕಾದಶಿಯಾಗಲಿ ಎಂದುಕೊಂಡು ಸುಮ್ಮನೆ ಮಲಗಿಬಿಟ್ಟೆ. ಮತ್ತೆ ಈ ಸಂಗತಿ ಸಾವಿತ್ರಿ (ಆಚಾರ್ಯರ ಮಗಳು) ಗೆ ಹೇಗೆ ತಿಳಿಯಿತೋ, ತಾನಾಗಿಯೇ ನಮ್ಮಲ್ಲಿ ಬಂದು ಎಲ್ಲವನ್ನು ಅಣಿಮಾಡಿ, ಬೇಯಿಸಿಟ್ಟು, ಜವಾನನ ಮುಖಾಂತರ ನನಗೆ ತಿಳುಹಿ, ಜಾರಿಬಿಟ್ಟಿದ್ದಳು.

ಇಡಿಯ ವಾರ ಇದೇ ಕ್ರಮ ನಡೆಯಿತು. ಹೊತ್ತು ಹೊತ್ತಿಗೆ ಅವಳೇ ಬಂದು ನನಗಾಗಿ ಎಲ್ಲವನ್ನೂ ಸಿದ್ಧಪಡಿಸಿಟ್ಟು ಹೋಗುವಳು. ಮಾತ್ರ— ಆ ಅವಧಿಯಲ್ಲಿ ಅವಳ ಮೋರೆಯನ್ನು ನಾನು ಯಾವ ಕಾರಣದಿಂದಲೂ ಕಂಡಿಲ್ಲವೆಂಬುದನ್ನು ಬೇಕಾದಲ್ಲಿ ಆಣೆ ಇಟ್ಟು ಹೇಳಬಲ್ಲೆ.

ಅಂದು ನಾನು ಆ ಹುಡುಗೆಯ ರೂಪ ಗುಣ ಸಂಪನ್ನತೆಯ ಬಗ್ಗೆ ಪೂರ್ಣ ಬಲ್ಲವನಾದೆ. ಅಂತಹ ದಿವ್ಯ ರತ್ನದ ಬೆಲೆಯೂ ಆಗದಿರುವ ಈಗಿನ ಪರಿಸ್ಥಿತಿಗೂ ರೂಢಿಗೂ ಬಲು ನೊಂದೆ. ಮಾಡಲೇನು ಮತ್ತೆ? ನನ್ನ ಕರ್ತವ್ಯವೆಂದು ಒಂದೆರಡು ದಿನದ ಬಳಿಕ ಆಚಾರ್ಯರನ್ನು ಕರೆಯಿಸಿ ತಂದು, "ಸಾವಿತ್ರಿ ಮದುವೆಯ ವರದಕ್ಷಿಣೆ ಖರ್ಚಿಗೆ ನಾಲ್ಕು ನೂರು ರೂಪಾಯಿ ಕೊಡುವೆನೆ"ಂಬುದಾಗಿ ನಾನು ತಿಳಿಸಿಬಿಟ್ಟೆ.

ಈಚೆಗೆ ಹೆಣ್ಣು ನೋಡಲೆಂದು ಅವರಲ್ಲಿ ಬರುವ ವರಮಹಾಶಯರ ಸಂತೆಯಂತೂ ಮಾರಿಬಿಟ್ಟಿದೆ. ಇಂದಿಗೆ ಇಪ್ಪತ್ತಾರು ಜನ ಬಂದು ಹೋದರು. ಅಂದರೆ—ನಾನು ಲಗುನಕ್ಕಾಗಿ ಬೆಳೆದು ನಿಂತ, ಹುಡುಗೆಯರ ವಧೂ ಪರೀಕ್ಷೆಯ ಖಾನೇಶುಮಾರಿಯನ್ನೇ ಮಾಡುತ್ತಿದ್ದ ನೇ, ಎನ್ನ ಬಹುದಲ್ಲವೇ? ಹಾಗಲ್ಲ. ಅದು ನಾನು ಬೇಕೆಂದು ಎಣಿಸಿಟ್ಟ ಲೆಕ್ಕವಲ್ಲ. ನನಗದು ಸಹಜ ವಾಗಿ ತಿಳಿಯುತ್ತಿದ್ದಿತು.

ವರನು ನೋಡಲು ಬರುವನು ಎಂದ ಬಳಿಕ ವಧುವನ್ನು ಒಳ್ಳೆಯದಾಗಿ ಸಿಂಗರಿಸಿಡಬೇಡವೇ! ಪಡೆದವಳೊಬ್ಬಳಿದ್ದರೆ ಎಲ್ಲವೂ ಷಟ್ಕರ್ಣವಾಗದೆ ಸಾಗುತ್ತದೆ. ಆದರೆ ಅದೊಂದಿಲ್ಲದ ಮೂಲಕ ಆಚಾರ್ಯರೇ ಎಲ್ಲವನ್ನು ಸಾಗಿಸ ಬೇಕಿತ್ತು. ಬಂದವರ ಕಣ್ಣು ಕುಕ್ಕಿಸಲು ನಾಲ್ಕು ಒಡವೆ ವಸ್ತುಗಳು ಬೇಕಲ್ಲ! ಅದನ್ನು ಪ್ರತಿ ಸರತಿಯೂ ನಮ್ಮಲ್ಲಿಂದಲೇ ಎರವಾಗಿ ಒಯ್ದು ಕಾರ್ಯವಾ ದೊಡನೆಯೇ ಮರಳಿ ತಂದು ಕೊಡುವದಾಗುತ್ತಿತ್ತು. ಈ ಸಂಗತಿ ಹೆಣ್ಣು ಬಾಯಿಯಲ್ಲಿ ಎಷ್ಟು ಹೊತ್ತು ನಿಂತಿರಬಲ್ಲುದು! ಆಫೀಸಿನಿಂದ ಸಂಜೆಗೆ ಮನೆ ಸೇರಿದೊಡನೆಯೇ ದಿನದ ಅಹವಾಲೊಂದು ನನ್ನ ಮುಂದೆ ಇದ್ದಂತೆ ಸಾದ ರಾಗುತ್ತಿತ್ತು. ನನ್ನ ಜ್ಞಾಪಕವಿಷ್ಟು ನಸುಚುರುಕಾದ ಮೂಲಕ ಎಲ್ಲವನ್ನು ಲೆಕ್ಕವಿಟ್ಟಂತೆ ಆಳೆದು ಹೇಳಬಲ್ಲೆ, ಅಷ್ಟೆ.

ಹೀಗೆ ಒಂದು ಕಡಿಮೆ ಎರಡೂಕಾಲು ಡಝನು ವರರ ತೆರೆಗಣ್ಣಿನ ಪರೀಕ್ಷೆ ಸಂದರೂ ಪಾಪ, ಸಾವಿತ್ರಿ ಮಾತ್ರ ಒಮ್ಮೆಯೂ ಉತ್ತೀರ್ಣಳಾಗಲಿಲ್ಲ! ವ್ಯಕ್ತಿಗತ ಗುಣಗಳ ಪರಿವೆ ಇಲ್ಲದ ಇಂತಹ ಮಂಗಗಳ ಕೈಲಿ, ಸಾವಿತ್ರಿ ಯಂತಹ ಉಜ್ವಲ ದೀವಟಿಗೆಯು ಇಲ್ಲದಿರುವುದೇ ಹಿತವೆಂದು ಪ್ರತಿಸಾರೆಯೂ ನಾನು ಉಪಹಾಸ ಮಾಡುತ್ತಿದ್ದೆ.

ಈ ಎಂಟು ದಿನಗಳಲ್ಲಿ ರಾಮಪುರದ ಸಂಬಂಧವೊಂದು ಯಾರದೋ ಮಹಾಶಯರ ಮಧ್ಯಸ್ಥಿಕೆಯಿಂದ ಕೂಡಿ ಬಂದಿದೆಯಾಗಿ ತಿಳಿದಿತ್ತು. ವರಪಕ್ಷ ತುಂಬಾ ಸ್ಥಿತಿವಂತ; ಆದರೆ ದ್ವಿತೀಯ ಸಂಬಂಧವಂತೆ. ಹೇಗಾದರೂ ಮತ್ತೆ ವಧೂಪರೀಕ್ಷೆಯಾಗಲೇ ಬೇಕು. ತಾನೇ ಬರುವನಲ್ಲ. ಅಳಿಯನ ಮುಖ ಬೆಳಗಾದ ಮೇಲೆ ಕಾಣುವದು ಸಹಜ ಎಂದಿದ್ದರು ಎಲ್ಲರು.

ನಮ್ಮಲ್ಲಿಂದ ವಸ್ತುಗಳನ್ನೊಯ್ದು ಸಾವಿತ್ರಿಯನ್ನು ಒಳ್ಳೆಯದಾಗಿ ಗೌರಿ ಯಂತೆ ಸಿಂಗರಿಸಿಟ್ಟು ಎರಡು ದಿನವಾಯಿತು. ವರ ಮಹಾಶಯರ ಪತ್ತೆಯೇ

ಇಲ್ಲ ಇನ್ನೂ! ಆಸೆ....ಬಿಡಲು ಬರುತ್ತದೆಯೇ! ಈ ಹೊತ್ತಾದರೂ ಖಂಡಿತ ಬಂದೇ ಬರುವರು ಎಂದು ಕಾದಿದ್ದರು. ಸಾವಿತ್ರಿಯ ಭಾವೀ........ಬರುವದು ನಿಶ್ಚಯ. ತುಂಬಾ ನೋಡಿ ಸುಖಿಸಬೇಕೆಂದು ಹೆಂಗಸರೆಲ್ಲರ ಆತುರ. ನನ್ನ ಎಂಭತ್ತೈದು ವರುಷದ ತಾಯಿ—ಮುದುಕೆಯಷ್ಟೇ?—ಸರಿಯಾಗಿ ನಡೆಯ ಲಾರದ ಆಕೆ ತಾಸಿಗೆರಡು ಸಲ ಅತ್ತ ಹೊರಳಿ ಸಮಾಚಾರ ತಗೊಳ್ಳುತ್ತಿದ್ದ ಳೆಂದ ಬಳಿಕ ತಿಳಿಯದೇ?

ದಿನದಂತೆ ನಾನು ಆಫೀಸಿಗೆ ಹೋಗಿ ಸಂಜೆಗೆ ತಿರುಗಿ ಮನೆ ಸೇರುವ ಷ್ಟಕ್ಕೆ ಕಾಯ್ದವರು ಬಂದು ಹೋದ ವಾರ್ತೆ ತಿಳಿಯಿತು. ಹೋಗುವಾಗಲೇ ಅವರು ಸಮ್ಮತಿಯನ್ನು ಸೂಚಿಸಿ ಮುಂದಿನ ವ್ಯವಸ್ಥೆ ಪತ್ರಮುಖೇನ ತಿಳಿಸ ಲಾಗುವುದೆಂದು ಬೆಲ್ಲದಚ್ಚಿನಂತಹ ಮಾತುಗಳನ್ನು ಆತುರರಾದವರ ಉಡಿ ಯಲ್ಲಿಟ್ಟು ಹೋದುದರಿಂದ ಅವರ ಸೌಜನ್ಯದ ಪ್ರಭಾವವು ಅಳತೆಗೆಟ್ಟು, ಸುತ್ತಲೂ ಬೀರಿ ನಿಂತಿತ್ತು.

"ತುಂಬಿದ ಹಣೆಯ ಮುದ್ದು ಮುಖ. ರೂಪದಲ್ಲಿ ದ್ವಿತೀಯ ಮನ್ಮಥ. ರಾಜಕಳೆ, ಕುಡಿಮೀಸೆಯ ಗುಂಡು ಮುಖದಲ್ಲಿ ತೇಲುತ್ತಿದೆ. ದ್ವಿತೀಯ ಸಂಬಂಧ ವಾದರೇನು? ವಯಸ್ಸು ಇನ್ನೂ ಇಪ್ಪತ್ತೆಂಟು ಮೀರಿರದು. ಇಷ್ಟು ದಿನ ಕಾಯ್ದು ದಕ್ಕೆ, ಬಳಲಿದುದಕ್ಕೆ, ಸಾವಿತ್ರಿ ಜೀವನ ಸುಧೆಗಂಡಿತೆ"ಂದರು ನನ್ನ ತಾಯಿ.

ಕೊಡಕೊಳ್ಳುವ ಯಾವ ತರದ ಕಷ್ಟದ ನಿಬಂಧನೆಗಳೂ ಇಲ್ಲದೆ, ಮುಂದಿನ ತಿಂಗಳಲ್ಲಿಯ ಮುಹೂರ್ತವೊಂದನ್ನು ನಿಶ್ಚಯಿಸಿದ ಪತ್ರವೂ ಬಂದಿತು. ಎಲ್ಲರೆದೆಗಳೂ ಆನಂದದಿಂದ ತುಳುಕಿದುವು. ಆದರೆ ನಮಗೆ ಮಾತ್ರ ವಿವಾಹ ಸಮಾರಂಭದ ಆನಂದವನ್ನು ಮೆಲ್ಲಲು ವಿಧಿ ಇರಲಿಲ್ಲ.

ಕಿತ್ತೂರಿಗೆ ವರ್ಗವಾದ ಹುಕುಮು ಬಂದಿತು. ಮೇಲೆ 'ಪ್ರೊಮೋಶನ್ನು'; ಬಿಡಲಾಗುತ್ತದೆಯೇ! ವಚನದಂತೆ ಖರ್ಚಿಗೆಂದು ಕೂಡಮಾಡಿದ ನಿಧಿಯನ್ನು ಆಚಾರ್ಯರ ಕೈಲಿತ್ತು ಬೀಳ್ಕೊಂಡೆನು. ಓಹೋ ಒಂದು ಮರೆತೆ—ನಾನು ಸಾವಿತ್ರಿಯನ್ನು ಎದುರು ನಿಂತು ಕಂಡದ್ದು ಅಂದು ಮಾತ್ರ. ಆಕೆ "ಮಾವ! ಹೋಗಿ ಬರುವಿರಷ್ಟೇ" ಎಂದು ಅಭಿಮಾನದಿಂದ ನನ್ನನ್ನು ಬೀಳ್ಕೊಡಲು ಬಂದಿದ್ದಳು. ಆ ತುಂಬು ಕಂಗಳ ದಿವ್ಯ ರೂಪು ಜನ್ಮಜನ್ಮಾಂತರಗಳಲ್ಲಿಯೂ ನಾನು ಮರೆಯಲಾರೆ.

ಕಿತ್ತೂರು ತಾಲೂಕಿನ ಸ್ಥಳ. ರಾಮಪುರವು ಅದೇ ತಾಲೂಕಿನೊಳಗಣ ಒಂದು ಮಧ್ಯಮ ದರ್ಜೆಯ ಊರು. ಸಾವಿತ್ರಿಯ ಲಗುನಕ್ಕೆ ಹೋಗಲು ದೊರೆಯದಿದ್ದರೂ ಆಕೆಯ ಸುಖದ ಸಂಸಾರವನ್ನಾದರೂ ಒಮ್ಮೆ ನೋಡಿ ಬರಬಹುದೆಂದು ನಮಗೆಲ್ಲರಿಗೂ ಹಂಬಲವಾಗಿತ್ತು. ರಾಮಪುರದ ಇಂತಹ ರಲ್ಲಿಯೇ ಸಾವಿತ್ರಿಯನ್ನು ಕೊಟ್ಟಿದೆಯೆಂಬ ನಿರ್ದಿಷ್ಟವಾದ ಗೊತ್ತು ನಮಗಿಲ್ಲ ದುದರಿಂದ ಯಾವ ತರದ ಸಮಾಚಾರ ವಿವೇಚನೆಯೂ ಸಾಧ್ಯವಿದ್ದಿಲ್ಲ. ಹಲವೂ ಸಾಂಸಾರಿಕ ಇತರ ತಾಪತ್ರಯಗಳಲ್ಲಿ ಅತ್ತ ಲಕ್ಷ್ಯ ಪೂರೈಸುವುದಾಗದೆ ಎರಡು ವರುಷಗಳು ಹಾಗೆಯೇ ಕಳೆದುವು.

ಸರಿಯಾಗಿ ಮಧ್ಯಾಹ್ನದ ಸಮಯವಾಗಿತ್ತು. ಅಂದು ರವಿವಾರವಾಗಿದ್ದುದರಿಂದ ಕಚೇರಿಯ ಉಪಾಧಿಯಿರಲಿಲ್ಲ. ಸುತ್ತಲೂ ಉರಿಬಿಸಿಲು ಬೇಯುತ್ತಿತ್ತು. ನಾನು ಊಟ ತೀರಿಸಿ ಹಜಾರದಲ್ಲಿ 'ಫ್ರೀ ಪ್ರೆಸ್ಸ್' ಓದುತ್ತ ಪವಡಿಸಿದ್ದೆ. ಮನೆಯ ಮುಂದಿನ ದಾರಿಯಿಂದ ಇತರ ಮಹಾನುಭಾವರು ಹೋಗಿಬರುವುದು ನಡೆದಂತೇ ಒಬ್ಬ ಗೌರ ಕಾಯದ ತರುಣನೂ ಹೋದದ್ದು ಕಾಣಿಸಿತು. ಯಾರಾದರೇನು ಎಂದು ಸುಮ್ಮಗುಳಿದೆ.

"ಅದೆ, ಸಾವಿತ್ರಿಗಂಡ ಹೋಗುತ್ತಾನೆ. ಕರೆಯಿಸಬಾರದೇ!" ನನ್ನಾಕೆ ಬಂದು ಸೂಚಿಸಿದಳು.

"ಓಹೋ! ಈತನೇ?" ಎಂದು ಎದ್ದುಹೋಗಿ ಜವಾನನ ಮುಖಾಂತರ ಅವನನ್ನು ಕರೆಯಿಸಿ ತಂದು ಸತ್ಕರಿಸಿದೆ. ಮನೆಯಲ್ಲಿ ನಾನು ಹೇಳುವ ಮೊದಲೇ ಕಾಫಿ ತಿಂಡಿಗಳ ತಯಾರಿ ನಡೆದಿತ್ತು. ಆಗಂತುಕನಿಗೇನೋ ಅಚ್ಚರಿಯಾಗಿ ಬಿಟ್ಟಂತೆ ಮುಖಚರ್ಯೆಯಿಂದ ತಿಳಿಯುತ್ತಿದ್ದಿತು. ನಾನಂತೂ ಆತನನ್ನು ಎಂದೂ ಕಂಡರಿಯದವನು. ಮತ್ತೆ ಆಕೆಯದು ಒಮ್ಮೆ ಎಂದೋ ಮರೆಯಿಂದ ಕಂಡ ಗುರುತು. ಮತ್ತಿದರಲ್ಲಿ ಯಾವ ವಿಪ್ಲವವಿದೆಯೋ ಎಂದು ಸುಮ್ಮನಿದ್ದೆ.

ಕಾಫಿ ತಿಂಡಿಗಳ ಸಮಾಚಾರವನ್ನು ಯಥಾಸಾಂಗವಾಗಿ ತಗೊಂಡುದಾಯಿತು. ಅಷ್ಟಕ್ಕೇ ನನ್ನಾಕೆಯ ಕಣ್ಣುಸನ್ನೆಗಳಂತೂ ಮೀರಿಬಿಟ್ಟುದರಿಂದ ನಾನು ಬಾಯ್ಬಿಟ್ಟು ಕೇಳಲೇ ಬೇಕಾಯಿತು.

"ಸಾವಿತ್ರಿ—ಹೇಗೆ? ಕ್ಷೇಮವಾಗಿರುವಳಷ್ಟೇ?"

"ಯಾವ ಸಾವಿತ್ರಿ....? ಸಾವಿತ್ರಿ........ಸಾವಿತ್ರಿ........" ಯುವಕನು ಗೊಂದಲದಲ್ಲಿ ಬಿದ್ದಂತಿತ್ತು.

"ಅನಂತಾಚಾರ್ಯರ ಮಗಳು. ರಾಮಪುರದಲ್ಲಿ ಕೊಟ್ಟಿದೆಯಷ್ಟೇ?"

"ಓಹೋ! ನನ್ನತ್ತೆ........ತಾವೂ ಅವರ ಸಂಬಂಧಿಕರೇನೋ?"

ನಮಗೆಲ್ಲ ದಿಗಿಲಾಯಿತು. ಸಾವಿತ್ರಿಗಂಡ ಎಂದು ಕರೆತಂದು ಕಾಫಿ ಯುಣಿಸಿದಷ್ಟಕ್ಕೆ, ತಿಂದು ತೀರಿದ ಮೇಲೆ ಅಳಿಯನಾಗಿ ಬಿಡಬೇಕೆ? ನನ ಗೇನೋ ನಗು ಬಂದು ಹೊಟ್ಟೆ ಬಿರಿಯುವಂತಾಯಿತು. ನನ್ನಾಕೆಗೆ ಈ ಎಲ್ಲ ತಮಾಷೆ ಜವಾಬುದಾರಿ ತನ್ನ ಮೇಲೆ ಬಂದಿತಲ್ಲ ಎಂದು ಮರುಕ. ಪಾಪ! ಹೆಣ್ಣುಪ್ರಾಣಿ ನಾಚಿ ಆಳುವಷ್ಟಾದಳು. ಆದರೂ ಹೆಣ್ಣುಜೀವವಲ್ಲವೇ? ಅಪ ಯಶಸ್ಸನ್ನು ಅಷ್ಟು ಬೇಗ ಉಡಿಯಲ್ಲಿ ಕೊಳ್ಳಲು ಸಜ್ಜಾಗುವದು ಹೇಗೆ? ತನ್ನ ಸಮರ್ಥನೆಗೆಂದು ಕದದೋರೆ ಬಿಟ್ಟು ಹೊರ ಬಂದಳು.

"ಅಂದು ವಧೂನಿರೀಕ್ಷಣೆ ದಿನ ತಾವೇ ಬಂದಂತಿತ್ತಲ್ಲವೇ?"

"ಹೌದು" ತರುಣನೆಂದನು. ನನಗೆಲ್ಲವೂ ನಿಚ್ಚಳವಾಗಿ ಹೊಳೆಯಿತು. ಅಂದು ಹೆಂಗಳೆಯರೆಲ್ಲರೂ ಒಲಿದಿತ್ತ ಮೆಚ್ಚುಗೆಯು ಈ ಪ್ರಾಣಿಯನ್ನೇ ಕಂಡು ಎಂದು ಭಾವಿಸಿಕೊಂಡೆ. ಒಡನೆಯೇ ಸಾವಿತ್ರಿಯ ವಿಷಯದ ಒಂದು ಅದೃಶ್ಯ ಯೋಚನೆಯು ನನ್ನ ಕಣ್ಣಮುಂದೆ ಮೂಡಿ ಮಾಯವಾಯಿತು.

ಆತನೆಂದನು—"ಅತ್ತೆ........ಸುಖರೂಪವಾಗಿಯೇನೋ ಇರುವಳು. ಆದರೆ ಆಡಬಾರದು. ತಡೆಯಲಾರೆ. ಆಕೆ ಮಾವನಿಗೆ ಈ ವಿಶ್ರಾಮಕಾಲ ದಲ್ಲಿ ತೊಂದರೆಯನ್ನೇ ಕೊಡುವಳೇನೋ ಎಂದು ಕಾಣುತ್ತದೆ. ಪಾಪ! ಹುಡುಗೆ ಮೊದಲು ಒಳ್ಳೆಯವಳಾಗಿದ್ದಳು. ಮಾವನಿಗಂತೂ ಪೊಂಜುರಿಗೆ ಯೆಂದು ಒಡಲೊಳಟ್ಟುಕೊಂಡಂತಾಗಿದೆ. ಆಕೆ ಈಗ ಮೊದಲಿನ ತರಹ ವಿಲ್ಲ. ಉಂಡರೆ—ಉಂಡಳು; ಇಲ್ಲವಾದರೆ ಒಂದೆರಡು ದಿನ ಉಪವಾಸವೇ ಇದ್ದುಬಿಡುತ್ತಾಳೆ. ಮಾವನೊಬ್ಬ ಮುಂದ ತೋರದಿದ್ದರೆ ಹೇಗೆ ಬೇಕಾದರೂ ವ್ಯವಹರಿಸಬಲ್ಲಳು. ವಿನಾ ಆಕೆಗೂ ಹೊರ ಜಗುಲಿಯ ಕೋಣೆಗೂ ಗಂಟು. ಅದೇನೋ ಉನ್ಮಾದವಂತೆ. ಉಪಚಾರವೇನೋ ನಡೆದಿದೆ. ಮನೆಯ ಯಾವ ಕೆಲಸ ಬೊಗಸೆಗಳ ಸುದ್ದಿಯೂ ಇಲ್ಲ.

ನಮಗೆಲ್ಲ ಆಕಾಶವೇ ಬಿರಿದು ಬೀಳುವಂತಾಯಿತು. ಚಿನ್ನದಂತಹ ಹುಡುಗೆ—ಹೀಗೇಕಾದಳೋ ಎಂದು ದುಗುಡ. ನಮ್ಮ ಮನೆಯಲ್ಲೇನೋ

ಜೋರಾಗಿ ಬಿಟ್ಟಿತ್ತು. ನಾನೇ ಹೋಗಿ ಕಣ್ಣುಕಟ್ಟ ನೋಡಿ, ಒಂದು ದಿನದ ಮಾತಿಗಾದರೂ ಆಕೇನ ಕರಕೊಂಡು ಬರಬೇಕಂತೆ. ಕಚೇರಿ ಕೆಲಸದಲ್ಲಿ ಅದು ಹೇಗೆ ಕೂಡಬೇಕೋ!

ಒಂದು ಸುಮುಹೂರ್ತವು ಕೂಡಿ ಬಂದಿತು. ರಾಮಪುರ ಸರ್ಕಲಿನ ಮೇಲ್ತಪಾಸಿಗೆ ನಾನು ಹೋಗಬೇಕಾಯಿತು. ಸಾವಿತ್ರಿ ಸುದ್ದಿನೂ ತಿಳಿಯಬಹುದಲ್ಲ ಎಂದು ಸುಮಾರಾಗಿ ಒಪ್ಪಿ ಹೋಗಿಬಿಟ್ಟೆ. ಊರ ಗೌಡರೂ, ಶ್ಯಾನುಭೋಗರೂ ದಾರಿಯಲ್ಲಿ ನನ್ನನ್ನೆದುರು ನೋಡುತ್ತಲಿದ್ದರು. ಸರಾಸರಿ ಬೆಳಗ್ಗಿನ ಎಂಟು ಗಂಟೆಗೆ ಸರಿಯಾಗಿ ನಾನು ಅಲ್ಲಿ ತಲುಪಿದೆ.

"ಚಾವಡಿಗೆ ಹೋಗೋಣ. ಶ್ರೀನಿವಾಸಯ್ಯನ ಮನೆ ಬಳಿಯಲ್ಲಿದೆ. ಅಲ್ಲಿಯೇ ಇಳಿಯುವ ಏರ್ಪಾಟಾಗಿದೆ"—ಗೌಡರು ತಿಳಿಸಿದರು. ಶ್ರೀನಿವಾಸಯ್ಯನೆಂದರೆ ನಾನೇನು ಬಲ್ಲೆ? ಅದೇ ಊರ ಒಳ್ಳೆಯ ಸ್ಥಿತಿವಂತರೊಬ್ಬರೆಂದು ಅವರೇ ತಿಳುಹಿದರು. ನಾನೂ ಒಪ್ಪಿ ಮುಂದೆ ಸಾಗಿದೆ. "ಇದೇ ಶ್ರೀನಿವಾಸಯ್ಯನವರ ಮನೆ" ಎಂದು ಮುಂದಿನ ಎರಡಂತಸ್ತಿನ ಮನೆಯ ಕಡೆ ಕೈತೋರಿ ಒಬ್ಬರೆಂದರು. ಎದುರಿನ, ಸಣ್ಣದಾದರೂ ಸೀಮೆಸುಣ್ಣದಿಂದ ಗೋಡೆಗಳನ್ನು ಅಲಂಕರಿಸಿ ಚಂದವಾಗಿಟ್ಟದ್ದೇ ಚಾವಡಿಯಾಗಿತ್ತು.

ಬಳಿಗೆ ಹೋಗಿ ನೋಡುತ್ತೇವೆ—ಎರಡಂತಸ್ತಿನ ಮನೆಯ ಮುಂದೆ ಜನಸಂದಣಿ ನೆರೆದಿತ್ತು. ಅರಚಿದ ಕೂಗುಗಳೂ ಮೂಲೆಮೂಲೆಯಿಂದ ಕೇಳಿ ಬರುತ್ತಿದ್ದವು. ಎಲ್ಲ ಗಲಭೆ. ಸಂಗತಿ ಏನೆಂದು ತಿಳಿದಿರಲಿಲ್ಲ. ನಮ್ಮನ್ನು ನೋಡಿ ಇಳಿ ಪ್ರಾಯದ ಜೊಳ್ಳು ಮೋರೆಯವರೊಬ್ಬರು ಬೊಕ್ಕ ತಲೆಯಿಂದ ಮುಂದಾಗಿ ಬಂದು ಪಟೇಲರೊಡನೆ ಗುಜುಗುಜು ಆಡಿದರು.

"ಇವರೇ ಶ್ರೀನಿವಾಸಯ್ಯನವರು; ಇವರಲ್ಲೊಂದು ದುರ್ಮರಣವಂತೆ" ಗೌಡರೆಂದರು.

ಅಯ್ಯೋ ಅಪಶಕುನವೇ! ಏನೇನೋ ಕಾರ್ಯ ವಿಚಾರಿಸಿಕೊಂಡು ಬಂದಿದ್ದೆ. ಪ್ರಥಮದಲ್ಲಿಯೇ ಈ ಶವದ ದರ್ಶನವಾಗಬೇಕೇ? ಮುಂದಿನ ಯಾವತ್ತೂ ವ್ಯವಸ್ಥೆಯನ್ನು ಮಾಡಲು ಗೌಡರಿಗೆ ವಿಧಿಸಿ, ನಾನು ಚಾವಡಿಯತ್ತ ಹೊರಳಿದೆ. ಶವವು ಅಂಗಳದಲ್ಲಿ ತಂದಿಟ್ಟಿತ್ತಾದ್ದರಿಂದ ಹೋಗಹೋಗುತ್ತಾ ಒಂದು ದೃಷ್ಟಿಕ್ಷೇಪವು ಅದರ ಮೇಲೆ ಬಿದ್ದೇ ಬಿದ್ದಿತು. ಏನಾಶ್ಚರ್ಯ! ತಡೆಯದೆ

ಬಳಿಗೆ ಹೋಗಿ ನೋಡುತ್ತೇನೆ—ಯಾರು? ಆ ದಿನ ನಮ್ಮಲ್ಲಿ ಕರತಂದು ಕಾಫಿಯುಣಿಸಿ ಕಳುಹಿದ ಯುವಕ!

ಚಾವಡಿ ಸೇರಿ ಯೋಚಿಸುತ್ತಾ ಕುಳಿತುಕೊಂಡೆ. ಅಂದು ಸಾವಿತ್ರಿ ಗಂಡ—ತನ್ನ ಮಾವ ಎಂದು ಈತನೇ ಹೇಳಿದ್ದನಲ್ಲ? ಶ್ರೀನಿವಾಸಯ್ಯನೇ ಸಾವಿತ್ರಿಗಂಡ ಇದ್ದಿರಬಹುದೋ ಎಂದು ಒಮ್ಮೆ ಅನಿಸಿತು. ಆದರೆ ಛೀ! ಅಷ್ಟು ಮುದುವ ಮತ್ತೆ ಮದಿವೆ ಮಾಡಿಕೊಂಡಿರಲಾರ ಎಂದೂ ತೋರಿತು. ತಾನೇ ತಿಳಿಯುವದು ಎಂದು ಸ್ವಸ್ಥನಾದೆ.

ಕಡೆಗೊಬ್ಬ ಡಾಕ್ಟರರು ಬಂದು ಮೃತನಿಗೆ ವಿಷಪ್ರಯೋಗವಾಗಿದೆಯಾಗಿ ತೀರ್ಮಾನಿಸಿದರು. ಪಂಚನಾಮೆ ವಗೈರೆ ಯಾವತ್ತೂ ಪೂರೈಸಿ ಶವದ ವ್ಯವಸ್ಥೆ ಮಾಡುವುದರಲ್ಲಿ ಗ್ರಾಮಸ್ಥರು ಸೇರಿಕೊಂಡುದರಿಂದ ನನಗೆ ಆ ಇಡೀ ದಿನ ಚಾವಡಿಯನ್ನೇ ಕಾಯ್ದುಕೊಂಡು ಇರಬೇಕಾಯಿತು.

ಯಾವತ್ತೂ ಕಾರ್ಯ ಪೂರೈಸಿದ ಬಳಿಕ ಗೌಡರು ಬಂದರು. ಅವರಿಗೆ ಎಲ್ಲ ತಿಳಿದಿರಬಹುದೆಂದು ಆಶಿಸಿ, ಅವರನ್ನೇ ಕೇಳಿದೆ. ಅದಕ್ಕೆ ಅವರು "ವಿಶೇಷವೇನು? ಶ್ರೀನಿವಾಸಯ್ಯನದು ದೊಡ್ಡ ಆಸ್ತಿ. ಹಿಂದೆ ಆಳುವವರಿಲ್ಲ. ಈತನೊಬ್ಬ ಸೋದರ ಅಳಿಯ; ಮಧ್ಯೆ ಎಲ್ಲದಕ್ಕೂ ಆಧಾರವಾಗಿ ನಿಂತಿದ್ದ. ಅವರ ನೂತನ ಕುಟುಂಬವೂ ಇದೆ. ಆದರೆ ದೈವ, ಆಕೆಗೂ ಉನ್ಮಾದದ ಪೀಡೆ. ಅಂತೂ ಸಂತತಿಯ ಆಶೆ ನಾಸ್ತಿ. ಹೀಗೆಲ್ಲ ಗೊಂದಲವಿದೆ ಆ ಪ್ರಾಣಿಯ ಹಿಂದೆ. ಮಧ್ಯೆ ಆಧಾರವಾಗಿ ನಿಂತ ಈ ಅಳಿಯನನ್ನೇ ಕಿತ್ತು ಬಿಟ್ಟರೆ ತೀರಿತಲ್ಲ! ಎಲ್ಲವೂ ತಮ್ಮ ಹವಾಲೆ ಎಂದು ದುರಾಲೋಚನೆಯಿಂದ ಯಾರೋ ಅಧಮರು ಆ ರೀತಿ ಮಾಡಿದ್ದಿರಬೇಕು. ಇಲ್ಲವಾದರೆ ವಿಷಪ್ರಯೋಗವೆಂದರೇನು? ಪೋಲೀಸರಿಗೂ ಈ ಸಂಗತಿ ತಿಳುಹಲಾಗಿದೆ" ಎಂಬುದಾಗಿ ವಿಸ್ತೃತವಾದ ವರ್ಣನೆಯನ್ನೇ ಮಾಡಿಬಿಟ್ಟರು.

ಮೊದಲೇ ಸಮಯವಾಗಿ ಬಿಟ್ಟುದರಿಂದ ನನ್ನ ಆ ದಿನದ ಕಾರ್ಯವನ್ನೆಲ್ಲ ಮುಂದಿಟ್ಟು ನಾಳೆ ಬರಬಹುದಾಗಿ ಹೇಳಿ ಎಲ್ಲವರನ್ನೂ ಕಳುಹಿದೆನು.

ಸುಮಾರು ಹನ್ನೆರಡು ಗಂಟೆ ರಾತ್ರಿಯಾಗಿತ್ತು. ನಿಸರ್ಗವೆಲ್ಲ ವಿಶ್ರಾಂತಿ ಸಮಾಧಿಯಲ್ಲಿ ಓಲಾಡುತ್ತಿತ್ತು. ಎತ್ತೆತ್ತಲೂ ನೀರವ. ನಾನು ಚಾವಡಿಯ ಕೋಣೆಯಲ್ಲಿ 'ಕಾಟ' (Cot) ನ ಮೇಲೆ ನೀಳವಾಗಿ ಮಲಗಿಕೊಂಡಿದ್ದೆ. ಮನಸ್ಸಿನಲ್ಲೇನೋ ಹಲವೂ ವಿಚಾರಗಳ ಗಲಭೆ!

ಶ್ರೀನಿವಾಸಯ್ಯನ ಹೆಂಡತಿಯೇ ಸಾವಿತ್ರಿಯೆಂದು ಖಂಡಿತವಾಗಿತ್ತು. ಮುಂದಿನ ಆಕೆಯ ವಿಚಾರ ತಿಳಿಯುವದೆಂತು? ಈಗಿನ ಪರಿಸ್ಥಿತಿಯಂತೂ ಆಕೆಯನ್ನು ಒಂದು ದಿನದ ಮಾತಿಗೆ ಸಹ ಕರೆದುಕೊಂಡು ಹೋಗಬಹುದಾದಂತೆ ಇದ್ದಿರಲಿಲ್ಲ. ಅದರಲ್ಲಿಯೂ ಆಕೆಯ ಉನ್ಮಾದದ ವ್ಯಾಧಿ ವಿಪರೀತವಾಗಿಬಿಟ್ಟಿತ್ತು.

ಕದವನ್ನು ತಟ್ಟಿದ ಸಪ್ಪಳವಾಯಿತು. ಜವಾನನೇನೋ ಎಂದುಕೊಂಡು ಎದ್ದು ಹೋಗಿ ಬಾಗಿಲು ತೆರೆದೆ. ಹೊರಗೆ ಯಾರೂ ಇಲ್ಲ. ಹೊರಗಿರಬೇಕಾಗಿದ್ದ ಜವಾನನು ನಾನು ಮಲಗಿದೆನೆಂದು ತಿಳಿದು—ಮೋಜು ಮಾಡಬೇಕೆಂದೆಣಿಸಿ—ನಿಶೆ ಏರಿಸಬೇಕೆಂದು ಪರಾರಿಯಾಗಿದ್ದನು. ಹೊರಗೆ ಯಾರೂ ಇಲ್ಲದ್ದು ಕಂಡು ಮತ್ತೆ ಒಳಗೆ ಬಂದು ಕುಳಿತುಕೊಂಡೆ. ಬಾಗಿಲು ಹಾಗೆಯೇ ಅರ್ಧ ತೆರೆದಿತ್ತು. ಮೂಲೆಯಲ್ಲಿಯ ಟೇಬಲಿನಲ್ಲಿ ಸ್ಟೆಂಡು ಉರಿಯುತ್ತಿತ್ತು. ತೂರಿ ಬರುವ ಗಾಳಿಗೆ ಅದು ಕಂಪಿಸಿ, ಒಮ್ಮೆ ಮೃತ್ಯುವಿನ ನಾಲಗೆಯಂತೆ ಗಭೀರವಾಗಿ ದೊಡ್ಡದಾಗುವದು; ಇನ್ನೊಮ್ಮೆ ಇನ್ನೇನು ನಂದಿಬಿಡುತ್ತದೆಯೇನೋ ಎನ್ನುವ ಹಾಗೆ ಸೂಕ್ಷ್ಮವಾಗಿ ಬಿಡುವದು. ಇದೇ ತಮಾಷೆಯನ್ನು ನೆಟ್ಟ ನೋಟದಿಂದ ನೋಡುತ್ತಲಿದ್ದೆ.

ಒಂದು ಸ್ತ್ರೀವ್ಯಕ್ತಿಯು ಕೋಣೆಯನ್ನು ಸೇರಿತು. ಮಜ್ಜಾ ಮಾಂಸಗಳು ಸೇದಿಹೋಗಿದ್ದ ಅಂತಹ ಎಲುಬಿನ ಗೂಡನ್ನು ನಾನೆಂದೂ ಮೊದಲು ಕಂಡಿರಲಿಲ್ಲ. ದಿಗಿಲುಗೊಂಡು ನೋಡುತಲಿದ್ದೆ. ಆಕೆ "ಮಾವಾ" ಎಂದಳು. ದನಿಯೇನೋ ಪರಿಚಿತ. ಸರಿ! ಸಾವಿತ್ರಿಯೇ ಈ ರೀತಿಯಾಗಿರುವಳೇ ಎಂದುಕೊಂಡೆ! ಸ್ಪಷ್ಟವಾಗಿ ಮಾತು ಸಹ ಬರದಂತಾಯಿತು. ಹೇಗೂ "ಬಾ ಕೂಡ್ರು" ಎಂದೆ.

ಬಳಿಯಲ್ಲಿ ಕುಳಿತುಕೊಂಡಿರಲು ಬೇರೆ ಏನೂ ಇರಲಿಲ್ಲ. ಮಂಚದ ಒಂದು ಮಗ್ಗುಲಿಗೆ ನಾನು ಕುಳಿತಿದ್ದೆ. ಒಂದು ಬದಿಗೆ ಆಕೆಯೂ ಕುಳಿತಳು. ಅಂದು ನನ್ನ ಮುಂದೆ ನಿಲ್ಲಲು ಸಹ ನಾಚುವ ಆಕೆಯು ಇಷ್ಟು ದೀನವಾಗಿಬಿಟ್ಟಳೋ ಎಂದೆನಿಸಿತು. ನನ್ನನ್ನು ಆಕೆಯು ತನ್ನ ಸಮಿಾಪದ ಆಪ್ತನೆಂತಲೇ ತಿಳಿದಿದ್ದಳು. ಈ ರೀತಿ ಆಕೆಯಲ್ಲುಂಟಾದ ವಿಶ್ವಪ್ರೇಮ ಭಾವನೆಯನ್ನು ಕಂಡು ನನಗೂ ಅಚ್ಚರಿಯಾಯಿತು.

"ಎಲ್ಲ ಸೌಖ್ಯವಷ್ಟೇ?" ಆಕೆಯೆಂದಳು.

ಹೌದು!...ಆದರೆ...ನಿಮ್ಮಲ್ಲಿಯ ಈ ತರದ ಉತ್ಪಾತಕ್ಕಾಗಿ ತುಂಬಾ ವಿಷಾದಿಸುತ್ತೇನೆ."

"ಅದೇಕೆ? ಮಾಡಿದ್ದು ಉಣಬೇಡವೇ?"

"ಎಂದರೆ—? ಅರಿಯದೆ ವಿಷವಿತ್ತು ಮೋಸಮಾಡಬಹುದೇ? ಅಷ್ಟೇನು ನೀವು ಪರರ ಅಪರಾಧ ಮಾಡಿದ್ದಿರಿ?"

ನನ್ನ ಪಾಡಿಗೆ—ಗೌಡರ ಹೇಳಿಕೆಯ ಮೇಲೆ ನಂಬಿ— ಆಡುತ್ತಿದ್ದೆನು. ಅದಕ್ಕೆ ಅವಳು ತಲೆಯಲ್ಲಾಡಿಸುತ್ತ—

"ನನ್ನ ವಿವಾಹ....ಅಲ್ಲಲ್ಲ....ಚಿತಾರೋಹಣದ ಮಂಗಲ ಕಾರ್ಯಕ್ಕೆ ತಾವು ಇರಲಿಲ್ಲ. ಅಂದು ನಾನು ಕಣ್ಣೀರಿನ ದೊಡ್ಡ ಹೊಳೆಯನ್ನೇ ಹರಿಸಿದ್ದೇನೆ. ಆದರಲ್ಲಿಯೇ ನನ್ನ ಸುಖ ಸೌಭಾಗ್ಯಗಳೆಲ್ಲವೂ ಕೊಚ್ಚಿ ಹೋದುವು. ಇದಕ್ಕೆ ಕಾರಣರಾರು?"

ನಾನು ದಿಙ್ಮೂಢನಾಗಿ ಕುಳಿತುಕೊಂಡಿದ್ದೆನು. ನನ್ನ ಮೆದುಳೂ ಸಹ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಬಾಯಿಯಿಂದಂತೂ ಉತ್ತರವು ಹೊರಡುವಂತಿರಲೇ ಇಲ್ಲ.

"ಹಾಗೆ ಯಾರು ನನ್ನ ಕೊರಳು ಕೊಯ್ದು ಘಾತಿಸಿದರೋ ಅವರೇ ನನ್ನ ಕಣ್ಣ ಮುಂದೆಯೇ ರಂಭೆಯಂತಹ ಮತ್ತೊಬ್ಬಳನ್ನು ಮದುವೆಯಾಗಿ ನಲಿಯಲು ಹವಣಿಸಬೇಕೆ? ಮತ್ತದನ್ನು ನಾನು ಕಣ್ಣಿನಿಂದ ಕಂಡೂ ಕಂಡು ಸುಖಿಸಬೇಕೇ? ಇದಾವ ನೀತಿಯು?"

* * * * * *

ಮರುದಿನ ಶ್ರೀನಿವಾಸಯ್ಯನವರಲ್ಲಿ ವಿಷಪ್ರಯೋಗದ ಮತ್ತೊಂದು ಶವವು ಬಿದ್ದುಬಿಟ್ಟಿತ್ತು. ಸಾವಿತ್ರಿಯ ಹೆಸರೇ ಲೋಕದಿಂದ ಮಾಯವಾಯಿತು. ಸತ್ಯವಾಹನನನ್ನು ಅರಸುತ್ತ ಮತ್ತೆಲ್ಲಿ ಅಲೆಯುತ್ತಿತ್ತೋ! ಬಲ್ಲವರಾರು?

ದ್ವೇಷದಿಂದಲೇ ಹೀಗೆಲ್ಲ ಉತ್ಪಾತಗಳಾಗುತ್ತಿವೆಯಾಗಿ ಊರಲ್ಲಿ ಗದ್ದಲವೇ ಗದ್ದಲ. ಪೋಲೀಸರೂ ತಪಾಸಣೆಗಾಗಿ ಎಲ್ಲೆಲ್ಲೂ ಸುಳಿದಾಡುತ್ತಿದ್ದರು.

---



## ಶ್ರೀ ಕೊರಡ್ಕಲ್ ಶ್ರೀನಿವಾಸ ರಾಯರು, ಉಡುಪಿ

ಇವರು ಉಡುಪಿಯ ಬೋರ್ಡು ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ. ಸಂಗ್ರಹವಾಗಿ ಪ್ರಸಿದ್ಧವಾಗಿಲ್ಲವಾದರೂ ಅನೇಕ ಚಿಕ್ಕ ಕತೆಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಇವರು ಕೆಲವು ನಾಟಕಗಳನ್ನೂ ಬರೆದಿದ್ದಾರೆ. 'ಆರೋಗ್ಯ ಪ್ರತಾಪ' ಎಂಬ ನಾಟಕವೂ 'ಪದ್ಯಾವಳಿ' ಎಂಬ ಶಿಶುಗೀತೆಗಳ ಸಂಗ್ರಹವೂ ಇದುವರೆಗೆ ಪ್ರಕಟವಾಗಿವೆ.

ಸಮಾಜದ ದೋಷಗಳನ್ನು ಹೆಕ್ಕಿ ತೆಗೆದು ಅವುಗಳ ಮೇಲೆ ಬರೆದ ವ್ಯಂಗ್ಯ ಹಾಸ್ಯಾತ್ಮಕ ಕತೆಗಳೇ ಹೆಚ್ಚು. ಶೈಲಿಯು ಸರಳವಾಗಿದ್ದು ಮಿತವಾದ ಶಬ್ದಗಳ ಕೊಂಚ ಪ್ರಾಸ ಪ್ರಿಯವಾದ ಜೋಡಣೆಯಿಂದ ನಿರರ್ಗಳವಾಗಿ ಹರಿಯುತ್ತದೆ. ಹೇಳುವ ರೀತಿ, ವರ್ಣನೆಯ ಸ್ವಾಭಾವಿಕತೆ ಇವು ಇವರ ಕತೆಗಳನ್ನು ಜನಪ್ರಿಯವಾಗಿ ಮಾಡಿರುವವು. ಕತೆಗಾರಿಕೆಯ ಪರಿಜ್ಞಾನವು ಇವರಿಗೆ ಚೆನ್ನಾಗಿ ಇದೆ.

# ಮಿಸ್ 1954

ಕೊರಡ್ಕಲ್ ಶ್ರೀನಿವಾಸ ರಾಯರು

ಇಳಿಗಲನೆಯ ಇಸವಿಯ ದಶಂಬರ ತಿಂಗಳಲ್ಲೊಂದು ದಿವಸ. ಮಿಸ್ ಮೇರಿಯು ಹವನಾ(Havana)ದ ಕಡಲ ದಂಡೆಯಲ್ಲಿ ನಿಂತಿರುವಳು—ಹದಿನೆಂಟು ವರುಷದ ಹುಡುಗಿ; ಮೊದಲೇ ಚಂದದ ಗೊಂಬೆ; ಚೆನ್ನಾಗಿ ಆಡಿ ಓಡಿ ಕೂಡಿಬಂದ ಮೈ ಅವಳದು. ಅದರ ಮೇಲೆ ನಿಸರ್ಗವು ಹರೆಯಕ್ಕೆ ಕೊಡುವ ಮೋಹಜನಕವಾದ ಒಪ್ಪೆ ಬಿದ್ದಿದೆ. ಉದ್ದಕ್ಕೆ ತಕ್ಕ ತೋರ; ತೋರಕ್ಕೆ ತಕ್ಕ ಉದ್ದ. ಮುದ್ದು ಮೋರೆ. ಉಬ್ಬಿದ ಎದೆ, ತಗ್ಗಿದ ಉದರ, ತುಂಬಿದ ಕೈಕಾಲು. ಚಿತ್ರಿಕನ ನೆನಸಿನ, ಶಿಲ್ಪಿಯ ಮನಸಿನ, ಕವಿಯ ಕನಸಿನ ಆದರ್ಶ ರೂಪವು, ಅಂಗಸೌಷ್ಟವವು ಆ ಮೇರಿಯಲ್ಲಿ.

ಅವಳ ಆ ಜಲವಿಸರಣದ(ಈಜುವ) ತೊಡಿಗೆಯು ಆಕೆಯ ನೈಸರ್ಗಿಕ ಸೌಂದರ್ಯವನ್ನು ಮತ್ತಷ್ಟು ಉಜ್ವಲಗೊಳಿಸಿದೆ—ನಡುವಿಗೆ ಜಟ್ಟಿಯ ದಟ್ಟಿ, ಮೇಲೆ ಉಬ್ಬಿದೆದೆಗಂಟಿದ್ದ ಅರೆಯೆದೆಯ ಒದ್ದೆ ಕೊರ್ಸೆಟ್, ಹಣೆಯ ಮೇಲ್ಗಡೆ ತುಂಟ ಮುಂಗುರುಳುಗಳನ್ನು ಸೆರೆಗೈದು ಬಿಗಿದಿದ್ದ ರಿಬ್ಬನ್. ಹೀಗೆ ನಗ್ನತೆಯಲ್ಲೊಂದರೂ ಸಲ್ಲುವ ಆ ಆಡಾಮನ ಈವಿನಂತೆ ನಿಸರ್ಗದ ಬಾಲೆಯಾಗಿ ಮಿಸ್ ಮೇರಿಯು ಕಡಲ ತಡಿಯಲ್ಲಿ ಸಾಂವೇಲನ ಎದುರು ನಿಂತಿರುವಳು. ನಾಲ್ವತ್ತರ ಆಚೆಯವನಾದರೂ ಇಪ್ಪತ್ತೈದರ ಮೈಗಟ್ಟೂ ಅಂದವೂ ಸಾಂವೇಲನಲ್ಲಿ ಅಚ್ಚಳಿಯದೆ ಉಳಿದಿವೆ. ಮಲ್ಲಕಾಳೆಗಕ್ಕಿಳಿಯುವ ಜಟ್ಟಿಯಂತೆ ದಟ್ಟಿಕಟ್ಟಿ ಮಳಲಲ್ಲಿ ಒರಗಿರುವನು ಆತ. ಅವನೇ ಮೇರಿಗೆ ಜಲವಿಸರಣ ವಿದ್ಯಾ (ಈಜಿನ) ರಹಸ್ಯವನ್ನು ಕಲಿಸುವ ಗುರುವು.

"ಹೊತ್ತಾಯಿತು, ಇನ್ನೊಮ್ಮೆ ಇಳಿಯೋಣ!" ಎಂದು ವೈಯಾರದಿಂದ ನುಡಿದು ನಸುನಗುವಿಂದಾತನನ್ನು ನೋಡುತ್ತ ನಿಂತಳು ಮೇರಿ. ಸಾಂವೇಲನು ಆ ತೊಯ್ದು ಅರೆಯುಡುಗೆಯ ಹರೆಯದ ಹುಡುಗಿಯ ಬೆಡಗನ್ನು ನೋಡಿದನು. ಅವಳ ಆ ತುಂಟ ಕಣ್ಣಿನಲ್ಲಿ, ಕೊಂಕಿನ ತುಟಿಯಲ್ಲಿ, ನಗುಮುಖದಲ್ಲಿ ನೆಟ್ಟ ನೋಟವನ್ನು ಹಿಂತೆಗೆಯಲಾರದೆ ಒಂದು ವಿಧವಾಗಿ ಅವಳನ್ನೇ ನೋಡುತ್ತಲಿದ್ದ. ಅವನ ದೃಷ್ಟಿಯಲ್ಲಿ ಆ ಹುಡುಗಿಯು ಏನನ್ನು ಕಂಡಳೋ,

ತಟ್ಟನೆ ಅವನ ಕೆನ್ನೆಗೆ ಮೃದುವಾಗಿ ಏಟನ್ನಿಟ್ಟು "ಈ ಹುಚ್ಚಾಟ ಬೇಡ, ಇಳಿಯೋಣ ಬಾ" ಎಂದು ಕಿಲಕಿಲನೆ ನಕ್ಕುಬಿಟ್ಟಳು. ಸಾಂವೇಲನು ಹುಚ್ಚರ ಹುಚ್ಚನಾದ. ಆನಂದದಿಂದೆದ್ದು ಅವಳನ್ನು ಅಡ್ಡಲಾಗಿ ತನ್ನ ಕೈಗಳಲ್ಲೆತ್ತಿ ಕೊಂಡು "ಹೌದು, ಈ ಸಾಗರದಲ್ಲಿ ಈಜುವ ಹುಚ್ಚಾಟ ಬೇಡ; ಇಳಿಯೋಣ ಬಾ ಸಂಸಾರ ಸಾಗರಕ್ಕೆ!" ಎನ್ನುತ್ತ ಅಪ್ಪುಗೆಯ್ಯುತ್ತ ಮುದ್ದಿಕ್ಕುತ್ತ ಕಡಲಿಗೆ ಇಳಿದ. ಈಜುವ ಪಾಠ ಮಾಡಿಸುವುದನ್ನು ಬಿಟ್ಟು ಅವಳೊಡನೆ ನೀರಾಟ ವಾಡಿದ. ಬಹಳ ಹೊತ್ತು ಜಲಕೇಳಿಯಾಡಿ ತಿರುಗಿ ತಡಿಯನ್ನು ಸೇರಿದಾಗ ಅವರು ಗುರುಶಿಷ್ಯೆಯರಲ್ಲ—ಪತಿಪತ್ನಿಯರು!

ಈಜುವ ಹುಚ್ಚು ಅಮೇರಿಕದಲ್ಲಿ ಹರಡಿದೆ. ಅದೂ ಹೆಂಗಳಲ್ಲಿ ಹೆಚ್ಚು. ಮಿಸ್ಸಿಸಿಪೀ ಎಮಝುನ್ ನದಿಗಳನ್ನು ದಾಟುವ, ಫ್ಲೋರಿಡಾ ಯುಕಾತನ್ ಜಲಸಂದುಗಳನ್ನು ಪಾರಾಗುವ, ನ್ಯೂಯೋರ್ಲೀನ್ಸಿನಿಂದ ಹವನಾಕ್ಕೆ ಜಮೈಕಾ ದಿಂದ ಹಯಾಟ್ಟಿಗೆ ಪೋರ್ಟೋರೀಕೋದಿಂದ ತ್ರಿನಿದಾದಿಗೆ ಈಜಾಡುವ ಸ್ಪರ್ಧೆ ಗಳನ್ನು ಅಲ್ಲಿಯ ಮಹಿಳಾ ಸಂಘಗಳು ಏರ್ಪಡಿಸಿರುವವು. ಅವುಗಳಲ್ಲೊಂದು ನ್ಯೂಯೋರ್ಕದಿಂದ ಲೇಂಡ್ಸೆಂಡಿಗೆ ಈಜಲಾಪ ಸ್ತ್ರೀಗೆ ಪ್ರಪಂಚವನ್ನು ೨೪ ತಾಸುಗಳಲ್ಲಿ ಸುತ್ತಿಬರುವ ವಿಮಾನ ಬಹುಮಾನವನ್ನು ಕೊಡುವುದಾಗಿ ಸಾರಿರುವುದು. ಆದು ಕಾರಣ ಎಷ್ಟೋ ಸಮುದ್ರ ವಿಸರಣ ಶಾಲೆಗಳು ತಲೆ ಯೆತ್ತಿವೆ. ಅಂತಹವುಗಳಲ್ಲಿ ಕ್ಯೂಬಾ ದ್ವೀಪದ ಹವನಾದಲ್ಲಿಯ ಸಾಂವೇಲನ ಜಲವಿಸರಣ ಮಹಾಶಾಲೆಯೇ ಪ್ರಸಿದ್ಧವಾದುದು. ಖಂಡದಿಂದ ಜಲವಿಸರಣ ವಿದ್ಯಾರ್ಥಿನಿಯರೆಷ್ಟೋ ಮಂದಿ ಅಲ್ಲಿಗೆ ಬಂದು ತಕ್ಕ ಶಿಕ್ಷಣ ಹೊಂದಿ ಹಿಂತೆರ ಳಿರುವರು. ಮಿಸ್ ಮೇರಿಯು ವಿಮಾನ ಬಹುಮಾನಕ್ಕೆ ಸ್ಪರ್ಧಿಸಲೋಸುಗ ತಕ್ಕ ಶಿಕ್ಷಣವನ್ನು ಹೊಂದುವುದಕ್ಕಾಗಿ ನ್ಯೂಯೋರ್ಕದಿಂದ ಸಾಂವೇಲನ ಬಳಿಗೆ ಬಂದಿದ್ದಳು. ಆದರೆ ಆ ಮಹಾಶರಧಿಯನ್ನು ಏಕಾಂಗಿಯಾಗಿ ದಾಟ ಬೇಕೆಂಬ ಅವಳ ಕೆಚ್ಚನ್ನು ಕೆಡಿಸಿ ತನ್ನೊಡನೆ ಸಂಸಾರಶರಧಿಯಲ್ಲಿ ದುಮುಕುವ ಹುಚ್ಚನ್ನು ಹಿಡಿಸಿ ಅವಳನ್ನು ಅಪ್ಪಿ ಒಪ್ಪಿಸಿಕೊಂಡನು ಸಾಂವೇಲ್. ಕ್ರಮವಾಗಿ ವಿವಾಹವೂ ಆದನು.

ಸಾಂವೇಲನು ಈಗ ಸಂಸಾರಿ. ಒಂದು ಮಗುವಿನ ತಂದೆ. ಹವನಾದಲ್ಲಿ ಅವನಿಗೊಂದು ಚಿಕ್ಕ ಚೊಕ್ಕ ಬಂಗಲೆ. ಮಗುವಿಂದೊಪ್ಪುವ ಮೇರಿಯಿಂದ

ಅದು ಬೆಳಗುತ್ತಿದೆ. ಅಮೇರಿಕವ ತರುಣಿಯರ ಈಜುವ ಮರುಳಿಂದ ಅವನಿಗೆ ದುಡ್ಡಿನ ಒರತೆಯಲ್ಲದೆ ಕೊರತೆಯಿಲ್ಲ. ಅವನ ಜೀವನವು ಸರಾಗವಾಗಿ ಸುಖ ಮಯವಾಗಿ ಸಾಗುತ್ತಿದೆ. ಒಮ್ಮೊಮ್ಮೆ ಆತನಿಗೆ ಇಪ್ಪತ್ತು ವರುಷಗಳ ಹಿಂದಿನ (೧೯೩೩ರ) ತನ್ನ ಆ ಜೀವನಚಿತ್ರವು ಕಣ್ಣೆದುರಿಗೆ ಬಂದು ನಿಲ್ಲುವುದು.

ಆ ಕಾಲದಲ್ಲಿ ಅವನು ನ್ಯೂಯೋರ್ಕದ ನಿರುದ್ಯೋಗಿಗಳ ತಂಡದಲ್ಲೊಬ್ಬ ನಾಗಿದ್ದನು. ಬಲದಲ್ಲೇನೋ ಭೀಮ. ಆದರೇನು? ಕೆಲಸ ಕೊಡುವವರಿಲ್ಲ. ಕೈಯಲ್ಲಿ ಕಾಸಿಲ್ಲ. ಹಾಗೆಂದು ಆ ಭೀಮನ ಹೊಟ್ಟೆಯು ಸುಮ್ಮಗಿರುತ್ತಿತ್ತೆ? ಇಲ್ಲ. ಒಂದು ದಿನ ಅದರ ಕೂಗಾಟವನ್ನು ತಡೆಯಲಾರದೆ ಸಾಂವೇಲನು ಡಾಕ್ಟರ್ ಹರ್ಬರ್ಟರನ್ನು ಅಂಗಲಾಚಿ ಬೇಡಿಕೊಂಡ—"ಸ್ವಾಮಿ, ದಯ ಮಾಡಿ ಈ ಹೊಟ್ಟೆಯ ಚೀರಾಟವನ್ನು ನಿಲ್ಲಿಸಿ!" ಎಂದ. ಹರ್ಬರ್ಟರು ಸಾಂವೇಲನನ್ನು ದಿಟ್ಟಿಸಿ ನೋಡಿದರು. ಆ ಅರೆಹೊಟ್ಟೆಯು ಪೆಟ್ಟಿಗೂ ಹಿಮ್ಮೆಟ್ಟದೆ ದಷ್ಟಪುಷ್ಟವಾಗಿ ಬಳೆದಿತ್ತು ಸಾಂವೇಲನ ದೇಹ. ತೇಜಸ್ಸು ಓಜಸ್ಸು ವೀರ್ಯ ಸಮೃದ್ಧಿ ಎಲ್ಲವೂ ತುಂಬಿದ್ದ ಆದರ್ಶ ಆರೋಗ್ಯಕಾಯ ನಾಗಿದ್ದನು ಆತ. ಪುರುಷ ಸಂಪರ್ಕವಿಲ್ಲದೆಯೆ ಗರ್ಭೋತ್ಪಾದನೆ ಮಾಡುವ, ಕ್ಲಿನಿಕನ್ನು (ಚಿಕಿತ್ಸಾಲಯ) ತೆರೆಯುವ ಯೋಚನೆಯು ಆ ಡಾಕ್ಟರರಿಗಿತ್ತು. ಅದಕ್ಕಾಗಿ ಟ್ಯೂಬ್ ಇಂಜಕ್ಶನ್ ಸಫಲವಾಗುವಂತಹ ವೀರ್ಯವಂತನನ್ನು ಅವರು ಅರಸುತ್ತಿದ್ದರು. ಸಾಂವೇಲನೆಂತೂ ಸುಲಭವಾಗಿ ದೊರೆತ. ಕ್ಲಿನಿಕ್ ಸ್ಥಾಪಿತವಾಯಿತು. ಅಲ್ಲಿಗೆ ಗರ್ಭಾಕಾಂಕ್ಷಿಗಳಾಗಿ ಟ್ಯೂಬ್ ಇಂಜೆಕ್ಶನ್ ಹೊಂದಲು ಬರುವ ಸ್ತ್ರೀಯರಿಗೆ ಅಪ್ರತ್ಯಕ್ಷವಾದ ಗೂಳಿಯಾಗಿ ಬಾಳಿದನು ಸಾಂವೇಲ್. ಅಂತಹ ಹೀನ ವೃತ್ತಿಯಿಂದ ಹೊಟ್ಟೆ ಹೊರುವುದು ಸಾಂವೇಲ ನಿಗೆ ಸರಿದೋರದಿದ್ದರೂ ನಿರುಪಾಯನಾಗಿ ೧೦–೧೨ ವರುಷಗಳನ್ನು ಕಳೆದ; ಹಲವು ಮಕ್ಕಳಿಗೆ ಪರೋಕ್ಷದ ತಂದೆಯಾದ. ಅಷ್ಟರಲ್ಲಿ ಅಮೇರಿಕದ ಹೆಂಗಳೆಗೆ ಈಜಿನ ಹುಚ್ಚುಗಟ್ಟಿತು. ಸಾಂವೇಲನು ಈ ಸುಸಂದರ್ಭವನ್ನು ಬಿಗಿಹಿಡಿದು ನ್ಯೂಯೋರ್ಕದಲ್ಲಿಯೇ ಸ್ವಿಮ್ಮಿಂಗ್ ಮಾಸ್ತರನಾಗಿ ಪ್ರಖ್ಯಾತ ನಾದ. ಆ ಮೇಲೆ ಈ ಹವನಾಕ್ಕೆ ಬಂದು ಜಲವಿಸರಣ ಮಹಾಶಾಲೆಯನ್ನು ತೆರೆದ. ಇಲ್ಲಿ ಉಷ್ಣೋದಕ ಮಹಾವಾಹಿನಿಯ ದೆಸೆಯಿಂದ ಈಜಲನುಕೂಲ ವಾತಾವರಣವೂ ದ್ವೀಪಗಳಿಂದ ದ್ವೀಪಗಳಿಗೆ ಈಜಲಿಕ್ಕೆ ಸೌಕರ್ಯವಿರುವ

ನಡುಗಡ್ಡೆಗಳ ಸಮೂಹವೂ ಇದ್ದುದರಿಂದ ಆರೋಗ್ಯಕ್ಕೆಂದು ಸ್ಪರ್ಧೆಗೆಂದು ಬಾಲೆಯರೆಷ್ಟೋ ಮಂದಿ ತಂಡತಂಡವಾಗಿ ಬಂದು ಸಾಂವೇಲನ ಶಿಷ್ಯೆಯರಾಗುತ್ತಿದ್ದರು. ಇಂದಿನ ಗೃಹಸ್ಥಾಶ್ರಮದ ಸುಖಮಯವಾದ ಜೀವನದೆದುರಿಗೆ ಅಂದಿನ ಆ ಜೀವನವು ಗೂಳಿಯ ಬಾಳಿಗಿಂತಲೂ ಕೀಳಾಗಿ ತೋರುತ್ತಿತ್ತು ಸಾಂವೇಲನಿಗೆ.

ಇಂದು ಮೇರಿಗೆ ಸಂತೋಷವೇ ಸಂತೋಷ. ಅವಳ ಮಗು ಹುಟ್ಟಿದ್ದ ದಿನವಲ್ಲವೆ? ನೋಡಿ, ಆ ಮುದ್ದು ಮಗುವನ್ನು ತೊಡೆಯ ಮೇಲೆ ನಿಲ್ಲಿಸಿ ಕುಣಿಸುತ್ತಿದ್ದಾಳೆ. ಸಾಗರವನ್ನು ಈಜಲು ಹೊರಟ ತನ್ನ ಮಗಳು ಸಂಸಾರ ಸುಖಸಾಗರದಲ್ಲಿ ತೇಲಾಡುತ್ತಿರುವುದನ್ನು ನೋಡಬೇಕೆಂದು ನ್ಯೂಯೋರ್ಕ ದಿಂದ ಬಂದಿದ್ದ ಅವಳ ತಾಯಿ ಮೇಯೊಳು ಬಳಿಯಲ್ಲಿ ಕುಳಿತು ಮೊಮ್ಮಗುವಿನ ಅಂದಚಂದವನ್ನು ನೋಡಿ ಹಿಗ್ಗುತ್ತಿದ್ದಾಳೆ. ಇವರಿಗೆದುರಾಗಿ ಮೇಜಿಯ ಆಚೆ ಕಡೆಯಲ್ಲಿ ಸಾಂವೇಲನು ಕುಳಿತಿದ್ದಾನೆ. ಮಗುವಿನ ಬಾಲಲೀಲೆಯನ್ನು ನೋಡುತ್ತ ಸುಖಗೋಷ್ಠಿಯಾಡುತ್ತ ಚಹಾಪಾನಮಾಡುತ್ತಲಿರುವರು ಅವರೆಲ್ಲ.

ತನ್ನ ಮೊಮ್ಮಗುವಿನ ಸೊಬಗಿಂದ ಹಿಗ್ಗಿದ ಮೇಯೊಳು ವಿನೋದಕ್ಕಾಗಿ "ಇಂತಹ ಮುದ್ದಿನ ಮುದ್ದೆಯನ್ನು ಹೆತ್ತ ನನ್ನ ಮಗಳು ಭಾಗ್ಯವಂತೆಯಲ್ಲವೆ?" ಎಂದು ಅಳಿಯನನ್ನು ಕೆಣಕಿದಳು. ಅಳಿಯನು ಬಿಟ್ಟುಕೊಡುವನೆ? "ನನ್ನಂತಹ ಮಾರನ ಕೈ ಹಿಡಿದುದರಿಂದಲ್ಲವೆ ಆ ಸೌಭಾಗ್ಯ?" ಎಂದ. ತೊಡಗಿತು ಸಂವಾದ. "ಹೊಂದುವ ಸೌಭಾಗ್ಯವೇ ಮುಖ್ಯ. ಇದರಲ್ಲಿ ಗಂಡನಿಗೆ ಪ್ರಾಮುಖ್ಯತೆ ಇಲ್ಲ."

"ಏನೂ ಇಲ್ಲವೆ?"

"ಏನೂ ಇಲ್ಲ; ನಾನು ಮದುವೆಯಾಗದೆಯೇ ಇಂತಹ ಮುದ್ದು ಮಗಳನ್ನು ಹೆರಲಿಲ್ಲವೆ?"

"ಅಂದರೆ ಈ ನನ್ನ ಮುದ್ದು ಮೇರಿಯು............"

"ಅಯ್ಯೋ, ನನ್ನನ್ನು ಅವಮಾನಿಸುವಿರಾ? ಹಾಗಲ್ಲ, ಇವಳು ಬರೀ ಟ್ಯೂಬ್ ಬೇಬಿ ಎಂದೆನಷ್ಟೆ."

"ಏನು! ಟ್ಯೂಬ್ ಬೇಬಿ! ಇವಳು ಟ್ಯೂಬ್ ಬೇಬಿ! ನಿಜವೆ?"

"ಸಂಶಯವೇಕೆ? ನ್ಯೂಯೋರ್ಕದ ಪ್ರಖ್ಯಾತ ಡಾಕ್ಟರ್ ಹರ್ಬರ್ಟ...."

"ಡಾಕ್ಟರ್ ಹ—ರ್ಬ—ರ್ಟ! ಹ—ರ್ಬ—ರ್ಟ! ಹಾ!"

---



## ಶ್ರೀ ಅ. ನ. ಕೃಷ್ಣ ರಾಯರು, ಬೆಂಗಳೂರು

ಇವರು ಪ್ರತಿಭಾಸಂಪನ್ನರಾದ ಸಾಹಿತಿಗಳು. ಕಲಾ ವಿಮರ್ಶಕರು ಸಣ್ಣಕತೆ, ಕಾದಂಬರಿ, ನಾಟಕ, ಏಕಾಂಕ ನಾಟಕ, ಪ್ರಬಂಧ, ವಿಮರ್ಶೆ ಇವೇ ಮೊದಲಾದ ವಾಙ್ಮಯದ ಎಲ್ಲ ಶಾಖೆಗಳಲ್ಲಿಯೂ ಇವರ ಕೈನುರಿತಿದೆ.

ರಾಜಾ ರವಿವರ್ಮನ ಚಿತ್ರಗಳನ್ನು ವಿಮರ್ಶಿಸಿ ಒಂದು ಗ್ರಂಥವನ್ನು ಬರೆದಿದ್ದಾರೆ. 'ಕಾಮನ ಬಿಲ್ಲಿ'ನ ಮುನ್ನುಡಿಯು ಕಥಾಕಲೆಯ ಉತ್ತಮ ವಿಮರ್ಶಾ ಗ್ರಂಥವಾಗಲು ಯೋಗ್ಯವಾಗಿದೆ. 'ಕಥಾಂಜಲಿ' ಎಂಬ ಪತ್ರಿಕೆಯನ್ನು ಕೆಲ ಕಾಲ ನಡಿಸಿದ್ದರು. ಈ ವರೆಗೆ ಇವರ 'ಕಿಡಿ' 'ಮಿಂಚು' ಮೊದಲಾದ ಕಥಾ ಸಂಗ್ರಹಗಳೂ, 'ಆಹುತಿ' 'ಅದದ್ದೇನು' ಇತ್ಯಾದಿ ನಾಟಕಗಳೂ 'ಹೊಸಹುಟ್ಟು' ಮೊದಲಾದ ಪ್ರಬಂಧಗಳೂ 'ಉದಯರಾಗ' ಮೊದಲಾದ ಕಾದಂಬರಿಗಳೂ 'ಕಾಮನಬಿಲ್ಲು' ಎಂಬ ಕರ್ನಾಟಕದ ಕಥೆಗಾರರ ಕಥಾಸಂಗ್ರಾಹವೂ ಪ್ರಕಟವಾಗಿವೆ. ಸಮಾಜದ ಕೊರತೆಗಳನ್ನೂ ಕೆಲವು ವಿಮರ್ಶೆಗಳನ್ನೂ (ರಾಜಾ ರವಿವರ್ಮ) ನಿರ್ದಾಕ್ಷಿಣ್ಯವಾಗಿ ಬರೆದುತೋರಿಸಿ ಕೆಲವು ಸಂಪ್ರದಾಯ ಶರಣರ ರಕ್ತದೃಷ್ಟಿಗೆ ಗುರಿಯಾಗಿದ್ದಾರೆ. ಇದೂ ಅಲ್ಲದೆ ಇವರ ಬರೆಹಗಳಲ್ಲಿ ಸಂಯಮ ಕಡಿಮೆ, ಅಶ್ಲೀಲತೆಯೂ ಇದೆ ಎಂದು ಕೆಲವರ ಅಭಿಪ್ರಾಯ.

ಇವರ ಕತೆಗಳು ಕನ್ನಡದ ಕತೆಗಳಲ್ಲೆಲ್ಲಾ ಉತ್ತಮ ಸ್ಥಾನವನ್ನು ಪಡೆದಿವೆ ಎಂದ ಮೇಲೆ ಆ ಕಲೆಯು ಅವರಿಗೆ ಫಲಿಸಿದೆ ಎಂದು ಹೇಳುವ ಅಗತ್ಯವಿಲ್ಲ. ಇವರೇ ಎನ್ನುವಂತೆ ಇವರ ಕತೆಗಳಲ್ಲಿ ಎಲ್ಲಕ್ಕಿಂತ ಅಂತರಂಗದ ನಿಪ್ಲವದ ಸೂಕ್ಷ್ಮ ಚಿತ್ರಣಕ್ಕೆ ಪ್ರಾಧಾನ್ಯವು ದೊರತಿದೆ. ಮನೋಧರ್ಮ, ಮಾನವ ಸ್ವಭಾವ ಇವುಗಳ ಚಿತ್ರಣವು ಇವರ ಕತೆಗಳಲ್ಲಿ ಚೆನ್ನಾಗಿ ಕಂಡುಬರುತ್ತದೆ ಶ್ರೀಯುತರ ಹೆಸರು ಕರ್ನಾಟಕದಲ್ಲಿ ಚಿರಸ್ಥಾಯಿಯಾಗಿ ಉಳಿಯುವುದೆಂಬುದರಲ್ಲಿ ಸಂದೇಹವಿಲ್ಲ.

# ಪತಿತೆ

ಅ. ನ. ಕೃಷ್ಣರಾಯರು

೧

ಬೆಂಗಳೂರು ಬೀದಿಗಳಲ್ಲಿ ಹುಡಿಯಾದ ಧೂಳಿಗೇನೂ ಕೊರತೆಯಿಲ್ಲ. ಆದರೆ ಅದರ ಉಪಯೋಗವನ್ನು ಮಾತ್ರ ಹೋಟಲಿನವರನ್ನು ಉಳಿದು ಮಿಕ್ಕವರು ಯಾರೂ ಕಂಡುಕೊಂಡಿರಲಿಲ್ಲ. ಅದಕ್ಕೇ ಗಂಗಮ್ಮ ಅದನ್ನು ಹಿಡಿಹಿಡಿಯಾಗಿ ತೆಗೆದು ತಲೆಯನ್ನು ಅಲಂಕರಿಸುತ್ತಿದ್ದರೆ ಅಷ್ಟೊಂದು ಜನ ನೋಡುತ್ತ ನಿಂತಿರುವುದು. ಗಂಗಮ್ಮನ ಭಾವಿಕತೆಯು ನೋಟಕರಿಗೆ ಹುಚ್ಚುಪೆಚ್ಚಾದ ನಡತೆಯಾಗಿತ್ತು. ಅವಳು ಆನಂದದಿಂದ ನಗುವಳು; ಅವರು ಅಪಹಾಸ್ಯ ದಿಂದ ನಗುವರು. ಮಧ್ಯೆಮಧ್ಯೆ ತನ್ನ ಸೊಂಟದಲ್ಲಿ ಸಿಕ್ಕಿಕೊಂಡಿದ್ದ 'ಚಿನಡಿಯ ಚೀಲ'ದಲ್ಲಿನ ಮರದ ಬಾಗಿನದ ಕನ್ನಡಿಯನ್ನು ಹೊರಗೆ ತೆಗೆದು ಮುಖವನ್ನು ನೋಡಿಕೊಳ್ಳುವಳು. ಅರಸಿನ ತುಂಬಿದ ಕೆನ್ನೆ; ಕುಂಕುಮ ತುಂಬಿದ ಹಣೆ; ಎಣ್ಣೆ ತುಂಬಿದ ತಲೆ—ಅವುಗಳ ಮೇಲೆ ಮಣ್ಣಿನ ಪುಷ್ಪಾ ಲಂಕಾರ. ತನ್ನ ರೂಪವನ್ನು ಎವೆಯಿಕ್ಕದೆ ನೋಡಿಕೊಂಡು ಹಿಗ್ಗುವಳು. ಹಾಗೆಯೇ ಹಾಡುವಳು. ಹಾಡುತ್ತಹಾಡುತ್ತ ಕಿಲಕಿಲನೆ ನಕ್ಕು ವಿಚಾರವಶ ಳಾಗಿ ತುಸು ಹೊತ್ತು ಸುಮ್ಮನಾಗಿ ಬಿಡುವಳು. ನೋಟಕರು ರೂಪಕವು ಮುಗಿಯಿತೆಂದು ಮನೆಗಳಿಗೆ ತೆರಳಿದ ಮೇಲೆ ಮತ್ತೆ ತನ್ನ ಶೃಂಗಾರವನ್ನಾ ರಂಭಿಸುವಳು. ಈ ಸಲ ಹಿಡಿಯು ಸಾಲದು—ಉಡಿಯಲ್ಲಿ ಮಣ್ಣು ತುಂಬಿ ಹುಯಿದುಕೊಳ್ಳುವಳು. ಹಾಡುವಳು—ಹಾಡುವಳು—ಮತ್ತೂ ಗಟ್ಟಿಯಾಗಿ ಹಾಡುವಳು. ಕೊನೆಗೆ ಬೇಸತ್ತು ಕಾಲೆಳೆದುಕೊಂಡು ಮನೆಯನ್ನು ತಲುಪಿ ಬಿದ್ದುಕೊಳ್ಳುವಳು.

ಪೂರ್ಣಯ್ಯನವರ ಛತ್ರದ ಜಗುಲಿಯೇ ಗಂಗಮ್ಮನ ಮನೆ. ತನಗೆ ವಿಭಾಗವಾಗಿದ್ದ ಭಾಗದ ಗೋಡೆಯ ಮೇಲೆ ನಾಟಕದ ಚೀಟಿಗಳ ಮೇಲೆ ಬರುವ ಎಷ್ಟೋ ಚಿತ್ರಗಳು ಅಲಂಕೃತವಾಗಿದ್ದವು. ಬೇಟೆಗಾರನು ತನ್ನ ಜಯಲಾಭವೆಂದು ಸತ್ತ ಜಿಂಕೆ, ಚಿರತೆಗಳ ಚರ್ಮಗಳ ಕಡೆಗೆ ಹೆಮ್ಮೆಯಿಂದ ಕೈ ತೋರುವಂತೆ ಗಂಗಮ್ಮನು ತನ್ನ ಚಿತ್ರಸಂಗ್ರಹದ ಕಡೆಗೆ ಕೈ ತೋರುವಳು.

ಒಂದೊಂದನ್ನು ಸಂಪಾದಿಸಬೇಕಾದರೂ ಒಂದೊಂದು ಯುದ್ಧವನ್ನೇ ಮಾಡಿದಳು. ಗಂಗೆಯಿದ್ದ ವಠಾರವು ಅನೇಕರ ಮನೆಯಾಗಿತ್ತು. ಮೂಲೆಯಲ್ಲಿ ಒಬ್ಬ ಬೈರಾಗಿ. ಅವನು ಮಾತನಾಡಿ ಎಂಟು ವರ್ಷಗಳಾಗಿತ್ತಂತೆ! ಮೊನ್ನೆ ಯಾರೋ ಅವನ ಶಂಖಕ್ಕೆ ಕೈ ಹಾಕಿದಾಗ ನಾಲ್ಕು ನಿಘಂಟುಗಳಿಗಾಗುವಷ್ಟು ಪದಗಳನ್ನು ಹೊರ ಚೆಲ್ಲಿ ಯಥಾವಿಧಿಯಂತೆ ಮೌನವ್ರತಾಚಾರಿಯಾದನು. ಅವನ ಪಕ್ಕದಲ್ಲಿ ಭಿಕ್ಷುಕರದೊಂದು ಸಂಸಾರ. ಗಂಡ–ಹೆಂಡತಿ–ಎರಡು ಮೂರು ಮಕ್ಕಳು. ಈಗವರ ಸ್ಥಿತಿ ಉತ್ತಮಗೊಂಡು ಬಾಡಿಗೆ ಮನೆ ಮಾಡುವ ಪ್ರಯತ್ನದಲ್ಲಿದ್ದಾರೆ. ಅವರ ಪಕ್ಕದಲ್ಲಿ ಒಬ್ಬ ಮೂಗಿ—ಅವಳೂ ಭಿಕ್ಷುಕಿ—ಅವಳ ಗಂಡ ನಾಲ್ಕು ವರ್ಷ ಸಂಸಾರ ಮಾಡಿಕೊಂಡಿದ್ದು ದೇಶಾಂತರ ಓಡಿಹೋಗಲು ಪಾಪ! ಬಡಪಾಪಿ!! ಏನು ಹೇಳಲೂ ತೋರದೆ ಮೂಗಿಯಾದಳಂತೆ!!! ಅವಳ ಪಕ್ಕದಲ್ಲಿ ಒಬ್ಬ ತರುಣ ಭಿಕ್ಷುಕ—ವಯಸ್ಸು ಮೂವತ್ತಕ್ಕೆ ಮೀರಿರಲಾರದು. ಏಕನಾದವನ್ನು ಹಿಡಿದು ಕನಕ ಪುರಂದರರ ಕೀರ್ತನೆಗಳನ್ನು ಹಾಡಿಕೊಂಡು ದೇಶಾವರಕ್ಕೆ ಹೋಗುತ್ತಿದ್ದ—ಅವನೇ ಆ ಗುಂಪಿನ ಗವಯ್! ಬೈರಾಗಿಗೆ ಅವನ ಸಂಗೀತ ತುಂಬ ಪರಮಾಯಿಷಿ! ಇನ್ನೊಂದು ಭಾಗದ ಜಗುಲಿಯ ಮೇಲೆ ಒಬ್ಬ ಜಂಗಮಯ್ಯ. ಅವನು ಮೊದಲು ಹಾರವಯ್ಯನಾಗಿದ್ದನಂತೆ. ಹೊಟ್ಟೆಗಿಲ್ಲದೆ ಜಂಗಮನಾದನಂತೆ. ಈಗ ಜಂಗಮನೆಂದು ಹಾರವರು ಭಿಕ್ಷಹಾಕುತ್ತಿರಲಿಲ್ಲ; ಡೋಂಗಿ ಜಂಗಮನೆಂದು ಲಿಂಗವಂತರು ಭಿಕ್ಷ ಹಾಕುತ್ತಿರಲಿಲ್ಲ; ಈ ಗೋಳೇಕೆಂದು ಈಗ ತುರುಕನಾಗೋ ಯೋಚನೆ ಮಾಡುತ್ತಿದಾನೆ. ಅವನ ಬಳಿಗೆ ಆಗಾಗ್ಗೆ ಒಬ್ಬ ಮೌಲ್ವಿ ಸಾಹೇಬರು ಬಂದು ಏನೋ 'ಗುಸಗುಸ' ಮಾತನಾಡಿಕೊಂಡು ಹೋಗುತ್ತಾರೆ. ಇವನ ಪಕ್ಕದಲ್ಲಿ ಒಬ್ಬ ಮುದಿಯ. ಯಾರಾದರೂ ತಂದು ತಿನ್ನಲು ಏನಾದರೂ ಕೊಟ್ಟರೆ ತಿನ್ನುವನು, ಇಲ್ಲದಿದ್ದರೆ ನಿರಾತಂಕವಾಗಿ ಉಪವಾಸ ಮಾಡಿಬಿಡುವನು. ಅಲ್ಲಿದ್ದ ಭಿಕ್ಷುಕರೆಲ್ಲಾ ಅವನಿಗೆ ಕೂಳು ಹಾಕಿ, ಸಾಯುವ ದಿವಸಗಳನ್ನು ಎಣಿಸುತ್ತಿದ್ದರು.

—ಬೆಳಗಾಯಿತು. ಗಂಗಮ್ಮ ಎದ್ದು ಎದುರಿಗಿದ್ದ ನಲ್ಲಿಯ ಬಳಿಗೆ ಮುಖಮಾರ್ಜನೆಗೆ ನಡೆದಿದ್ದಾಳೆ. ದಾರಿಯಲ್ಲೇ ತಲೆ ಸುತ್ತುತ್ತ ಬಂದು ಬಿದ್ದುಬಿಟ್ಟಳು. ಛತ್ರದ ಪಾರುಪತ್ಯೇಗಾರರು ಅದನ್ನು ಕಂಡು ಆಳುಗಳಿಂದ

ಎತ್ತಿಸಿ ತರಿಸಿ ಅವಳ 'ಮನೆ'ಯಲ್ಲಿ ಮಲಗಿಸಿದರು. ಎಷ್ಟು ಹೊತ್ತಾದರೂ ಜ್ಞಾನವೇ ಬರಲಿಲ್ಲ. ಆಳುಗಳು ಗಾಬರಿಯಿಂದ ಮೈ ಕೈ ಬದರಲು ಪಾರು ಪತ್ಯೇಗಾರರು ಒಂದೇ ಕಣ್ಣಲ್ಲಿ ನೀರುಹಾಕಿಕೊಂಡು, ಗಂಗಿಗೆ ಹಿಡಿಶಾಪ ಹಾಕುತ್ತಾ, ಒಂದು ಗಾಡಿ ಗೊತ್ತುಮಾಡಿ ಆಸ್ಪತ್ರೆಗೆ ಸಾಗಿಸಿದರು. ಸಂಜೆಯ ವೇಳೆಗೆ ಗಂಗೆಯ ಸಂಸಾರದವರಿಗೆಲ್ಲಾ ಸುದ್ದಿ ಗೊತ್ತಾಯಿತು. ಆಸ್ಪತ್ರೆಗೆ ಹೋಗಿ ಅನೇಕರು ನೋಡಿ ಬಂದರು. ಇನ್ನೂ ಮೂರು ತಿಂಗಳು ತನಕ ಅವಳು ತಮ್ಮನ್ನು ಸೇರುವುದಿಲ್ಲವೆಂದು ತಿಳಿದು ಬಹಳ ವಿಷಾದಗೊಂಡರು. ಬೈರಾಗಿಯು "ಖುದಾವಂದ್, ಪರವರ್ದಿಗಾರ—ಎಲ್ಲಾ ಒಳ್ಳೇದು ಮಾಡು ತ್ತದೆ" ಎಂದನು. ಸಂಸಾರಿ ಭಿಕ್ಷುಕರು ಒಬ್ಬರ ಮುಖವನ್ನೊಬ್ಬರು ಅರ್ಥ ಸೂಚಕವಾಗಿ ನೋಡಿಕೊಂಡರು. ಗವಯಿಯು "ಆರಿಗಾರಿಲ್ಲ ಆಪತ್ಕಾಲ ದೊಳಗೆ । ವಾರಿಜಾಕ್ಷನ ನಾಮ ನೆನೆ ಕಂಡ್ಯ ಮನವೆ ॥" ಎಂದು ಕನಕದಾಸ ರನ್ನು ಜ್ಞಾಪಿಸಿಕೊಂಡನು.

೨

ಮೂರು ತಿಂಗಳು ಕಳೆಯಿತು. ಗಂಗಮ್ಮನನ್ನು ಆಸ್ಪತ್ರೆಯಿಂದ ಕರೆ ತರಲು ಎಲ್ಲರೂ ಹೋಗಿದ್ದರು. ಡಾಕ್ಟರು ಬಳಗವನ್ನು ನೋಡಿ ನಕ್ಕು "ಹುಡುಗಿ ಗಂಡಾ ಬಂದಿಲ್ವೋ?" ಎಂದು ಕೇಳಿದರು.

ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು "ಇಲ್ಲ"ವೆನ್ನುವ ಅರ್ಥವೂ "ನಮಗೆ ಗೊತ್ತಿಲ್ಲ"ವೆಂಬರ್ಥವೂ ಒಟ್ಟಿಗೆ ಬರುವಂತೆ ತಲೆದೂಗಿದರು. ಡಾಕ್ಟರು ಅವರಿಂದ ಗಂಗಮ್ಮನ ಜೀವನವನ್ನರಿತುಕೊಂಡು "ಈಗಲೇ ಕಳಿಸಲ್ಲ. ಇನ್ನೊಂದು ತಿಂಗಳು ಬಿಟ್ಟು ಬನ್ನಿ" ಎಂದು ಹೇಳಿ ಒಳಗೆ ಹೋಗುವುದರಲ್ಲಿದ್ದರು. ಆಗ ಜಂಗಮನು "ಬುದ್ದಿ-ಮಗಾ ಎಂತಾದು ಏಳ್ಲಿ ಇಲ್ವಲ್ಲಾ" ಎಂದನು.

"ಗಂಡು" ಎಂದು ಹೇಳಿ ಡಾಕ್ಟರು ಹೊರಟು ಹೋದರು.

ಆ ಒಂದು ತಿಂಗಳೂ ಗಂಗಮ್ಮನಿಗೆ ಬೆಚ್ಚಗಿರುವ ಮನೆ, ಬಟ್ಟೆಬರೆ ಗಳನ್ನು ಒದಗಿಸುವುದರಲ್ಲಿ ಎಲ್ಲರೂ ಸುಲಭವಾಗಿ ಕಳೆದರು. ಬೈರಾಗಿಯು ಮೂಲೆಯನ್ನು ಬಿಟ್ಟುಕೊಟ್ಟ. ಜಂಗಮಯ್ಯನು ಎರಡು ಮೂರು ಚಾಪೆ ಗಳನ್ನು ಅಡ್ಡಲಾಗಿ ಕಟ್ಟಿ, ಒಂದು ಬುಡ್ಡಿಯನ್ನು ಹಚ್ಚಿಟ್ಟ. ಭಿಕ್ಷುಕ ಸಂಸಾರದವರು ಹಳೆಯ ತುಂಡು ಬಟ್ಟೆಗಳನ್ನು ಸೇರಿಸಿ ಹಾಸಿಗೆ ಹೊಲಿದು

ಕೊಟ್ಟರು. ತರುಣ ಭಿಕ್ಷುಕನು ತನ್ನ ಹೆಚ್ಚು ಬಟ್ಟೆಗಳನ್ನೆಲ್ಲಾ ಮಗುವಿಗೆಂದು ಇತ್ತ. ಮೂಕಿಯು ತಾಯಿಗೆ ತನ್ನ ತುಂಡು ಸೀರೆಯನ್ನಿತ್ತಳು. ಅವರೆಲ್ಲರ ಜೀವನಕ್ಕೆ ಒಂದು ಹೊಸ ಹುರುಪು ಬಂದಂತಾಯಿತು. ಮಗುವಿಗೆ ಹೆಸರಿಡುವ ವಿಚಾರ ದೊಡ್ಡ ಮಾರಾಮಾರಿಯೇ ನಡೆದು ಹೋಯಿತು. "ಸಿರಿ ರಾಮ ಚಂದಿರ್" ಎಂಬು ಹೆಸರಿಡಲಿ ಎಂದು ಬೈರಾಗಿ. "ಅದು ಬೇಡ—ನಾಗಣ್ಣ" ಚೆನ್ನಾಗಿದೆ ಎಂದು ಗವಯ್. "ಬಸಪ್ಪ" ಅಂತಾ ಇಡಬೇಕೆಂದು ಜಂಗಮನ ಹಟ. ಕೊನೆಗೆ ತಾಯಿಯನ್ನು ಕೇಳಿ ಅವಳ ಇಚ್ಛೆಯ ಹೆಸರನ್ನೇ ಇಡ ಬೇಕೆಂದು 'ಮಹಾಸಭೆ'ಯು ನಿಶ್ಚಯಿಸಿಬಿಟ್ಟಿತು.

ಮಗು ಬಾಣಂತಿ ಮನೆಗೆ ಬಂದ ದಿನವಂತೂ ಗಲಾಟೆಯೋ ಗಲಾಟೆ. ಆ ಸಂಭ್ರಮವನ್ನು ನೋಡುವುದಕ್ಕೆ ಬೀದಿಯಲ್ಲಿ ದೊಡ್ಡ ಗುಂಪೇ ನೆರೆದು ಬಿಟ್ಟಿತ್ತು. ತಾಯಿಯು ಮಗುವಿಗೆ "ತಿಮ್ಮ" ನೆಂದು ಹೆಸರಿಟ್ಟದ್ದು ಕೆಲವರಿಗೆ ಒಪ್ಪಲಿಲ್ಲ. ಆದರೂ ಯಾರೂ ಅಸಮಾಧಾನವನ್ನು ಸೂಚಿಸಲಿಲ್ಲ. ಮಗುವು 'ತಿಮ್ಮ'ನ ಹಾಗಿಲ್ಲದಿದ್ದರೂ ಅಷ್ಟೇನೂ ರೂಪವಂತನಾಗುವ ಲಕ್ಷಣವನ್ನು ತೋರುತ್ತಿರಲಿಲ್ಲ. ತಾಯಿಗೂ ಮಗುವಿಗೂ ಹೋಲಿಕೆಯು ಎಳ್ಳಷ್ಟೂ ಇರಲಿಲ್ಲ. ಆದರೂ ಅದು ತಾಯಲ್ಲಿ ವಿಶೇಷ ಪ್ರೀತಿಯನ್ನು ಆಗಲೇ ವ್ಯಕ್ತ ಪಡಿಸುತ್ತಿತ್ತು. ಮಗುವಿನ ಲಾಲನೆ ಪಾಲನೆಯು 'ಮಹಾಸಭೆ'ಯುವರಿಗೆ ಸೇರಿತು. ಗಂಗಮ್ಮನಿಗೆ ಬೇಕಾದಷ್ಟು ವಿಶ್ರಾಂತಿ ದೊರೆಯಿತು.

—ಒಂದು ದಿನ ಮಗುವನ್ನು ಎತ್ತಿಕೊಂಡು ಹಾಲೂಡಿಸುತ್ತಿದ್ದಾಳೆ. ಎದುರಿಗೆ ಮಸಕು ಮಸಕಾಗಿ ಕೆಲವು ಚಿತ್ರಗಳು ಕುಣಿಯುತ್ತಿವೆ. ನಾಗ ಮಂಗಲದಲ್ಲಿ ಒಬ್ಬ ಗೌಡರ ಮನೆಯಲ್ಲಿ ತಾನು ಊಳಿಗಮಾಡುತ್ತಿದ್ದಂತೆಯೂ ಅವರ ಮಗನು ತನ್ನನ್ನು ಮೋಹಿಸಿ, ಕಾಮಿಸಿ, ರಮಿಸಿದಂತೆಯೂ, ಅನಂತರ ಅವನು ಬೇರೊಬ್ಬ ಭಾರಿಗೌಡರ ಮಗಳನ್ನು ಮದುವೆಯಾದಂತೆಯೂ, ತಾನು ಹುಚ್ಚುಹಿಡಿದು ಊರು ಬಿಟ್ಟು, ಅಲ್ಲಿ ಇಲ್ಲಿ ಹೆಣಗಾಡಿ ಕೊನೆಗೆ ಬೆಂಗಳೂರು ಸೇರಿದಂತೆಯೂ ಕಂಡಳು. ಕನಸೇನೋ ಎಂದು ಕಣ್ಣುಜ್ಜಿಕೊಂಡು ಮತ್ತೆ ಮತ್ತೆ ಅದೇ ಸ್ಥಳವನ್ನು ನೋಡುತ್ತಾಳೆ—ಮತ್ತೆ ಮತ್ತೆ ಅವೇ ನೋಟಗಳು. ಮತಿಗೆಟ್ಟಿದ್ದ ತಾನು ಯಾರು ಎಂಬುದರ ಸ್ಮರಣೆಯನ್ನು ಮರೆತಿದ್ದ ತನಗೆ ಈ ಮತಿಯು ಹೇಗೆ ಬಂತು? ಈ ಮಗು ಯಾರು?—ಯಾರದು—? ಎಂಬ

ಸಮಸ್ಯೆಗಳು ತಲೆಯನ್ನು ಹೊಕ್ಕವು. ನಾಗಮಂಗಲದ ಬಾಳು ಬಾಲಿಕೆಯ ಮುಗ್ಧ ಬಾಳು—ಆಗ ಅರಿವಿಲ್ಲ. ಅನಂತರ ಹುಚ್ಚಿಯ ಬಾಳು—ಆಗ ಸ್ಮೃತಿಯಿಲ್ಲ. ಈಗ ತಾಯಿಯ ಬಾಳು--ಸ್ಮೃತಿಯಿರುವುದೇ? ಎಂದು ಯೋಚಿಸುವಳು. ಅನನುಭವದಿಂದ—ವಿಸ್ಮೃತಿಯಿಂದ ಲೋಕವನ್ನು ಅರಿಯದ ತನಗೆ ಈಗ ಲೋಕವು ನಗ್ನ ಸ್ವರೂಪಿನಲ್ಲಿ ಕಾಣಬಂದುದರ ಮರ್ಮವಾದರೂ ಏನು?—ಹುಲಿಯ ಬಾಯಿಂದ ಸಂರಕ್ಷಿಸಿ ಸಿಂಹದ ಬಾಯಿಗೆ ಕೊಟ್ಟಂತಾಯಿತಲ್ಲಾ ಎಂದು ಮರುಗಿದಳು. ಈ ಬಂಧುಗಳು ಯಾರು—ತಾನು ಇಲ್ಲಿಗೆ ಹೇಗೆ ಬಂದೆ ಎಂದು ಯೋಚಿಸಿದಷ್ಟೂ ಚಿತ್ತ ಕ್ಷೋಭೆಯೇ ಹೆಚ್ಚುತ್ತ ಬಂತು. ತುಂಡು ತುಂಡಾದ ತಂತುಗಳನ್ನು ಕೂಡಿಸ ಹೋಗಿ ಸಿಕ್ಕಿನಲ್ಲಿ ಬಿದ್ದು ಒದ್ದಾಡಲಾರಂಭಿಸಿದಳು. ಕೊನೆಗೆ ಮಗುವನ್ನು ಎತ್ತಿಕೊಳ್ಳಲು ಬಂದ ಸಂಸಾರಿಗ ಭಿಕ್ಷುಕಿಯನ್ನು "ಇದು—ಯೆಂಗಾಯಿತವ್ವಾ" ಎಂದು ಕೇಳಿದಳು.

ಆಕೆಯು ಒಮ್ಮೆಲೇ ಪ್ರಶ್ನೆಗುತ್ತರವೀಯದೆ ತನ್ನ ಹತ್ತಿರ ಆಡುತ್ತ ಆಡುತ್ತ ಬಂದ ತನ್ನ ಏಳು ವರ್ಷದ ಮಗನ ತಲೆಯನ್ನು ನೇವರಿಸುತ್ತಾ "ಅದ್ಯಾಕವ್ವಾ ಚಿಂತೆ. ಎಂಗೋ ಆಯ್ತು-ಏನೋ ಆಯ್ತು. ನನ್ನಪ್ಪಯ್ಯ ಎಂಗಾದನೋ ಅಂಗೆ. ನಮ್ಮ ಜನ ಇಂದಿನ್ಕತೆ ನೋಡ್ತಾ ಕುಂದ್ರಬಾರದು. ಯಾವ್ಯೋಳಿಗೆ ಯಾವ್ಯೋನೋ ಗಂಡ; ಯಾವ್ಯೋನಿಗೆ ಯಾವ್ಯೋಳೊ ಎಂಡ್ರು! ಶಿವ ಯಾರಯರ್ನ ಸೇರಿಸ್ತಾನೆ ಅದೇ ಸಂಸಾರ" ಎಂದು ಗಂಗಮ್ಮನ ಮಗುವನ್ನು ಆಡಿಸುತ್ತ ಕುಳಿತಳು.

ಒಬ್ಬ ತಾಯಿಯ ಮಾತು ಕೇಳಿ ಇನ್ನೊಬ್ಬ ತಾಯಿಗೆ ತುಸು ಸಂತಸವೇನೋ ಆಯಿತು. ಆದರೆ ಹೊಸ ಅನುಭವದ ಭೀತಿಯು ಬಾಧಿಸುತ್ತಿತ್ತು. ಕಣ್ಣುಕಟ್ಟಿ ಕಾಡಿಗೊಯ್ದು ಅಲ್ಲಿ ತತ್‌ಕ್ಷಣ ಕಟ್ಟನ್ನು ಬಿಚ್ಚಿದಂತಾಗಿತ್ತು ಗಂಗಮ್ಮನ ಪಾಡು. ಆದರೊಮ್ಮೆ 'ತಿಮ್ಮ'ನ ಕಡೆ ತಿರುಗಿದರೆ ಎದೆಯ ಹಾಲು ಚಿಲುಮೆಯಂತೆ ಚಿಮ್ಮುತ್ತ ಚಿಮ್ಮುತ್ತ ಹರಿದು ಹೊಸ ಅನುಭವವನ್ನುಂಟುಮಾಡಿಕೊಡುತ್ತಿತ್ತು. ಕಣ್ಣಿಗೆ ಕಣ್ಣನ್ನು ಕೂಡಿಸುವಳು; ಮೂಗಿಗೆ ಮೂಗು ಉಜ್ಜಿ ಮಗುವನ್ನು ಕಿಲಕಿಲ ನಗಿಸುವಳು; ಕೆನ್ನೆಗೆ ಕೆನ್ನೆ ಕೊಟ್ಟು ಆ ಮೃದುತ್ವದ ಸುಖವನ್ನು ಅನುಭವಿಸುವಳು; ಲೊಚಲೊಚನೆ ತಡೆಯಡೆಯಿಲ್ಲದೆ ಮುದ್ದಾಡುವಳು. ಮಗುವನ್ನು ಎಷ್ಟು ಮಾತುಗಳಿಂದ ಕರೆದರೂ, ಹೊಗಳಿದರೂ

ಆವಳಿಗೆ ತೃಪ್ತಿಯಿಲ್ಲ. ಇದರ ಜತೆಯಲ್ಲೇ ಮಗುವನ್ನು ಅಪ್ಪಿ 'ಗೊಳೊ' ಎಂದು ಅತ್ತುಬಿಡುವಳು. ಹಿಂದಿನದನ್ನೆಷ್ಟು ಮರೆಯಲೆತ್ನಿಸಿದರೂ ತಿಮ್ಮನು ಅದನ್ನು ಮತ್ತೆ ಮತ್ತೆ ಜ್ಞಾಪಿಸಿಕೊಡುತ್ತಿದ್ದ. ರಾತ್ರಿ ಹಾಡು ಹೇಳಿಕೊಂಡು ಮಗುವನ್ನು ತೂಗಿ ನಿದ್ರಿಸುತ್ತಿದ್ದ ಗವಯಿಯನ್ನು ನೋಡುತ್ತ, ಹಿಂದನದನ್ನು ಮರೆಯುತ್ತ ನಿದ್ರೆಹೋಗುವಳು. ಬೆಳಗಾಯಿತೆಂದರೆ ತಿರುಗಿ ಅದೇ ಅನುಭವದ ಚಕ್ರವ್ಯೂಹ.

೩

ಭಿಕ್ಷುಕ ಸಂಸಾರವು ಮೊದಲೇ ಗೊತ್ತುಮಾಡಿಕೊಂಡಿದ್ದಂತೆ ಮಾವಳ್ಳಿಯ ಮೂಲೆಯಲ್ಲಿ ಒಂದೂವರೆ ರೂಪಾಯಿ ಬಾಡಿಗೆ ಗೊತ್ತುಮಾಡಿಕೊಂಡು ಮನೆ ಮಾಡಿಕೊಂಡು ಹೋದರು. ಅದರ ಪಕ್ಕದಲ್ಲಿ ಒಂದು ಕೋಣೆ! ಬಾಡಿಗೆ ಎಂಟೇ ಆಣೆಯೆಂದು ಗಂಗಮ್ಮನಿಗೆ ಅದನ್ನು ಗೊತ್ತುಮಾಡಿಕೊಟ್ಟರು. ತಿಮ್ಮನಿಗೆ ಒಂದು ವರ್ಷ ತುಂಬಿತ್ತು. ಗಂಗಮ್ಮನು ಸಂಪಾದನೆಗೆ ಹೊರಗೆ ಹೋದಾಗಲೆಲ್ಲಾ ಆವನನ್ನು ನೋಡಿಕೊಳ್ಳುವುದು ವೆಂಕಟಮ್ಮನ ಪಾಲಿಗೆ (ಸಂಸಾರಿಗ ಭಿಕ್ಷುಕಿ) ಬೀಳುತ್ತಿತ್ತು. ಕ್ರಮಕ್ರಮೇಣ ಭಿಕ್ಷುಕ ವೃತ್ತಿಯ ಕಠಿಣ ಜೀವನವು ಗಂಗಮ್ಮನಿಗೆ ಮನವರಿಕೆಯಾಗುತ್ತ ಬಂದಿತು. ''ಮುಂದಕ್ಕೆ ಹೋಗು—ಕೈಬಿಡುವಿಲ್ಲ''....''ನಿಂಗೇನೇ ಧಾಡಿ ಕಳ್ಳ ರಂಡೇ ದುಡಿದು ಹಾಳುಹೊಟ್ಟೆ ತುಂಬಿಕೊಳ್ಳೇಕೇನು?''....''ಇದಲ್ಲಾ ಸೋಗು; ಬೆಳಿಗ್ಗೆ ಭಿಕ್ಷ; ರಾತ್ರಿ ಕಳ್ಳತನ, ಹಾದರ ಮಾಡಿಕೊಂಡು ಬಾಳೋದು—ಸಾಕು ನಡಿಯಾಚೆ'' ಎನ್ನುವ ಮಾತುಗಳನ್ನು ಕೇಳಿಕೇಳಿ ದಿನದಿನಕ್ಕೆ ಗಂಗಮ್ಮನ ಅನುಭವ ವೃಕ್ಷವು ಬೆಳೆಯುತ್ತಿತ್ತು. ಜನರ ಕಟುನುಡಿಗಳನ್ನು ಕೇಳಿದಾಗೆಲ್ಲಾ ಅವುಗಳ ಅರ್ಥವೇನೆಂದು ಮನಸ್ಸಿನಲ್ಲಿಯೇ ಹುಡುಕುವಳು; ತತ್‌ಕ್ಷಣವೇ ತಿಮ್ಮನ ನೆನಪು ಬಂದು ಗೊಂದಲವನ್ನು ನಿವಾರಿಸಿಬಿಡುತ್ತಿತ್ತು. ಅಂತೂ ಎರಡು ಹೊತ್ತು ಹೊಟ್ಟೆಕಳೆಯುತ್ತಿದ್ದರೂ ಬಟ್ಟೆಬರೆಯಾಗುವುದು ತುಂಬ ಕಷ್ಟವಾಗಿತ್ತು; ಜತೆಗೆ ವೆಂಕಟಮ್ಮನ ಋಣವು ಬೇರೆ ಬಾಧಿಸುತ್ತಿತ್ತು. ಒಂದು ದಿನ ಗಂಗಮ್ಮನು ತನ್ನ ನಿತ್ಯ ಯಾತ್ರೆಯನ್ನು ಮುಗಿಸಿಕೊಂಡು ಬರುತ್ತಿದ್ದಾಳೆ. ಎದುರಿಗೆ ಕೆಂಪು ಷರಟು ಧರಿಸಿ, ಮೀಸೆಯನ್ನು ತಿರುವಿ, ವಾಣಿಯಂಬಾಡಿ ಲುಂಗಿಯನ್ನು ಸುತ್ತಿದ ಒಬ್ಬ ವ್ಯಕ್ತಿ ಬಂದು ನಿಂತ. ಗಂಗಮ್ಮನು ತುಸು ಅವಾಕ್ಕಾಗಿ ''ಯಾರು ನೀನು?'' ಎಂದು ಪ್ರಶ್ನಿಸಿದಳು.

ವ್ಯಕ್ತಿಯು ಕೂಡಲೆ ಮರುತ್ತರ ಕೊಡದೆ ಗಂಗಮ್ಮನನ್ನು ನೋಡಿ ನಕ್ಕು ಸಣ್ಣ ದನಿಯಲ್ಲಿ "ಆರಿಗಾರಿಲ್ಲ ಆಪತ್ಕಾಲದೊಳಗೆ । ವಾರಿಜಾಕ್ಷನ ನಾಮ ನೆನೆ ಕಂಡ್ಯ ಮನವೇ ॥" ಎಂದು ಹಾಡಲು ಗಂಗಮ್ಮನು ದಿಟ್ಟಿಸಿ ನೋಡಿ, ಧಾರಾಕಾರವಾಗಿ ಸುರಿಯುತ್ತಿದ್ದ ಆನಂದಬಿಂದುಗಳನ್ನು ಪರಿಹರಿಸಿಕೊಂಡು "ಎಂಗಾಗೋಗಿ ಬಿಟ್ಟೆದಿ ಲಕ್ಕಣ್ಣ...ಒಳ್ಳೇ ಅರಸುಮಗ ಕಂಡಂಗೆ ಕಾಣ್ತೈತಿ."

"ಔದು ಗಂಗಾ! ಭೋ ಗಾಸಿಪಟ್ಟೆ ನೋಡು! ಈಗ ಮಾರ್ಕೆಟ್ಟಿನೊಳಗೆ ಸೊಪ್ಪು ತರಕಾರಿ ಅಂಗಡಿ ಮಡಗಿವ್ನಿ....ಕಾಸು ಚೆನ್ನಾಗಿ ಗಿಟ್ತದೆ."

"ಅಂಗಾ....ಬಲು ಸಂತೋಸ....ಗುರ್ತು ಎಂಗೆ ಸಿಕ್ತು!"

"ನಿನ್ನ ಗುರ್ತು ನಂಗೆ ಸಿಕ್ಕಾಕಿಲ್ವಾ! ಅದ್ಸರಿ...ತಿಮ್ಮ ಎಂಗವ್ನೆ?"

"ಪಸಂದಾಗವ್ನೆ....ಅಟ್ವೇಕಡೆ ಬರಾಕಿಲ್ವಾ...."

"ನಡೀ- ಅದ್ಕೇನಂತೇ."

ತಿಮ್ಮನನ್ನು ಕಂಡು, ಹಿಡಿಸಲಾರದಷ್ಟು ಸಂತೋಷ ಲಕ್ಕಣ್ಣನಿಗೆ! ಲಕ್ಕಣ್ಣನನ್ನು ಕಂಡು ಹಿಡಿಸಲಾರದಷ್ಟು ಸಂತೋಷ ಗಂಗಮ್ಮನಿಗೆ. ಮಾತಿಗೆ ಮಾತು ಬಂದು ಲಕ್ಕಣ್ಣ "ಜೀವಣ ಅಂಗೇ ಮಾಡ್ತಿದ್ದಿಯಾ ಗಂಗಾ" ಎಂದನು.

"ಊ-ಇನ್ನೆಂಗೆ ಮಾಡ್ಲಿ-ಕೊಳ್ಳಿಗೆ ಇವ ಬೇರೆ ಗಂಟು ಬಿದ್ದವ್ನೆ."

"ಚಿಂತಿಲ್ಲ ಬುಡು, ನಮ್ಮ ತಿಮ್ಮ ಒಳ್ಳೇ ಸರದಾರ ಆಗ್ತಾನೆ. ಬಿಕ್ಸ ಬೇಡಿದ್ರೆ ಏನೂ ಆಗಾಕಿಲ್ಲ ಗಂಗೂ-ಗೆಯ್‌ಬೇಕು—ತಕೋ ಈ ಎಲ್ಡು ರೂಪಾಯಿ-ಒತ್ತಾರೆ ತೋಟಕ್ಕೆ ಓಗಿ ಸೊಪ್ಪುಸದೆ ತಂದು ಮಾರ್ಕಟ್ನಲ್ಲಿ ಮಾರು. ಎಂಟಾಣೆ ರೂಪಾಯಿ ಫಾಯ್ದೆ ಸಿಕ್ತದೆ" ಎಂದನು.

ಗಂಗಮ್ಮ ತುಸು ಯೋಚನೆ ಮಾಡಿ ಎಲ್ಲವನ್ನೂ ಲೆಕ್ಕ ಹಾಕಿಕೊಂಡಳು. ಕೊನೆಗೆ ನಗುನಗುತ್ತಾ "ಅಂಗೇ ಆಗಲಿ—ತಾ" ಎಂದು ಹೇಳಿ ರೂಪಾಯಿಗೆ ಕೈ ನೀಡಿದಳು. ಇಬ್ಬರ ಕೈಯೂ ತಾಕಿತು—ಕಣ್ಣುಗಳು ಕೂಡಿದವು—ನಕ್ಕು ಲಕ್ಕಣ್ಣ "ಅಟ್ಟೇಗೆ ಒತ್ತಾಯ್ತು" ಎಂದು ಎದ್ದನು.

* * * * * *

ಆರು, ಒಂಭತ್ತು ತಿಂಗಳು ಕಳೆಯುವುದರಲ್ಲಿ ಗಂಗಮ್ಮನ ಭಾಗ್ಯ ಬೆಳೆಯಿತು. ಕೈಯಲ್ಲಿ ನಾಲ್ಕು ಕಾಸು ಕೂಡಿತು. ಮೈಮೇಲೆ ಗಟ್ಟಿಯಾದ ಅರಿವೆ ಬಂದು ನೆಲಸಿತು. ಕಿವಿ ಮೂಗುಗಳನ್ನು ಒಂದೆರಡು ಆಭರಣಗಳೂ ಅಲಂಕರಿಸಿದವು. ಲಕ್ಕಣ್ಣನು "ಘೊತ್ತಾರಿ" ಹಟ್ಟಿ ಬಿಟ್ಟರೆ, 'ಯ್ಯಾಪಾರ'

ಮುಗಿಸಿಕೊಂಡು ನೇರವಾಗಿ ಗಂಗಮ್ಮನ ಜತೆಯಲ್ಲಿ ಬಂದುಬಿಡುತ್ತಿದ್ದನು. ಕೊನೆಗೆ ಎರಡು ಹಟ್ಟಿ ಯಾಕೆಂದು ಗಂಗಮ್ಮ ಅವನ ಮನೆಯಲ್ಲಿಯೇ ಇರಲು ಆರಂಭಿಸಿದಳು. ಮೊದಲಿನಿಂದಲೂ ಕುಡಿಯಾಗಿ ನಿಂತಿದ್ದ ಅನುರಾಗವು ಈಗ ಚಿಗುರಿ, ಪೂತು, ಫಲಿಸಲಾರಂಭಿಸಿತು. ಇಬ್ಬರ ದುಡಿಮೆಯೂ ಕೂಡಿ ವ್ಯಾಪಾರ ಚೆನ್ನಾಗಿ ಅಭಿವೃದ್ಧಿಯಾಗುತ್ತ ಬಂತು.

ಲಕ್ಕಣ್ಣನ ಮನೆಯು ಅಷ್ಟೇನು ದೊಡ್ಡದಾಗಿರದಿದ್ದರೂ ಗಂಗಮ್ಮನಿಗೂ ತಿಮ್ಮನಿಗೂ ಸಾಕಾಗುವಷ್ಟಾಗಿತ್ತು. ತನಗಿದ್ದ ಸಂಪಾದನೆಯಲ್ಲಿ ಆ ಮನೆಗೆ ಎರಡು ರೂಪಾಯಿ ಬಾಡಿಗೆಯನ್ನು ಲಕ್ಷ್ಯವಿಲ್ಲದೆ ಎಸೆದುಬಿಡುತ್ತಿದ್ದನು. ಲಕ್ಕಣ್ಣನ ಸುಖಸಂಸಾರ ನೋಡಿ ಅನೇಕರು ಅಸೂಯೆಪಡುವಂತಾಯಿತು.

ಕೆಲವು ವರ್ಷಗಳು ಹೀಗೇ ಸಾಗಿದವು. ಲಕ್ಕಣ್ಣನ ವ್ಯಾಪಾರ ಒಂದೇ ತೆರನೆ ಸಾಗುತ್ತಿರಲಿಲ್ಲ. ಒಂದು ವರ್ಷ ವಿಶೇಷ ಸಂಪಾದಿಸಲು ಹವಣಿಸಿ ತನ್ನಲ್ಲಿದ್ದ ಹಣವನ್ನೆಲ್ಲಾ ಕೂಡಿಸಿ 'ಮಾವಿನಹಣ್ಣಿನ' ಕಂಟ್ರಾಕ್ಟನ್ನು ಹಿಡಿದನು. ಮೊದಲು ಒಂದೆರಡು ದಿವಸ ವ್ಯಾಪಾರ ಚೆನ್ನಾಗಿ ಸಾಗಿ ದೊಡ್ಡ ದೊಡ್ಡ ಆಸೆಗಳನ್ನಂಕುರಗೊಳಿಸಿತು—ಒಂದು ವಾರ ಕಳೆಯಿತು—ಫಸಲಿಗೆಲ್ಲಾ ಹುಳು ಬಿದ್ದಿತೆಂಬ ಸುದ್ದಿ ಬಂತು. ಲಕ್ಕಣ್ಣ ಭೂಮಿಗೇ ಇಳಿದು ಹೋಗಿಬಿಟ್ಟನು. ನಾಲ್ಕಾರು ವರ್ಷಗಳಿಂದ ಕಾಸಿಗೆ ಕಾಸು ಗಂಟುಹಾಕಿ ತಾನೂ ಗಂಗಮ್ಮನೂ ಕೂಡುಹಾಕಿದ್ದ ಹಣವೆಲ್ಲಾ ಹೀಗೆ ಸೋಲಾಯಿತಲ್ಲಾ ಎಂಬ ವ್ಯಥೆ—ಜೊತೆಗೆ ಗಂಗಮ್ಮನ ಹಣವನ್ನು ತಾನು ಹಾಳು ಮಾಡಿದೆನಲ್ಲಾ ಎಂಬ ದುಃಖ ಎರಡೂ ಸೇರಿ ಲಕ್ಕಣ್ಣನನ್ನು ಕೊರೆಯಲಾರಂಭಿಸಿದವು.

ಗಂಗಮ್ಮನ ಸಮಾಧಾನವು ಯಾವ ಪ್ರಯೋಜನಕ್ಕೂ ಬಾರದಾಯಿತು. ಮುಖವೆತ್ತಿ ಅವಳೊಂದಿಗೆ ಮೊದಲಿನಂತೆ ಮಾತನಾಡುವುದಕ್ಕೇ ನಾಚಿ ಹೆದರುತ್ತಿದ್ದನು. ಕಳೆದುಕೊಂಡ ಹಣವನ್ನು ಹೇಗಾದರೂ ಸರಿ ಸಂಪಾದನೆ ಮಾಡಿಬಿಡಬೇಕೆಂದು ನಿಶ್ಚಯಿಸಿಕೊಂಡನು. ಆದರೆ ಮಾರ್ಗ ಯಾವದೆಂಬುದು ಗೊತ್ತಾಗದೆ ಹೆಚ್ಚಿನ ದುಃಖಕ್ಕೂ ಗೊಂದಲಕ್ಕೂ ಸಿಕ್ಕಿಬಿದ್ದನು.

೪

ಅಂದಿನ ಉತ್ಸಾಹವೂ, ಆನಂದವೂ ಗಂಗಮ್ಮನಿಗೆ ಅರ್ಥವಾಗಲಿಲ್ಲ. ತಾನು ಅಂಗಡಿಯಿಂದ ಬಂದು ಬುಟ್ಟಿ ಇಳಿಸುವ ಹೊತ್ತಿಗೇ ಲಕ್ಕಣ್ಣ ಮನೆ

ತಲುಪಿ ಒಳ್ಳೆಯ 'ಖುಷಾಮತ್ತಿ'ನಿಂದ ಬೀಡಿ ಹಚ್ಚಿ ಸೇದುತ್ತಾ 'ಹಾ ಪಿಯಾ, ಪ್ರಶಾಂತ ಉದಯಾ' ಹಾಡುತ್ತಾ ಮಲಗಿದ್ದುದನ್ನು ನೋಡಿ ನಸು ನಕ್ಕಳು. ಲಕ್ಕಣ್ಣನ ಈ ಖುಷಾಲು ಕಂಡು ಎಷ್ಟೋ ದಿವಸವಾಗಿತ್ತು. ತಿಮ್ಮನನ್ನು ಒಳಗೆ ಕರದೊಯ್ದು ಊಟಕ್ಕಿಕ್ಕಿ ಬಂದು ಲಕ್ಕಣ್ಣನ ಸಮೀಪದಲ್ಲಿ ಕುಳಿತಳು. ಲಕ್ಕಣ್ಣ ಎದ್ದು ಕುಳಿತು ಹಾಗೆಯೇ ಗಂಗೆಯನ್ನಪ್ಪಿ ತನ್ನ ತೊಡೆಯ ಮೇಲೆ ಮಲಗಿಸಿಕೊಂಡನು. ಗಂಗೆಗೆ ಆನಂದ, ಆಶ್ಚರ್ಯಗಳಿಂದ ಕೂಡಿದ ನಗೆಯು ಕಟ್ಟೆಯೊಡೆದು ಬಂತು. ನಗುತ್ತಾ ಲಕ್ಕಣ್ಣನನ್ನು ನೋಡುತ್ತಾ ಹಾಗೆಯೇ ಮಲಗಿದ್ದಳು. ಗಂಗಮ್ಮನ ತಡೆಯಿಲ್ಲದ ನಗೆಯನ್ನು ನೋಡಿ, ಅವಳ ಮುಖದ ಮೇಲೆ ಮೂಡುತ್ತಿದ್ದ ಬೆವರುಹನಿಗಳನ್ನು ತನ್ನ ರೇಶ್ಮೆ ವಸ್ತ್ರದಿಂದ ಒರಸುತ್ತಾ

"ಏನಾ ಗಂಗಾ! ನಗ್ತಾಸರ ಮಾಡ್ತೀ."

"ನಗ್ತಾಸರ ಏನ್ಬಂತು? ನಿನ್ನ ಕುಸಿ ನೋಡಿ ನಂಗೂ ಒಸಿ ಕುಸಿ ಯಾಯ್ತು. ಕುಸಿಯಾದರೆ ಜನ ನಗ್ತಾರೋ ಅಳ್ತಾರೋ ಹೇಳು ಲಕ್ಕಣ್ಣ."

"ಅಂಗಾದ್ರೆ ಸರಿ. ನೀ ನಕ್ರೇನೆ ಬಲು ಚಂದಾ ಗಂಗಾ. ನೀನು ಯಾವಾಗಲೂ ನಗನಗ್ತಾಲೆ ಇರು....ಊ...."

"ನಿನ್ನ ಸಂತೋಸ. ಅದ್ಸರಿ. ಇದೇನು ಇವತ್ತು ಇಂತಾ ಕುಸಿ? ಈ ಒಂದು ತಿಂಗಳಿಂದ ಎಲ್ಲಿ ಓಗಿತ್ತೋ ಈ ಕುಸಿಯೆಲ್ಲಾ?"

"ನೋಡು ಗಂಗಾ! ಈವತ್ತೊಳ್ಳೆ ಸುಗ್ಗಿ....ಅಬ್ಬ....ಬಾಗ್ಯ ಬಂದ್ಬುಟ್ಟೈತಿ ನಂಗೆ" ಎಂದು ಹೇಳಿ ಗಂಗೆಯ ಕೈಗೆ ಹತ್ತು ರೂಪಾಯಿನ ಐದು ನೋಟುಗಳನ್ನಿತ್ತನು. ಗಂಗಮ್ಮ ಚಕಿತಳಾಗಿ ಎದ್ದು ಕುಳಿತಳು. ಅಷ್ಟು ಹಣವನ್ನು ದಿಟ್ಟಿಸಿ ನೋಡುತ್ತಾ "ಎಂಗ್ಬಂತು ಲಕ್ಕಣ್ಣ? ಎಲ್ಲಾದರೂ ಲಪ್ಟಾಯಿಸಿ ಬುಟ್ಯೇನಾ?"

ಗಂಗೆಯ ಮೌಢ್ಯಕ್ಕೆ ನಕ್ಕು ಆಶ್ಚರ್ಯದಿಂದ ಕಳೆಗೊಂಡಿದ್ದ ಮುಖವನ್ನೊಮ್ಮೆ ಮುದ್ದಾಡಿದನು.

"ನೋಡು ಗಂಗಾ, ಸರಿಯಾಗಿ ಕೇಳು. ಇವತ್ತು ಯಾಪಾರ ಮಾಡ್ತಾ ಕುಂತಿದ್ದೆ. ಪಕ್ಕದಂಗಡಿ ಮುನಿಯಣ್ಣ ಸೂಟು ಪಾಟು ಹಾಕ್ಕೊಂಡಿದ್ದ ಸರ್ದಾರ್ನಂತ ಮನುಸನ್ನ ನನ್ನ ಹತ್ರ ಕಳುಹಿಸಿದ್ದ. ಅದೆಲ್ಲೋ ಆಪ್ರಿಕಾ ಅಂತೆ....ಅಲ್ಲಿ ಭಾರಿ ಭಾರಿ ನೌಕರಿ ಕಾಲಿ ಬಿದ್ದದಂತೆ....ಬರ್ತಿಯಾ ಅಂದ."

'ಜೀತಾ ಏನು ಅಂದೆ.'

'ತಿಂಗಳಿಗೆ ೪೫ ರೂಪಾಯಿ, ಚೆನ್ನಾಗಿ ದುಡಿದರೆ ಒಂದೆರಡು ತಿಂಗಳಾದ ಮೇಲೆ ೭೦ ರೂಪಾಯಿ ಕೊಡ್ತೀವಿ ಅಂದ.'

'ಆಫ್ರಿಕಾ ಎಲ್ಲಪ್ಪಾ?' ಅಂದೆ.

'ನಿಂಗ್ಯಾಕೆ ಸುಮ್ಕೆ ಬಾ. ಒಂದೆರಡು ವರ್ಸದಲ್ಲಿ ಮೂಟೆ ರೂಪಾಯಿ ಹೊತ್ಕೊಂಡು ಊರಿಗ್ಬಂದು ಅರಸುಮಗನಾಗಿ ಬಾಳೂವೆಂತೆ' ಎಂದು ಹೇಳಿ ೫೦ ರೂಪಾಯಿ ಕೊಟ್ಟ. "ನಾನು ಒಂದು ಕಾಗಜಕ್ಕೆ ಹೆಬ್ಬೆರಳ ಗುರ್ತು ಹಾಕಿದೆ. ಮುನಿಯಣ್ಣನೂ ನನ್ನ ಜತೆ ಬತ್ತಾನಂತೆ ಗಂಗಾ."

"ಎಷ್ಟು ವರ್ಸ ಲಕ್ಕಣ್ಣಾ."

"ಎಲ್ಡು ಮೂರು ವರ್ಸಾ....ಅಷ್ಟೇ."

ಗಂಗಮ್ಮನಿಗೆ ಮಾತು ಹೊರಡದಾಯಿತು. ಕಣ್ಣುಗಳಲ್ಲಿ ಧಾರೆಧಾರೆಯಾಗಿ ಪ್ರವಾಹವು ಹೊರಟು ನೋಟುಗಳನ್ನು ನೆನೆಯಿಸಲಾರಂಭಿಸಿತು. ಅದನ್ನು ಕೈಯಿಂದ ಜಾರಲು ಬಿಟ್ಟು ದೀನಳಾಗಿ ಲಕ್ಕಣ್ಣನನ್ನು ನೋಡಿ

"ಹೊರಡಲೇ ಬೇಕೇ ಲಕ್ಕಣ್ಣಾ."

"ರುಜು ಮಾಡ್ಬಿಟ್ಟವ್ನಲ್ಲಾ ಗಂಗಾ...."

ಲಕ್ಕಣ್ಣನ ಕುತ್ತಿಗೆಯನ್ನಪ್ಪಿ ಗೊಳೋ ಎಂದು ಅಳಲಾರಂಭಿಸಿದಳು. ಎದುರಿಗೆ ತಿಮ್ಮನು ಕೈಗೆ ನೀರು ಬೇಡುತ್ತಾ ನಿಂತುದೂ ಲಕ್ಷ್ಯಕ್ಕೆ ಬಾರದೆ ಹೋಯಿತು.

"ನಾನು ಬತ್ತೀನಿ. ನಡೀ ಓಗಾನ."

"ಅದಾಯ್ಕಿಲ್ಲ ಗಂಗಾ! ದೇಸಾಪಾಸ ನೋಡಿ ನಾನೆ ಕಾಗಜ ಬರಸ್ತೀನಿ. ಅನುಕೂಲವಿದ್ದರೆ ಬಂದುಬುಡೂವಂತೆ....ಇಲ್ದಿದ್ದರೆ ನಾನೇ ಬಂದ್ಬುಡ್ತೀನಿ."

"ಕಂಡಿತಾ ಕಾಗಜ ಬರಸ್ತೀಯಾ."

"ಹೂ....ನನ್ನ ಚಿನ್ನಾ."

ಗಂಗಮ್ಮನು ಲಕ್ಕಣ್ಣನನ್ನು ನೋಡುತ್ತಲೇ ಮಗನ ಕೈಗೆ ನೀರು ಹಾಕುವುದಕ್ಕೆ ಎದ್ದು ಹೋದಳು.

೫

ಗಂಗಮ್ಮನಿಗೆ ಬಾಳು-ಬದುಕಿನಲ್ಲಿ ಬೇಸರವಾಗುತ್ತಾ ಬಂತು. ಆಫ್ರಿಕಾ ದೇಶಕ್ಕೆ ಹೋಗಿ ಆರೇಳು ತಿಂಗಳಾಗಿದ್ದರೂ ಲಕ್ಕಣ್ಣನಿಂದ 'ಕಾಗಜಾ' ಬಂದಿರ

ಲಿಲ್ಲ. ಮುನಿಯಣ್ಣ ಮಾತ್ರ ತನ್ನ ತಮ್ಮನಿಗೆ ತಿಂಗಳು ತಿಂಗಳಿಗೆ 'ಕಾಗಜಾ' ಬರೆಸುತ್ತಿದ್ದನು. ಇದನ್ನು ನೋಡಿ ಗಂಗಮ್ಮನ ದುಃಖ ಇಮ್ಮಡಿಸಿತು. "ನನ್ನನ್ನು ಬಿಟ್ಟು ಹೋಗಬೇಕೆಂದು ಈ ರೀತಿ ಸುಳ್ಳು ಹೇಳಿದನೇ?" ಎಂದು ಕೊಳ್ಳುವಳು. ಮರುಕ್ಷಣವೇ ಲಕ್ಕಣ್ಣನ ಸರಳ ವರ್ತನವನ್ನು ನೆನೆದು "ಛಿ! ಛಿ!!" ಎಂದು ತನ್ನನ್ನೇ ಬಯ್ದುಕೊಳ್ಳುವಳು. ತಿಮ್ಮನನ್ನು ನೋಡುತ್ತಾ "ತಂದಿಟ್ಟಂಗವ್ನೆ ನಮ್ಮ ತಿಮ್ಮ....ತಿಮ್ಮನ್ನೋಡ್ಕೊಂಡು ದುಕ್ಕ ಮರೀತೀನಿ" ಎಂದು ಸಮಾಧಾನ ತಂದುಕೊಳ್ಳುವಳು.

ಗಂಗಮ್ಮನ ಬಾಳೆಲ್ಲಾ ಒಂದೇ ಗುರಿಯನ್ನು ಮುಂದಿಟ್ಟುಕೊಂಡಿತು. ತಿಮ್ಮನ ಭವಿಷ್ಯ. ಆ ಕಟ್ಟಡದ ರಚನೆಗೆ ತಾನು ಶಿಲ್ಪಿಯಾಗಿ ನಿಂತಳು. ತನ್ನ ಸಂಪಾದನೆ–ಸೇವೆ–ಸುಖದುಃಖ ಎಲ್ಲವನ್ನೂ ತಿಮ್ಮನಿಗಾಗಿ ಮೀಸಲು ಮಾಡಿಬಿಟ್ಟಳು. ತನ್ನ ಅಂಗಡಿಗೆ ವ್ಯಾಪಾರಕ್ಕೆ ಬರುವ ಶ್ರೀಮಂತರನ್ನು ನೋಡಿದಾಗಲೆಲ್ಲಾ "ಒಂದು ದಿವಸವಾದರೂ ತಿಮ್ಮ ಹೀಗೆ ಸುಖವಾಗಿದ್ದರೆ...." ಎಂದುಕೊಳ್ಳುವಳು.

ಗಂಗಮ್ಮನ ವ್ಯಾಪಾರ ಯಾವಾಗಲೂ ನಷ್ಟವನ್ನು ಮಡಿಲಿಗೆ ಕಟ್ಟದಿದ್ದರೂ ಅವಳ 'ಗಗನಗುರಿ'ಯನ್ನು ಸಾಧಿಸುವಂತಿರಲಿಲ್ಲ. ಇಂದು ಬಂದ ಲಾಭ ನಾಳಿನ 'ಕೊಳೆತ ತರಕಾರಿ'ಯೊಂದಿಗೆ ಕೊಚ್ಚಿಹೋಗುತ್ತಿತ್ತು. ಕಮ್ಮಿ ತೂಕವನ್ನಳೆಯುವುದು ಮಹಾಪಾಪವೆಂದು ಭಾವಿಸಿದ್ದ ಗಂಗಮ್ಮ ನಷ್ಟವನ್ನು ತೂಗಿಸಲು ಅದನ್ನು ಒಂದು ಸಾಧನವಾಗಿ ಧಾರಾಳವಾಗಿ ಉಪಯೋಗಿಸಿಕೊಳ್ಳುತ್ತ ಬಂದಳು. ಇದಕ್ಕಾಗಿ ಒಮ್ಮೊಮ್ಮೆ ವ್ಯಾಜ್ಯ ಹತ್ತಿಕೊಂಡರೆ ತನ್ನ ಮಿಂಚಿನ ಕಣ್ಣುಗಳನ್ನು ಕುಣಿಸಿ "ಏನ ಮಾಡಾನಾ ಬುದ್ಧಿ—ನಂಗೂ ಮಕ್ಕಳೂಮರೀ ಅವೆ" ಎಂದು ಗಿರಾಕಿಗಳ ಬಾಯಿ ಮುಚ್ಚಿಸುತ್ತಿದ್ದಳು. ಅನೇಕ ವೇಳೆ ತನ್ನ ವೃತ್ತಿಗಳ ಸ್ವರೂಪವನ್ನು ಜನದ ಬಿರುಸು ನೋಟದಿಂದ ಮುಚ್ಚಲು 'ತಾಯ್ತನ'ವನ್ನು ನಿಶ್ಶಂಕೆಯಿಂದ ಉಪಯೋಗಿಸಿಬಿಡುತ್ತಿದ್ದಳು.

ತಿಮ್ಮನಿಗೆ ವಯಸ್ಸಾಗುತ್ತಾ ಬಂತು. ಶಾಲೆಗೆ ತಪ್ಪದೆ ಹೋಗುತ್ತಿದ್ದನಾದರೂ ವಿದ್ಯೆಯ ಸೋಂಕು ಅಷ್ಟು ಹತ್ತಿದ ಹಾಗೆ ಕಾಣುತ್ತಿರಲಿಲ್ಲ. ಒಂದೊಂದು ದಿವಸ ತಿಮ್ಮ ಓದಿಕೊಳ್ಳುತ್ತಿದ್ದ ಪಾಟ ಗಂಗಮ್ಮನ ಕಿವಿಗೆ ಬಿದ್ದರಂತೂ ಅವಳ ಆನಂದಕ್ಕೆ ಪಾರವೇ ಇರಲಿಲ್ಲ. ತಿಮ್ಮ....ನನ್ನ ಮಗ....ನನ್ನ

ಲಕ್ಕಣ್ಣನ ಮಗ....ಪಂಡಿತನಾಗುತ್ತಿದ್ದಾನೆ....ಅವನಿಗೆ ಓದು ಬರ್ತಾವು ಬರತ್ತೆ ಎಂದು ಎಷ್ಟೋ ಸಲ ತನ್ನಲ್ಲಿಯೇ ಜಪಿಸಿಕೊಳ್ಳುವಳು. ಅದಕ್ಕೂ ತೃಪ್ತಿಯಾಗ ದಿದ್ದರೆ ಕಂಡಕಂಡವರಲ್ಲಿ ಹೇಳುವಳು. ತಿಮ್ಮನಿಗೆ ವಯಸ್ಸಾಗುತ್ತಾ ಆಗುತ್ತಾ ವಿದ್ಯೆಯ ಕಡೆ ಲಕ್ಷ್ಯ ಸ್ವಲ್ಪ ಕಡಿಮೆಯಾಗುತ್ತಲೇ ಬಂತು ಹೊಸಹೊಸ ಅಂಗಿ-ಟೋಪಿಗಳನ್ನು ಹಾಕಿಕೊಂಡು ಬರುವ ಹುಡುಗರು....ಜವಾನನನ್ನು ಹಿಂದೆ ಕರೆದುಕೊಂಡು ಬರುವ ಹುಡುಗರು....ಬುಟ್ಟಿಬುಟ್ಟಿ ತಿಂಡಿ ತರುವ ಹುಡುಗರು....ಮೋಟಾರು, ಕೋಚುಗಾಡಿಗಳಲ್ಲಿ ಠೀವಿಯಿಂದ ಬರುವ ಹುಡುಗ ರನ್ನು ನೋಡುತ್ತಾ ನೋಡುತ್ತಾ ಅಸಹನೆ-ಅತೃಪ್ತಿಗಳ ಕುಡಿಗಳು ಮೊಳೆಯ ಲಾರಂಭಿಸಿದವು. "ಮಖಮಲ್ ಅಂಗಿ ನನಗೇಕಿಲ್ಲ—ಮೋಟಾರುಬಂಡಿ ನನಗೇಕಿಲ್ಲ—ಬುಟ್ಟಿಬುಟ್ಟಿ ತಿಂಡಿ ನನಗೇಕಿಲ್ಲ—ಅರಮನೆಯಂತಹ ಮನೆ ನನೇಗೆಕಿಲ್ಲ" ಎಂಬಿವೇ ಪ್ರಶ್ನೆಗಳು ಅವನನ್ನು ಕಾಡಲಾರಂಭಿಸಿದವು. ಈ ಪ್ರಶ್ನೆಗಳ ವೇದನೆಯಲ್ಲಿ ಅನ್ನ ಬಟ್ಟೆಗಳು ಬೇಡವಾಗುತ್ತಿದ್ದವು....ಇನ್ನು ಪಾಠ ಬೇಕಾದೀತೇ?—

ತಿಮ್ಮಣ್ಣ ಸ್ಕೂಲು ಬಿಡುವುದೇ ಲೇಸೆಂದು ಅವನ ಉಪಾಧ್ಯಾಯರು ಎಷ್ಟೋ ಸಲ ಗಂಗಮ್ಮನ ಹತ್ತಿರ ಹೇಳಿದ್ದರು. ತಿಮ್ಮನೂ ಸ್ಕೂಲು ಬಿಡುವು ದಕ್ಕೆ ಸಿದ್ಧನಾಗಿದ್ದ. ಇವೆಲ್ಲವನ್ನೂ ನೋಡಿಕೊಂಡು ಗಂಗಮ್ಮ "ಸ್ಕೂಲಿಗೆ ಹೋಗುವುದು ಸಾಕು. ನಾಳೆಯಿಂದ ನನ್ನ ಯಾಪಾರಕ್ಕೆ ಸಾಯಮಾಡಿ ಕೊಂಡಿರು" ಎಂದು ಮಗನಿಗೆ ಹೇಳಿ ಅವನನ್ನು ಮನೆಯಲ್ಲಿಯೇ ಇಟ್ಟು ಕೊಂಡಳು.

೬

ಲಕ್ಕಣ್ಣನ ಹಾದಿ ಕಾದೂ ಕಾದೂ ಗಂಗಮ್ಮನಿಗೆ ಸಾಕಾಗುತ್ತಾ ಬಂತು. ಒಲೆ ಮೊರೆದರೆ—ಎಡಗಣ್ಣು ಹಾರಿದರೆ—ಕ್ಷೇಮಕಾರಿ ಕಂಡರೆ—ಹಾರವರು ಎದುರಿಗೆ ಬಂದರೆ—ಯಾವದೇ ಶಕುನವಾದರೂ "ಇವತ್ತು ಬಂದೇ ಬರ್ತಾನೆ" ಎಂದುಕೊಳ್ಳುವಳು. ರಾತ್ರಿ ಒಂಭತ್ತಾಗಲಿ ಹತ್ತಾಗಲಿ ಬಾಗಿಲು ಕಾಯುತ್ತಾ ಕುಳಿತುಕೊಳ್ಳುವಳು. ಹಗಲೆನ್ನದೆ ಇರುಳೆನ್ನದೆ ಮನೆಯ ಮುಂದೆ ಓಡಿ ಯಾಡುತ್ತಿದ್ದ ಚಿಗುರುಮೀಸೆಯ ತರುಣರನ್ನು ಕಡೆಗಣ್ಣಿಂದಲೂ ನೋಡಳು.

ಹೀಗೆಯೇ ನಾಲ್ಕು ವರ್ಷ ಕಳೆದಳು.

ತಿಮ್ಮನು ಹದಿನೈದನ್ನು ದಾಟಿ ಹದಿನಾರರ ಹೊಸಲ ಮೇಲೆ ನಿಂತನು. ನಾನಾಬಗೆಯ ಯೋಚನೆಗಳು ಗಂಗಮ್ಮನನ್ನು ಕಾಡಲಾರಂಭಿಸಿದವು. ಜೋಯಿಸರು ಬೇರೆ ಶಾಸ್ತ್ರ ನೋಡಿ "ಹದಿನಾಲ್ಕು ವರ್ಷ ಕಳೆದುಹೋಯಿತು- ಇನ್ನು ಲಕ್ಕಣ್ಣ ಬರುವ ಸಂಭವವಿಲ್ಲ" ಎಂದು ಖಂಡಿತವಾಗಿಯೂ ನುಡಿದು ಬಿಟ್ಟಿದ್ದರು.

"ಲಕ್ಕಣ್ಣ ಬರುವ ಸಂಭವವಿಲ್ಲ"ವೆಂಬುದನ್ನು ಜೋಯಿಸರ ಬಾಯಲ್ಲಿ ಕೇಳಿದಾರಭ್ಯ ಗಂಗಮ್ಮನ ಮನಸ್ಸಿನ ಮಾರ್ಗವು ಬದಲಾಯಿಸಿ ಹೋಯಿತು. ತನಗೆ ಮೋಸಮಾಡಿ ಹೋದ ಲಕ್ಕಣ್ಣನ ಕಪಟ ಪ್ರೇಮವನ್ನು ನೆನೆನೆನೆದು ಶಪಿಸಿದಳು—ಮರುಕ್ಷಣವೇ ಕಂಬನಿತುಂಬಿ—"ಅವನು ಬದುಕಿದ್ದರೆ ಇಂಗೆ ಮಾಡ್ತಿದ್ನೇ" ಎಂದು ನಡುಗುತ್ತ ಸಮಾಧಾನ ತಂದುಕೊಳ್ಳುವಳು. ತನ್ನ ತುಂಬಿದ ದೇಹದಲ್ಲಿ—ಎಳೆ ಪ್ರಾಯವನ್ನು ಮರೆಮಾಚಿ....ಮುಂದಕ್ಕೆ— ಲಕ್ಕಣ್ಣನು ಬರುವ ದಿವಸಕ್ಕೆ—ತಳ್ಳಿ ಇಟ್ಟುಕೊಂಡಿದ್ದ ದೇಹಕ್ಕೆ ಸಿಡಿಲು ಬಡಿದಂತಾಗಿತ್ತು. ಆದರೆ ಸಿಡಿಲಿನೊಂದಿಗೆ ಸೇರಿ ಬಂದಿದ್ದ ಮಿಂಚು ಚಬಕಿ ನಿಂದ ಸುಳಿದಾಡಿ ಅವಳ ದೇಹದ ಅಂಗಾಂಗಗಳನ್ನು, ರೋಮರೋಮಗಳನ್ನು, ರಕ್ತದ ಕಣಕಣಗಳನ್ನು ಕೆಣಕಿ ತನ್ನ ಶಕ್ತಿಯನ್ನು ಉಜ್ಜ್ವಲವಾಗಿ ತೋರ ಲಾರಂಭಿಸಿತ್ತು. ತಿಮ್ಮನನ್ನೊಮ್ಮೆ ದಿಟ್ಟಿಸಿ ನೋಡುವಳು—ಮರುಕ್ಷಣವೇ ತಲೆಬಾಗಿ ತನ್ನನ್ನೇ ನೋಡಿಕೊಳ್ಳುವಳು. ವಯಸ್ಸಿಗೆ ಮೀರಿದ ಮೈಕಟ್ಟಿ ನಿಂದ ಬಲಭೀಮನಂತೆ ನಿಂತಿದ್ದ ಮಗನನ್ನು ನೇವರಿಸಿ 'ನನ್ನದೆಂಬ' ಹೆಮ್ಮೆ ಯಿಂದ ಉಬ್ಬುವಳು. ಆಕ್ಷಣ ಲಕ್ಕಣ್ಣನ ಮೇಲಿದ್ದ ಆಗ್ರಹವೆಲ್ಲವೂ ಕರಗಿ ನೀರಾಗಿ ಆನಂದಾಶ್ರುಗಳಾಗಿ ಗಂಗಮ್ಮನ ಮಡಿಲನ್ನಲಂಕರಿಸುತ್ತಿದ್ದವು. ತನ್ನ ಜೀವನದಲ್ಲಿ ಹಿಂದೆಂದೂ ಬಾರದಿದ್ದ ಸಮಸ್ಯೆಯು ಒಮ್ಮೆಲೇ ಎದುರು ಬಂದು ನಿಂತುದನ್ನು ಕಂಡು ಗಂಗಮ್ಮ ಅವಾಕ್ಕಾದಳು. ಮನಸ್ಸಿನಲ್ಲಿ ಏಳುತ್ತಿದ್ದ ಭಾವನಾ ತರಂಗಗಳ ಆಂದೋಲನವನ್ನು ನೋಡುತ್ತಾ ತುಸ ಹೊತ್ತು ಸಮಸ್ಯೆ ಯನ್ನು ಮರೆಯಲೆತ್ನಿಸುವಳು. ಆದರದು ಚಿರಕಾಲ ಸಾಧ್ಯವಿಲ್ಲವೆಂಬುದ ನ್ನರಿತು ಸುಮ್ಮನಾಗುವಳು.

* * * * * *

ಮನೆಯಲ್ಲಿ ಇದ್ದು ಇದ್ದು ತಿಮ್ಮನಿಗೂ ಸಾಕಾಗುತ್ತಾ ಬಂತು. ತಿಮ್ಮ ನಿಗೊಂದು ದಾರಿ ಮಾಡಬೇಕೆಂದು ಗಂಗಮ್ಮನ ಮನಸ್ಸಿನಲ್ಲಿಯೂ ಬಹಳವಾ

ಗಿತ್ತು. ತನ್ನಲ್ಲಿ ತರಕಾರಿ ವ್ಯಾಪಾರಕ್ಕೆ ಬರುತ್ತಿದ್ದ 'ಜರೀ ರುಮಾಲಿ'ನವರನ್ನೆಲ್ಲಾ "ನಮ್ಮುಡುಗನಿಗೆ ಒಂದು ಚಾಕರಿ ಮಾಡ್ಸಿಕೊಡ್ಬೇಕು ಬುದ್ಧಿ" ಎಂದು ಮೊರೆಯಿಡುತ್ತಾ ಬಂದಳು. ಮೊರೆಯು ಸಾಗಿತೇ ವಿನಾ ಸಾಫಲ್ಯ ಮಾತ್ರ ಕಂಡುಬರಲಿಲ್ಲ. ಒಂದು ದಿವಸ ತಾವೇ ವ್ಯಾಪಾರಕ್ಕೆ ಬಂದ ಅಸಿಸ್ಟೆಂಟ್ ಕಮಿಷನರ್ ವೆಂಕಟರಾಯರ ಪತ್ನಿ ಪದ್ಮಾವತಿಯವರ ಕಿವಿಗೂ ಮೊರೆ ಮುಟ್ಟಿತು. ಬೆಳಿಗ್ಗೆ ಮನೆಯ ಹತ್ತಿರ ಬರಹೇಳಿ ಗಂಗಮ್ಮನ ಮುಂದೆ ಆಸೆಯ ಬೀಸಣಿಗೆಯನ್ನು ಬೀಸಿಹೋಗಿದ್ದರು. ಮಾರನೆಯ ದಿವಸ ತಿಮ್ಮನು 'ಅಮ್ಮಾವರ' ಆಜ್ಞೆಯಂತೆ ಹೋಗಿ 'ಚಾಕರಿ'ಯನ್ನು ಸಂಪಾದನೆ ಮಾಡಿಕೊಂಡೇ ಬಂದಿದ್ದನು. ಕೆಲಸವೂ ಕಠಿಣವಾಗಿರಲಿಲ್ಲ. ರಾಯರ ಮೋಟಾರನ್ನು ತೊಳೆಯುವುದು—ಗಿಡಗಳಿಗೆ ನೀರೆರೆಯುವುದು—ಮಿಕ್ಕ ಹೊತ್ತಿನಲ್ಲಿ ಮಕ್ಕಳನ್ನೆತ್ತಿಕೊಂಡಿರುವುದು. ಕೆಲಸ ಮನೆಯದಾದರೂ ಆಫೀಸಿನ ಹತ್ತು ರೂಪಾಯಿನ ಸಂಬಳವೂ, ಮಾಮೂಲಿನ ಬಟ್ಟೆಬರೆಗಳೂ ದೊರೆತವು. ಗಂಗಮ್ಮನಂತೂ ಮಗನ ಅದೃಷ್ಟವನ್ನು ಕಂಡು ಹಿಗ್ಗಿಹೋದಳು. ಅವನ ವೈಭವವನ್ನು ಹಾಡಿಹಾಡಿ ಹೊಗಳಲು ಒಂದೇ ಬಾಯಿ ಇದೆಯಲ್ಲಾ ಎಂದು ಮರುಗಿಯೂ ಮರುಗಿದಳು.

೭

ತಿಮ್ಮನನ್ನಂತೂ ಹಿಡಿಯುವವರೇ ಇಲ್ಲ. ಒಳ್ಳೆಯ ಪುಷ್ಟಿಯಾದ ಸಂಬಳ, ಜತೆಗೆ ದೊಡ್ಡ ಅಧಿಕಾರಿಗಳ ಮನೆಯ ಕೆಲಸ. ಒಂದೊಂದು ದಿವಸ ಧಣಿಗಳ ಮನೆಯಲ್ಲಿಯೇ ಊಟವೂ ಕಳೆದುಹೋಗುತ್ತಿತ್ತು. ಡ್ರೈವರಿನ ಸ್ನೇಹ ಬೆಳೆಸಿ ತಿಮ್ಮ ಆಗಾಗ್ಗೆ ಮೋಟಾರಿನ ಕೆಲಸವನ್ನು ಸ್ವಲ್ಪಸ್ವಲ್ಪವಾಗಿ ಕಲಿಯುತ್ತ ಬಂದನು. ಒಳ್ಳೆ ಸುಟಿಯಾದ ಹುಡುಗನೆಂದು 'ಅಮ್ಮಾವರು' ಮನೆಯ ಮಗುವಿನ ಹಾಗೆಯೇ ತಿಮ್ಮನನ್ನು ಕಾಣುತ್ತ ಬಂದರು. ಕೆಲಸವೂ ಹಗುರವಾಗಿದ್ದುದರಿಂದ ತಿಮ್ಮ ಸಂತೋಷವಾಗಿ ಕಾಲಕಳೆಯುತ್ತ ಬಂದನು. ಬೆಳಿಗ್ಗೆ ಎದ್ದು ರಾಯರ ಮನೆಗೆ ಬಂದರೆ ಒಂದೊಂದು ದಿವಸ ಮನೆಗೆ ಊಟಕ್ಕೆ ಹೋದರೆ ಹೋದ—ಇಲ್ಲವಾದರೆ ರಾಯರ ಮನೆಯಲ್ಲೇ ಪುಷ್ಕಳವಾಗಿ ಭುಜಿಸಿ ಸಂಜೆಗೆ ಒಂದೇ ಸಲ ಮನೆಗೆ ಹೋಗುತ್ತಿದ್ದನು. ಮೊದಮೊದಲು ಗಂಗಮ್ಮನು ಬಲು ಆತಂಕಪಟ್ಟುಕೊಳ್ಳುತಿದ್ದಳು; ಒಂದೆರಡು ಸಲ 'ಅಮ್ಮಾವರನ್ನು'

ಕಂಡು ತಿಮ್ಮನ ಮೇಲೆ ಚಾಡಿ ಹೇಳಿ, ಅವರಿಂದ ಸಮಾಧಾನ ಪಡೆದು ಬಂದಳು. ಬರಬರುತ್ತ ತಿಮ್ಮನ ಬಗ್ಗೆ ಯಾವ ಆತಂಕವೂ ಇಲ್ಲವಾಯಿತು. ತನ್ನ ಮಗ 'ರಾಯರ ಮನೆಯ ಮಗ'ನಾಗಿರುವುದನ್ನು ಕಂಡ ಮೇಲಂತೂ ಗಂಗಮ್ಮನ ತಲೆ ಆಕಾಶದಲ್ಲಿಯೇ ಹಾರತೊಡಗಿತು. ಒಂದೊಂದು ದಿವಸ ಡ್ರೈವರಿನ ಕೃಪೆಯಿಂದ ತಿಮ್ಮ ತನ್ನ ಹಟ್ಟಿಯ ತನಕ ಮೋಟಾರನ್ನು ಬಿಡಿಸಿ ಕೊಂಡು ಬಂದು ಠೀವಿಯಿಂದ ಮನೆಯ ಒಳಕ್ಕೆ ಬರುತ್ತಿದ್ದನು. ಗಂಗಮ್ಮನ ಮಗ 'ಅರಸುಮಗ'ನಂತೆ ಮೋಟಾರಿನಲ್ಲೇ ಮನೆಗೆ ಬರುವುದನ್ನು ಕಂಡ ಮೇಲಂತೂ ಅವಳನ್ನು ಮಾತನಾಡಿಸಲು ಇತರರು ಕೊಂಚ ಹೆದರಹತ್ತಿದರು.

ಮಗನ ಅಭ್ಯುದಯ ಗಂಗಮ್ಮನಿಗೆ ಎಷ್ಟು ಸಮಾಧಾನವನ್ನು ತಂದಿತೋ ಅಷ್ಟೇ ದುಃಖಕ್ಕೂ ಕಾರಣವಾಗುತ್ತಾ ಬಂತು. ಬೆಳಿಗ್ಗಿನಿಂದ ಸಂಜೆಯ ವರೆಗೆ ದುಡಿದು ಬಂದರೆ "ಬಂದೆಯಾ—ದಣಿದೆಯಾ" ಎನ್ನುವರಿಲ್ಲವಾಯಿತು. ಒಂದೊಂದು ದಿವಸ ತಿಮ್ಮನು ಮನೆಗೇ ಬರುತ್ತಿರಲಿಲ್ಲ. ಆ ದಿವಸಗಳಂತೂ ಗಂಗಮ್ಮನ ಜೀವವನ್ನು ಹಿಂಡಿಬಿಡುತ್ತಿದ್ದವು. ಗಂಗಮ್ಮನಿಗೆ ಹೊತ್ತು ಗಳೆಯುವುದೇ ಒಂದು ದೊಡ್ಡ ಸಮಸ್ಯೆಯಾಗುತ್ತಾ ಬಂದಿತು....ಜೊತೆಗೆ ಮನಸ್ಸಿನಲ್ಲಿ ಏನುಏನೋ ಆಸೆಗಳು....ವಿಲೋಭನೆಗಳು.

ಒಂದು ದಿವಸ ಗಂಗಮ್ಮ ತನ್ನ ಸಂಪಾದನೆಯನ್ನೆಲ್ಲಾ ಎಣಿಸುತ್ತ ಕುಳಿತಳು. ಅಷ್ಟು ವರ್ಷಗಳಿಂದ ಒಂದೇ ಸವನೆ ದುಡಿದಿದ್ದರೂ ೨೦೦-೩೦೦ ರೂಪಾಯಿಗಳಿಗಿಂತಲೂ ಹೆಚ್ಚಾಗಿ ಕೂಡಿಡಲು ಸಾಧ್ಯವಾಗಿರಲಿಲ್ಲ. ತಿಮ್ಮನು ರಾಯರ ಮನೆಯ ಕೆಲಸಕ್ಕೆ ಸೇರಿದ ಮೇಲಂತೂ ಅವನ ಸಂಪಾದನೆಯ ಎಂಟು ರೂಪಾಯಿಯಲ್ಲದೆ ತನ್ನ ಸಂಪಾದನೆಯ ಏಳೆಂಟು ರೂಪಾಯಿ ಗಳಾದರೂ ಅವನ "ಜರ್ಬುದಿರಸು"ಗಳಿಗಾಗಿ ಖರ್ಚಾಗಿ ಹೋಗುತ್ತಿತ್ತು. ಹೀಗಾಗಿ ಮುಂದೆ ತಾನು ಗಳಿಸಿ ಮಗನಿಗೆ ಆಸ್ತಿಮಾಡಿ, ಅವನಿಗೆ ಮದುವೆ ಮಾಡಿ ಮನೆಯನ್ನು ನಿಲ್ಲಿಸುತ್ತೇನೆಂಬ ಆಸೆಯು ಗಂಗಮ್ಮನಿಗೆ ಕಡಿಮೆ ಯಾಗುತ್ತ ಬಂದಿತು!

ದುಡ್ಡು ಬೇಕು!—ಏನುಮಾಡುವುದು!—ಜಗತ್ತಿನ ಪ್ರಶ್ನೆಯೂ ಇದೇ ಆಗಿರುವಾಗ ಗಂಗಮ್ಮನ ಪ್ರಶ್ನೆಗೆ ಏನು ಮಹತ್ವವಿದ್ದೀತು? ಆದರೆ ಜಗತ್ತಿಗೆ ತನ್ನ ಪ್ರಶ್ನೆ—ತನ್ನ ಬಾಳುವೆ—ತನ್ನ ಭವಿತವ್ಯ ಎಷ್ಟು ಮುಖ್ಯವೋ ಗಂಗಮ್ಮನಿಗೆ

ಅವಳ ಪ್ರಶ್ನೆ—ತಿಮ್ಮನ ಬಾಳುವೆ—ಅವನ ಭವಿತವ್ಯ ಅಷ್ಟೇ ಮುಖ್ಯವಾಗಿತ್ತು. ತಿಮ್ಮನಿಂದ ಅವಳಿಗೆ ಜಗತ್ತು ಬೇಕು—ತಿಮ್ಮನೇ ಅವಳ ಜಗತ್ತು—ಮಿಕ್ಕು ವೆಲ್ಲವನ್ನೂ ಅವಳ ಕೊಳೆತ ತರಕಾರಿಗಿಂತಲೂ ಕಡೆಯೆಂದು ಭಾವಿಸಿದ್ದಳು.

* * * * * *

ಗಂಗಮ್ಮನ ಮನಸ್ಸು ಜೂಜಿನ ಕುದುರೆಯಂತೆ ಓಡಲಾರಂಭಿಸಿತು. ಲಕ್ಕಣ್ಣನು ಮೋಸಮಾಡಿ ಓಡಿಹೋದಾರಭ್ಯ ತನ್ನ ಜೀವನದ ನೀತಿಗುದುರೆಯ ಲಗಾಮಿನ ಬಿಗಿಯನ್ನು ಸ್ವಲ್ಪ ಕಡಿಮೆಮಾಡಿದ್ದಳು. ವಯಸ್ಸಿಗೆ ಬಂದು ಕನಸಿನ ಸುಖದ ಹಣ್ಣು ಕೈಗೆ ಸಿಕ್ಕಿತೆಂದು ಅಂದುಕೊಳ್ಳುವಷ್ಟರಲ್ಲಿ ಅದು ಕನಸೆಂಬ ಸ್ಮೃತಿಯು ಹೊಳೆದುಬಿಟ್ಟಿತ್ತು. ಇತ್ತ ಜೀವನದ ಸಣ್ಣದಾದರೂ ಸತ್ಯವಾದ ಸುಖವಿಲ್ಲ—ಅತ್ತ ಕನಸಿನ ಅಸತ್ಯವಾದರೂ ದೊಡ್ಡದಾದ ಸುಖವಿಲ್ಲ. ಈ ಕೊರಗಿನಿಂದ ಕೆಲವು ದಿವಸ ನವೆದು ಕೊನೆಗೆ ತಿಮ್ಮನು ಬೆಳೆದು ಮುಂದಕ್ಕೆ ಬರುವ ವರೆಗೂ ತಾನು ಚೆನ್ನಾಗಿರಬೇಕೆಂದು—ಸಂತೋಷವಾಗಿರ ಬೇಕೆಂದು—ನಿಶ್ಚಯಿಸಿಕೊಂಡು ಅದೇ ಬಾಳುವೆಯನ್ನು ಗೋಪ್ಯವಾಗಿ ನಡೆಸುತ್ತಿದ್ದಳು.

ಈಗ ಆ ಬಾಳುವೆಯು ನೀಡುತ್ತಿದ್ದ ಬೇರೊಂದು ಆಸೆಯು ಗಂಗಮ್ಮನ ಮುಂದೆ ಸುಳಿಯಲಾರಂಭಿಸಿತು. “ಒಬ್ಬ ಹೆಂಗಸಿಗೆ ಒಬ್ಬನೇ ಗಂಡಸಾಗಿರುವ ತನಕ ಸರಿಹೋಯಿತು—ಈಗಾಗಲೇ ನಾಲ್ಕಾರು ಜನರಾಯಿತು—ಇನ್ನು ಹತ್ತಾರು ಜನರಾದರೇನು?” ಎಂಬ ತರ್ಕಸರಣಿಯನ್ನು ಗಂಗಮ್ಮ ಹಿಡಿದಳು. ಆದರೆ ಈ ಬಲಿದಾನಕ್ಕೆ ಒಂದೇ ಸಮಾಧಾನ. ತನ್ನ ಸಂಪಾದನೆಯ ಸದುಪಯೋಗ—ತಿಮ್ಮನ ಸುಖವಾದ ಭವಿಷ್ಯ. ಆ ಚಿತ್ರವನ್ನು ನೆನೆಯುತ್ತಾ ಗಂಗಮ್ಮನ ಎದೆಯ ಮೇಲಣ ಸೆರಗು ಆನಂದಾಶ್ರುಗಳಿಂದ ತೋಯ್ದು ಹೋಯಿತು.

೮

ತಾಯಿಯೇ ದೇವರೆಂದು ಹೇಳುವ ಜ್ಞಾನಿಗಳು ಆ ತತ್ತ್ವವನ್ನು ಅನು ಸರಿಸುತ್ತಾರೆಯೋ ಇಲ್ಲವೋ ತಿಮ್ಮನಂತೂ ಬೇರೆ ದೇವರಿದೆಯೆಂದು ನಂಬಲೂ ಸಮ್ಮತಿಸುತ್ತಿರಲಿಲ್ಲ. ಒಂದೊಂದು ಸಲ ಮಾತು ಬಂದಾಗ ತನ್ನ ‘ನ್ಯಾಸ್ತ’ ರೊಂದಿಗೆ ತನ್ನ ತಾಯಿಯು ಪಟ್ಟಶ್ರಮ, ತನ್ನನ್ನು ಬೆಳೆಸಿದ ರೀತಿಗಳನ್ನು

ಬಣ್ಣಿಸಿ ಕಣ್ಣೀರಿಡುವನು. ಅಂತಹ ತಾಯಿಗೆ ತಾನೇನು ಪ್ರತ್ಯುಪಕಾರ ಮಾಡಬಲ್ಲೆ ಎಂದು ಆವನು ಹೇಳುವಾಗಂತೂ ನ್ಯಾಸ್ತರೆಲ್ಲರ ಕಣ್ಣುಗಳಲ್ಲಿಯೂ ನೀರೂರುತ್ತಿದ್ದಿತು. ಆದರವರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಹುಸಿನಗೆಯನ್ನು ಧರಿಸುತ್ತಿದ್ದುದರ ಮರ್ಮ ಅವನಿಗೆ ಅರ್ಥವಾಗುತ್ತಿರಲಿಲ್ಲ. ಕೇಳಿದರೆ "ಬಿಡು ತಿಮ್ಮಣ್ಣ ಏನು ದೊಡ್ಡ ವಿಸಾರಾ—" ಎಂದು ಮಾತನ್ನು ಹಾರಿಸಿಬಿಡುತ್ತಿದ್ದರು. ಮೂರು ನಾಲ್ಕು ಬಾರಿ ಹೀಗೆ ಆದದ್ದು ತಿಮ್ಮನನ್ನು ಕೊಂಚ ವಿಚಾರಪರವಶನನ್ನಾಗಿ ಮಾಡಿತು. "ಅಮ್ಮನನ್ನೇ ಕೇಳಲೇ?" ಅಂದುಕೊಳ್ಳುವನು. "ನಾನು ಕೇಳಿ ತಿಳಿದುಕೊಳ್ಳಬೇಕಾದ್ದೇನಿದೆ? ನನಗೆ ಹೇಳುವುದಿದ್ದರೆ ಅವಳೇ ಹೇಳುತ್ತಿದ್ದಳು" ಎಂದು ಸಮಾಧಾನಪಟ್ಟು ಕೊಳ್ಳುವನು.

ಆದರೆ ಬಹಳ ದಿವಸಗಳಿಂದ ಒಂದು ದುಃಖವು ತಿಮ್ಮನ ಮನಸ್ಸಿನಲ್ಲಿ ಮೊರೆಯುತ್ತಲೇ ಇರುತ್ತಿತ್ತು. ರಾಯರ ಮಕ್ಕಳನ್ನು ತಾನು ಆಡಿಸುತ್ತಿದ್ದಾಗ ಅತ್ತ ರಾಯರು ಸುಳಿದರೆಂದರೆ ಅವು "ಅಪ್ಪಾ! ಅಪ್ಪಾ!!" ಎಂದು ಕೂಗಿ ಕೊಂಡು ಹೋಗಿ ತಂದೆಯ "ಮುದ್ದಿನ ಸೇವೆ"ಯನ್ನು ಪಡೆದು ಬರುತ್ತಿದ್ದು ದನ್ನು ನೆನೆದು ಚಿಂತಾಕ್ರಾಂತನಾಗುತ್ತಿದ್ದನು. "ನನ್ನ ಜೀವನದಲ್ಲಿ ಅಂತಹ ಸೌಭಾಗ್ಯ ಒಂದು ದಿವಸವೂ ಬರಲಿಲ್ಲವಲ್ಲಾ" ಎಂದಂದುಕೊಳ್ಳುವನು. "ತಂದೆಯು—ಬಹಳ ದೂರ ದೇಶಕ್ಕೆ—ಸಮುದ್ರದ ಆಚೆ—ಹೋಗಿರುವನಂತೆ! ಬಹಳ ದುಡ್ಡು ಮಾಡಿಕೊಂಡು ಬರುವನಂತೆ!"—"ಬರುವನೇ, ನಿಜವಾಗಿಯೂ ಬರುವನೇ?" ಯಾರಿಂದಲೂ ಈ ಪ್ರಶ್ನೆಗೆ ಉತ್ತರ ಸಿಕ್ಕುವುದಿಲ್ಲವೆಂಬುದನ್ನು ನೆನೆದು ನಿರಾಶ್ರಿತನಾಗಿ ಕುಸಿದು ಬಿದ್ದನು.

ಆ ದಿವಸ ಮನೆಗೆ ಬೇಗ ಬಂದವನು ಇದನ್ನೇ ಕುರಿತು ಚಿಂತಿಸಲಾರಂಭಿ ಸಿದನು. ಶೀತದ ಬಾಧೆಯಿಂದ ಮೂಗು ಒಂದೇ ಸವನೆ ಹಿಂಸಿಸುತ್ತಿತ್ತು. ಅದರ ಹಿಂಸೆಗಿಂತಲೂ ಅಧಿಕವಾಗಿ ಮನಸ್ಸಿನ ಈ ಬಾಧೆ. ಹಾಸಿಗೆ ಹಾಸಿ ಮಲಗಿಬಿಟ್ಟನು. ತಣ್ಣನೆಯ ಗಾಳಿಯ "ಸುಯ್" ಶಬ್ದವು ಅವನ ಮನಸ್ಸಿನ ಮೇಲೆ ಕುಟುಕಿದಂತಾಗುತ್ತಿದ್ದಿತು. ಅದನ್ನು ಸಹಿಸಲಾರದೆ ಒಳಗಡೆಯಿದ್ದ ಅಡಿಗೆಯ ಮನೆಗೆ ಹೋಗಿ ಬೆಚ್ಚಗೆ ಮುಸುಕಿಟ್ಟು ಮಲಗಿದನು. ಶೀತದ ಬಾಧೆಗೆ ತಲೆಯೂ ನೋಯಲಾರಂಭಿಸಿತ್ತು. ಅದರ ಜೊತೆಗೆ ಮೈಯೂ

ತುಸು ಬೆಚ್ಚಗಾಗಿತ್ತು. ಅನತಿದೂರದಲ್ಲಿ ಮೊರೆಯುತ್ತಿದ್ದ ಚರಂಡಿಯ ನೀರಿನ ಶಬ್ದ, ಅರ್ಧ ಅರ್ಧ ಘಂಟೆಗೆ ಜೀವನದ ಸತತ ಪ್ರವಾಸವನ್ನು ಸೂಚಿಸು ವಂತೆ ಬಾರಿಸುತ್ತಿದ್ದ ಘಂಟೆಯ ನಿನಾದವನ್ನು ಆಲಿಸುತ್ತಾ—"ಅಮ್ಮ-ಇನ್ನೂ ಬರಲಿಲ್ಲವೇ" ಎಂದು ಯೋಚಿಸುತ್ತ ಮಲಗಿದ್ದನು.

* * * * * *

ಒಂಭತ್ತು ಘಂಟೆ ಹೊಡೆದು ಸ್ವಲ್ಪ ಹೊತ್ತಾಗಿತ್ತು. ಜ್ವರವು ಚೆನ್ನಾಗಿಯೇ ಏರಿತ್ತು. ಅಶಾಂತಿಯಿಂದ ತಿಮ್ಮನು ಚಕ್ರಬಾಣದಂತೆ ಹಾಸಿಗೆಯನ್ನು ಸುತ್ತುತ್ತಿದ್ದನು. ಜ್ವರದ ತಾಪದಿಂದ ಕಣ್ಣು ಅರೆಮುಚ್ಚಿ ಮಂಪರುಗೊಂಡಿತ್ತು. ಆಗ ಯಾರೋ ಬಾಗಿಲು ತೆಗೆದು ಒಳಗೆ ಬಂದಂತಾಯಿತು. ಕಡ್ಡಿ ಗೀರಿ ಸೀಮೆಯೆಣ್ಣೆಯ ಬುಡ್ಡಿ ಹಚ್ಚಿ "ಬನ್ನಿ ಬುದ್ಧಿ" ಎಂದಂದದ್ದು ಕೇಳಿಸಿತು. ಗುರುತಾದ ಧ್ವನಿ—ಆಲಿಸುತ್ತಾ ಹಾಗೆಯೇ ಮಲಗಿದನು.

"ಏನು ಹೇಳಿ ಸಮಾಚಾರ"—ಗುರುತಾದ ಧ್ವನಿಯಾಗಿತ್ತು.

"ನೀನೇ ಹೇಳು." ಹೊಸ ಧ್ವನಿ! ಎಂದೂ ಕೇಳಿದ ನೆನಪು ಬರಲಿಲ್ಲ.

"ಹಾ! ಹಾ! ಅಲ್ಲೇ ನಿಲ್ಲಿ! ಮೊದಲು ಮಾತಾಗಲಿ."

"ಮಾತೇನು! ನೀನೇ ಹೇಳು."

"ಐದು ರೂಪಾಯಿ ಕೊಡಬೇಕು."

"ಅದೆಲ್ಲಾ ಆಗುವುದಿಲ್ಲಾ! ಹೀಗೇಂತ ಅಲ್ಲೇ ಹೇಳಿದ್ದರೆ ಮಾರ್ಕೆಟ್ಟನಿಂದ ನಿನ್ನ ಜೊತೆ ಬರುವ ಕಷ್ಟವೂ ತಪ್ಪುತ್ತಿತ್ತು—ಹೊರಡಲೋ?"

"ನೀವೇ ಹೀಗೆಂದ ಮೇಲೆ ಹೇಗೆ! ಹೋಗಲಿ ನಾಲ್ಕು ರೂಪಾಯಿ ಮಾಡಿಕೊಳ್ಳಿ."

"ಅದೆಲ್ಲಾ ಆಗುವುದಿಲ್ಲ....ಮೂರು ರೂಪಾಯಿ...."

ತಿಮ್ಮನಿಗೆ ಜ್ವರ ಹೆಚ್ಚುತ್ತಿತ್ತು. ಕಣ್ಣುಗಳಲ್ಲಿ ಒಂದೇ ಸಮನೆ ನೀರು ಸುರಿಯಲಾರಂಭಿಸಿತು.

ಮತ್ತೆ ಮಾತು ಕೇಳಬಂತು.

"ಯಾರೂ ಬರುವುದಿಲ್ಲವಲ್ಲಾ?"

"ಯಾರೂ ಇಲ್ಲ....ನಿಮಗೇಕೆ ಭಯ?"

ಸ್ವಲ್ಪ ಹೊತ್ತು ನಿಶ್ಶಬ್ದ. ಒಂದೇ ಸಮನೆ ಸುತ್ತುತ್ತಿದ್ದ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಹಾಸಿಗೆಯ ಮೇಲೆ ಕುಳಿತನು. ಕಣ್ಣಮುಂದೆ ಘೋರ ಚಿತ್ರಗಳು ಕಾಣಿಸಲಾರಂಭಿಸಿದವು. ನಕ್ಷತ್ರಗಳು, ಚಂದ್ರ, ಸೂರ್ಯ ರೆಲ್ಲರೂ ಆಕಾಶದಿಂದ ಕಳಚಿ ಬಿದ್ದಂತಾಯಿತು! ಅನಂತರ ಆಕಾಶವೇ ಕಳಚಿ ಬಿದ್ದಿತು. ಭೂವ್ಯಾಕಾಶಗಳ ಸ್ಪರ್ಶದಿಂದ ದೊಡ್ಡ ಕಿಚ್ಚುದಿಸಿ ಜಗತ್ತನ್ನೇ ದಹಿಸಲಾರಂಭಿಸಿತು—ಅದರ ಮೇಲೆ ತಾನು ಕುಳಿತು ಕಿಲಕಿಲನೆ ನಗುತ್ತಿರು ವಂತೆ ಕಂಡನು. ಒಮ್ಮೆಲೇ ಚೀರುವಂತಾಯಿತು. ಗಂಟಲನ್ನು ಬಿಗಿಹಿಡಿದು ಹಾಗೆಯೇ ಕುಳಿತನು.

ಮತ್ತೆ ಮಾತು ಕೇಳಬಂತು.

"ತಿರುಗಿ ಯಾವಾಗ ಬರುವಿರಿ?"

"ನೀನು ಯಾವಾಗ ಬಾ ಎನ್ನುವೆ ಆವಾಗ."

"ನಾಳೆ."

"ಹಾಗೆಯೇ ಆಗಲಿ."

"ಖಂಡಿತ ಬರಬೇಕು. ತಪ್ಪಕೂಡದು."

"ಇಲ್ಲ........"

ಬಾಗಿಲು ಹಾಕಿದ ಶಬ್ದ ಕೇಳಬಂತು. ತಿಮ್ಮನು ಮೆಲ್ಲನೆ ಚೇತರಿಸಿ ಕೊಂಡು ಎದ್ದು ಬಾಗಿಲ ಬಳಿ ಬಂದನು. ತನ್ನ ತಾಯಿ ಬುಡ್ಡಿಯನ್ನು ಹಿಡಿದು ಒಳಗೆ ಬರುವುದರಲ್ಲಿದ್ದಳು. ಜ್ವರದ ತಾಪದಿಂದ ರಕ್ತವರ್ಣಗೊಂಡಿದ್ದ ಕಣ್ಣುಗಳನ್ನರಳಿಸಿ ಒಮ್ಮೆ ತಾಯಿಯನ್ನು ನೋಡಿದನು.

ಮಗನನ್ನು ನೋಡಿದೊಡನೆಯೇ ತನ್ನ ಕಣ್ಣನ್ನು ತಾನೇ ನಂಬದಾದಳು. "ಅಪ್ಪಯ್ಯಾ" ಎಂದು ಚೀರಿ ಬುಡ್ಡಿಯನ್ನು ಎತ್ತಿಹಾಕಿ ಬಿಟ್ಟಳು. ಸ್ವಲ್ಪ ಹಾಗೆಯೇ ಚೇತರಿಸಿಕೊಂಡು ಬುಡ್ಡಿಯನ್ನು ಮತ್ತೆ ಹಿಡಿದು ಮಗನ ಬಳಿ ಬಂದು "ಅಪ್ಪಯ್ಯಾ....ಯಾವಾಗ ಬಂದೆ?"

ಉತ್ತರವು ಬರಲಿಲ್ಲ.

"ಜ್ವರ ಬಂದಿದೆಯೇ ಅಪ್ಪಯ್ಯಾ? ಕೂತುಕೋ" ಎಂದು ಬಳಿಸಾರಿ ಮಗನನ್ನು ಮುಟ್ಟಿ ಕೂಡಿಸಲು ಪ್ರಯತ್ನಿಸಿದಳು. ಆಗ್ರಹದಿಂದ ಕೈಕೊಡವಿ ಬಾಗಿಲನ್ನು ಬಿಟ್ಟು ಮುಂದೆ ಬಂದು ನಿಂತನು.

ಗಂಗಮ್ಮ ಕತ್ತುತಗ್ಗಿಸಿ ನಿಂತಳು. ಕಣ್ಣುಗಳಿಂದ ಧಾರೆಧಾರೆಯಾಗಿ ಸುರಿಯುತ್ತಿದ್ದ ದುಃಖ ಬಿಂದುಗಳು ಒಂದೊಂದೂ ತಿಮ್ಮನಿಗೆ ಉತ್ತರಕೊಡಲು ಹವಣಿಸುತ್ತಿರುವಂತೆ ಕಂಡು ಬಂದವು. ತಿಮ್ಮನ ತೆರೆದ ಕಣ್ಣುಗಳಲ್ಲಿ ರೋಷ-ದುಃಖ-ಸಂತಾಪ-ಅನುಕಂಪಗಳು ಪರೆಪರೆಯಾಗಿ ಸುಳಿದವು. ಮನಸ್ಸನ್ನು ಗಟ್ಟಿಮಾಡಿಕೊಂಡು

"ಅಮ್ಮಾ"

ಆಸೆಯಿಂದ ಗಂಗಮ್ಮ ಕತ್ತೆತ್ತಿ ನೋಡಿದಳು.

"ಅಪ್ಪಯ್ಯಾ..."

"ನಾನು ಹೋಗ್ತೀನಿ. ಇದೇ ನಂಗೂ ನಿಂಗೂ ಕೊನೆಯು...."

ಮುಂದೆ ಮಾತು ಬರದಾಯಿತು. ಗಂಗಮ್ಮ ದಿಕ್ಕುತೋರದವಳಂತೆ ಆರ್ತತೆಯಿಂದ ಮಗನ ಕಡೆ ಸರಿದು ಅವನನ್ನು ಹಿಡಿದು ಬಿಗಿಯಾಗಿ ಅಪ್ಪಿದಳು. ಕಂಬನಿಯ ತೆರೆಯಿಂದ ಕಣ್ಣುಗಳೆರಡೂ ಮುಚ್ಚಿಹೋಗಿದ್ದವು. ಹಾಗೆಯೇ ಮಗನನ್ನು ಚುಂಬಿಸುತ್ತಾ "ನಾನು ಪಾಪಿ! ಪಾಪಿ!! ಅಪ್ಪಯ್ಯಾ!!! ಆದರೆ.... ನೀನು ಕಾಣೆ....ನನ್ನ ದುಃಖ....ಎಲ್ಲಾ ನಿನಗೋಸ್ಕರ....ನಿನಗೋಸ್ಕರ ಪ್ರಾಣವನ್ನೇ ಕೊಡುವೆ ...ಇನ್ನು ಈ ಮಾನ ಒಂದು ದೊಡ್ಡ ವಿಚಾರವೇ!"

"ನನಗೆ ಬೇಕಾದ್ದು ಮಾನ....ಈ ಸಂಪಾದನೆಯಲ್ಲ...."

"ಅಪ್ಪಯ್ಯಾ....ಇಲ್ಲಿ ನೋಡು...." ಎಂದು ಅಡಿಗೆಯ ಮನೆಗೆ ಹೋಗಿ ಸೂರಿನ ಒಂದು ಬೊಂಬಿನಲ್ಲಿ ತಾನು ಸುರುಳಿಸುತ್ತಿ ಮುಚ್ಚಿಟ್ಟಿದ್ದ ಹತ್ತು ರೂಪಾಯಿಯ ಹಲವು ನೋಟುಗಳನ್ನು ತಂದು "ಎಲ್ಲಾ ನಿನಗೆಂದು....ನೀನು ಮದುವೆಯಾಗಿ ಸಂಸಾರಮಾಡಿಕೊಂಡು ಸುಖವಾಗಿರಲಿ ಎಂದು....ಈಗಲಾದರೂ ಗೊತ್ತಾಯಿತೇ? ಇದೇ ಕೊನೆ. ಇನ್ನು ನೀನು ಹೇಳಿದ ಹಾಗೆ ಇರುತ್ತೇನೆ. ಆದರೆ ಅಪ್ಪಯ್ಯಾ....ನೀನೇ ನನ್ನ ಪ್ರಾಣ....ನನ್ನ ಬಿಡಬೇಡ" ಎಂದು ಗೋಳಿಡುತ್ತಲೇ ನಿಂತಿದ್ದ ತಾಯಿಯ ಕೈಗಳನ್ನು ಕಿತ್ತೆಸೆದು "ನಿನ್ನಂತಹ ತಾಯಿ ಇರೋದಕ್ಕಿಂತಲೂ ಸಾಯೋದು ಮೇಲು. ನಿನ್ನ ಸಂಪಾದನೆ ಖರ್ಚುಮಾಡಿಕೊಂಡು ನೀನೇ ಸಂತೋಷವಾಗಿರು. ಈ ಊರಿನಲ್ಲಿ ಇನ್ನೂ ಬೇಕಾದಷ್ಟು ಜನ ಗಂಡಸರು ಇದ್ದಾರೆ....ಇವತ್ತು ನನ್ನ ತಾಯಿ ನನ್ನ ಭಾಗಕ್ಕೆ ಸತ್ತುಹೋದಳು....ನಿನ್ನ ಮಗ ನಿನ್ನ ಭಾಗಕ್ಕೆ ಸತ್ತು

ಹೋದ." ಎಂದು ಹೇಳಿ ಅಲ್ಲಿಂದ ಹೊರಟೇ ಬಿಟ್ಟನು. ಮಗನನ್ನು ಹಿಂಬಾಲಿಸಿದಳು. ಆ ಜ್ವರದ ತಾಪದಲ್ಲಿ ತಿಮ್ಮನಿಗೆ ನಾಲ್ಕು ಆಳಿನ ಬಲಬಂದಂತಾಗಿತ್ತು. ಕಠೋರತೆಯಿಂದ ಗಂಗಮ್ಮನನ್ನು ತಳ್ಳಿ ಅಲ್ಲಿಂದ ಹುಚ್ಚನಂತೆ ಓಡಿಬಿಟ್ಟನು. ಗಂಗಮ್ಮ ಬಹು ಪ್ರಯಾಸದಿಂದ ಎದ್ದಳು. ಮಗನು ಹೋದ ದಾರಿಯನ್ನೇ ನೋಡುತ್ತಾ "ಅಪ್ಪಯ್ಯಾ! ನೀನು ಹೇಳಿದ್ದು ಸರಿ—ನಾನು ಪಾಪಿ" ಎಂದುಕೊಂಡು ಮನೆಗೆ ಹಿಂತಿರುಗಿದಳು.

೯

ಮಾರನೆಯ ದಿವಸ ಗಂಗಮ್ಮನ ಮನೆಯ ಮುಂದೆ ಒಂದು ಸಂತೆಗಾಗುವಷ್ಟು ಜನ. ಎಲ್ಲರ ಬಾಯಲ್ಲೂ ಗುಸುಗುಸುಮಾತು. ಪೋಲೀಸಿನವರ ತನಿಖೆ ಬೇರೆ ನಡೆಯುತ್ತಿತ್ತು. ಕಂಡವರು ಕಂಡಂತೆ ಮಾತನಾಡಿಕೊಳ್ಳುತ್ತಿದ್ದರು. ಇದರ ಜೊತೆಗೆ ತುಸು ದೂರದಲ್ಲಿಯೇ ಒಬ್ಬ ಹುಚ್ಚನನ್ನು ಕೆಲವು ಹುಡುಗರು ಅಟ್ಟಿಸಿಕೊಂಡು ಬರುತ್ತಿದ್ದ ಗಲಭೆ ಕೇಳಿಸಿತು. ಇಲ್ಲಿಗೆ ಅವನು ಬರುವ ಹೊತ್ತಿಗೆ ಅಕ್ಕಪಕ್ಕದಲ್ಲಿದ್ದವರು ಹುಡುಗರನ್ನು ಬಯ್ದು ಕಳುಹಿಸಿದರು. ಹುಚ್ಚನು ಜನರನ್ನು ನೋಡುತ್ತಾ ಹಾಗೆಯೇ ದಾರಿಮಾಡಿಕೊಂಡು ಮನೆಯ ಒಳಕ್ಕೆ ನುಗ್ಗಿದನು. ಪೋಲೀಸಿನವರ ಹೆದರಿಕೆಯೇನೂ ಸಾಗಲಿಲ್ಲ. ನೆಲದ ಮೇಲೆ ಬಟ್ಟೆಹೊದೆಸಿ ಮಲಗಿಸಿದ್ದ ವ್ಯಕ್ತಿಯ ಮುಸುಕನ್ನು ತೆಗೆದು ಚಿಟ್ಟನೆ ಚೀರಿದನು. ಪೋಲೀಸಿನವರು ಅವನನ್ನು ಎಳೆಯಲು ಪ್ರಯತ್ನಪಡಲು ಅವರನ್ನು ಕಚ್ಚಿ ಹೊಡೆದು ದೂರತಳ್ಳಿ....ಮತ್ತೆ ಮಲಗಿದ್ದ ವ್ಯಕ್ತಿಯನ್ನು ದಿಟ್ಟಿಸಿನೋಡಿ ಗಹಗಹಿಸಿ ನಕ್ಕು ಅಲ್ಲಿಂದೆದ್ದು ವೇಗದಿಂದ ಓಡಿದನು. ಅವನು ಯಾರೆಂದು ಯಾರಿಗೂ ತಿಳಿಯಲಿಲ್ಲ.

ಪೋಲೀಸಿನವರು ಮಹಜರು ಮಾಡಿ 'ಆತ್ಮಹತ್ಯ'ವೆಂದು ನಿಶ್ಚಯಿಸಿಬಿಟ್ಟರು. ಹೆಣದ ಕೈಯಲ್ಲಿದ್ದ ನೋಟಿನ ಕಂತೆ ಸಂಸ್ಕಾರಕ್ಕೆ ವಿನಿಯೋಗವಾಯಿತು.

---

14—12—'33
3—12—'34

---



## ಶ್ರೀ ಕೆ. ಗೋಪಾಲಕೃಷ್ಣರಾಯರು, ಬಿ. ಎ. ಬೆಂಗಳೂರು

ಇವರು ಕವಿಗಳು ಮತ್ತು ಕತೆಗಾರರು; ಹಾಗೂ ನಾಟಕಕಾರರು 'ಅಪರಾಧಿ' ಎಂಬ ಏಕಾಂಕ ನಾಟಕವನ್ನೂ 'ಉಡುಗೊರೆ' 'ಬಂಗಾರದ ಡಾಬು' ಎಂಬ ಕಥಾಸಂಗ್ರಹಗಳನ್ನೂ ಪ್ರಕಟಿಸಿದ್ದಾರೆ. ಮೊತ್ತಮೊದಲು 'ಶ್ರೀನಿವಾಸ'ರನ್ನು ಅನುಸರಿಸಿ ಕತೆಗಳನ್ನು ಬರೆಯಲು ತೊಡಗಿದರಾದರೂ ಇತ್ತೀಚಿನ ಕತೆಗಳಲ್ಲಿ ಸ್ವತಂತ್ರಮಾರ್ಗವು ಕಂಡು ಬರುತ್ತದೆ. ಇವರ ಕಲ್ಪನೆಯು ಸಾಮಾನ್ಯ ಜನರ ದೃಷ್ಟಿಯಲ್ಲಿ ಗೌಣವಾಗಿ ಕಾಣುವ ವಿಷಯಗಳನ್ನು ಎತ್ತಿ ಅವುಗಳಲ್ಲಿ ನವೀನತೆಯನ್ನು ತೋರಿಸಿಕೊಡುತ್ತದೆ. ಶೈಲಿಯಲ್ಲಿ ಸರಳತೆಯೂ, ಮಾಧುರ್ಯವೂ, ಮಾರ್ದವವೂ ಇದೆ. ಆದರೂ ಕೆಲವು ಸಾರಿ ಹೆಚ್ಚಾಗಿ ವಿಷಾದಾಂತ ಕತೆಗಳಲ್ಲಿ, ವಸ್ತುವಿನಲ್ಲಿ ತೋರಿಸಿ ಕೊಡಬಹುದಾದ ವಿಷಾದವು ಮನಸ್ಸಿನ ಮೇಲೆ ನಾಟುವಂತೆ ಚಿತ್ರಿಸಲು ಲೇಖನಿಯು ಅಸಮರ್ಥವಾದಂತೆ ಕಂಡು ಬರುತ್ತದೆ. ಆದರೂ ಇವರು ಉತ್ತಮ ಕತೆಗಾರರು ಎನ್ನುವುದಕ್ಕೆ ಏನೂ ಸಂದೇಹವಿಲ್ಲ.

# ರಕ್ತದೃಷ್ಟಿ

ಕೆ. ಗೋಪಾಲಕೃಷ್ಣರಾಯರು

ನನ್ನ ತಾಯಿಯು ತೀರಿಕೊಂಡು ಇಂದಿಗೆ ಸರಿಯಾಗಿ ಒಂದು ವರ್ಷವಾಯಿತು. ಆದರೂ ಅವರು ತೀರಿಕೊಂಡಂತೆಯೇ ಇಲ್ಲ. ಪ್ರತಿಕ್ಷಣದಲ್ಲೂ ಅವರ ಮೂರ್ತಿಯು ನನ್ನ ದೃಕ್‌ಪಟದಲ್ಲಿ ಚಲಿಸುತ್ತಲೇ ಇರುತ್ತದೆ. ಅವರ ವಾಣಿಯು ಕೇಳಿಬರುವಂತೆ ಭಾಸವಾಗುತ್ತಿರುತ್ತದೆ. ಅವರ ಮಸ್ತಕವು ನನ್ನ ತಲೆಯ ಮೇಲೆ ಆಡುತ್ತಿರುವಂತೆ, ಕೂದಲುಗಳನ್ನು ನೇವರಿಸುತ್ತಿರುವಂತೆ ತೋರುತ್ತಿರುತ್ತದೆ. ಅವರ ಪ್ರತಿಯೊಂದು ಆಚರಣೆಯೂ ಹಗಲೆಲ್ಲ ನೆನಪಿಗೆ ಬಂದು ಹೃದಯದ ಉದ್ವೇಗವನ್ನು ಹೆಚ್ಚಿಸುತ್ತಿರುತ್ತದೆ. ನನಗೆ ಯಾವಾಗಲಾದರೂ ಮೈಯಲ್ಲಿ ಜಡ್ಡು ತೋರಿದಾಗ ಅವರು ತಟಗುಟ್ಟುತ್ತಿದ್ದದ್ದೂ, ಊಟವು ಹೆಚ್ಚಾಗಿ ಹೊಟ್ಟೆಯ ನೋವು ತೋರಿದಾಗ ದೃಷ್ಟಿ ತೆಗೆಯಲು ಹವಣಿಸುತ್ತಿದ್ದದ್ದೂ ಕಣ್ಮುಂದೆ ಕಟ್ಟಿದಂತೆ ಆಗುತ್ತದೆ. ನಾನು ಹುಡುಗನಾಗಿದ್ದಾಗ ಪ್ರತಿಯೊಂದಕ್ಕೂ ದೃಷ್ಟಿ ತೆಗೆಯುತ್ತಿದ್ದರು. ಪರಕೆ ಕಡ್ಡಿಗಳನ್ನು ಸುಡುವರು. ಅದು ಏನಾದರೂ ಪಟಪಟ ಎಂದು ಶಬ್ದ ಮಾಡಿದರೆ ಒಡನೆಯೆ ನೋಡಿದೆಯೋ ಎಂದು ಉದ್ಗಾರ ತೆಗೆವರು. ಒಣಗಿದ ಮೆಣಸಿನ ಕಾಯನ್ನು ಇಳಿತೆಗೆದು ಒಲೆಯಲ್ಲಿ ಹಾಕುವರು. ಅದರಲ್ಲಿ ತಿರುಳಿಲ್ಲದೆ ಗಾಟು ಸುತ್ತಿಕೊಳ್ಳದಿದ್ದಲ್ಲಿ ಆಯಿತು— ದೃಷ್ಟಿಯು ಚೆನ್ನಾಗಿ ತಟ್ಟಿದೆಯೆಂದು ಕಾಲುರಂಜು ಹಾಕಲು ಹೋಗುವರು. ಅಷ್ಟನ್ನೂ ಸಹಿಸಿಕೊಂಡಿರುತ್ತಿದ್ದವನು ಆಗ ಅವರನ್ನು ಅಲ್ಲೆಗಳೆದು ಎದ್ದು ಹೋಗಿಬಿಡುತ್ತಿದ್ದೆ. ಅವರೂ ಮನಸ್ಸಿನಲ್ಲಿಯೇ ನೊಂದುಕೊಂಡು ಹರಿಕೆಕಟ್ಟಲು ಹೋಗುತ್ತಿದ್ದರು. ಕುರುಡು ನಂಬಿಕೆ ಎಂದು ಹಾಸ್ಯ ಮಾಡುತ್ತಿದ್ದೆ.

ಈ ದಿನ ಹಿಂದಿನ ಕಾಗದಪತ್ರಗಳನ್ನು ತೆಗೆದು ನೋಡುತ್ತಿದ್ದಾಗ ನನ್ನ ತಾಯಿಯ ಅಜ್ಜ, ಅಂದರೆ ನನ್ನ ಮುತ್ತಜ್ಜ ಬರೆದಿದ್ದ ಹಸ್ತಪ್ರತಿಯು ಕೈಗೆ ಸಿಕ್ಕಿತು. ಅದು ಹಳೆಯ ಕರಡು ಕಾಗದದ ಕಂತೆ. ಕಾಗದದ ಮಂದ ಒತ್ತುವ ಕಾಗದವನ್ನು ಅಪಹಾಸ್ಯ ಮಾಡುವಂತೆ ಅದರಲ್ಲಿನ ಅಕ್ಷರಗಳು ಸ್ಫುಟವಾಗಿ ಕಾಣುತ್ತಿರಲಿಲ್ಲ—ಎಲ್ಲಾ ಬೆರೆದುಕೊಂಡಿದ್ದವು. ಹಾಗೂ ಹೀಗೂ

ಅಕ್ಷರಗಳನ್ನು ಹೊಂದಿಸಿಕೊಂಡು, ಪದಗಳನ್ನು ಬಿಡಿಸಿಬಿಡಿಸಿ ಓದತೊಡಗಿದೆ. ಅದರಲ್ಲಿ ನನ್ನ ಮುತ್ತಜ್ಜ ಅವನ ಕಾಶೀಯಾತ್ರೆಯ ಅನುಭವವನ್ನು ವಿಸ್ತರಿಸಿ ದಂತಿತ್ತು. ಅವನ ಕಾಲದಲ್ಲಿ ರೈಲು ಮೋಟಾರುಗಳಿಲ್ಲ. ಕಾಲುನಡಿಗೆಯ ಲ್ಲಿಯೇ ಕಾಶೀಯಾತ್ರೆಯನ್ನು ಮುಗಿಸಿಕೊಂಡು ಬಂದಿದ್ದನು. ಇಲ್ಲಿಗೆ ಬಂದ ಮೇಲೆ ಒಂದು ವರ್ಷ ಕಾಲವಿದ್ದು ಕಾಶಿಯಿಂದ ತಂದ ತೀರ್ಥವನ್ನು, ಗಂಗೆ ಯನ್ನು ತೆಗೆದುಕೊಂಡು ಹೋಗಿ ರಾಮೇಶ್ವರದಲ್ಲಿನ ರಾಮಲಿಂಗಕ್ಕೆ ಅಭಿಷೇಕ ಮಾಡಲು ಕಾಲುನಡಿಗೆಯಲ್ಲಿಯೇ ಹೊರಟನು. ಈ ಸಲ ಹೊರಟವರು ಹಿಂತಿರುಗಲಿಲ್ಲ. ಯಾವ ಉಪದ್ರವಗಳಿಗೆ ತುತ್ತಾದನೋ, ಯಾವ ಕಾಳಗದಲ್ಲಿ ಸಿಕ್ಕಿಕೊಂಡು ಮಡಿದನೋ, ಮತ್ತೆ ಯಾವ ಗಂಡಾಂತರದಲ್ಲಿ ಸಿಕ್ಕಿಕೊಂಡು ಪಾರಾಗಲಾಗದೇ ಪರಲೋಕಕ್ಕೆ ತೆರಳಿದನೋ ತಿಳಿಯದು. ಕಾಶೀಯಾತ್ರೆ ಯನ್ನು ಮುಗಿಸಿಕೊಂಡು ಬಂದ ಮೇಲೆ ತನ್ನ ಅನುಭವವನ್ನೆಲ್ಲಾ ಬರೆದಿಟ್ಟಿ ದ್ದಾನೆಂದು ನನ್ನ ತಾಯಿ ನನಗೆ ಆಗಾಗ ಹೇಳುತ್ತಿದ್ದರು. ಅದರಲ್ಲಿನ ಅನೇಕ ಕತೆಗಳನ್ನು ಬಿತ್ತರಿಸುತ್ತಿದ್ದರು. ನಾನು ಆ ಪುಸ್ತಕದ ಗಂಟುಗಳನ್ನೆಲ್ಲಾ ಕಿತ್ತುಹಾಕಿ ಎಷ್ಟೋ ಸಲ ಹುಡುಕಿದ್ದೆ. ತಾಳೀಪತ್ರಿಗಳನ್ನೆಲ್ಲಾ ತಿರುವಿ ಹಾಕಿದ್ದೆ, ಅದರ ಬದಲು ಎಷ್ಟೋ ಅಮೂಲ್ಯವಾದ ಹಿಂದಿನ ಗ್ರಂಥಗಳು ದೊರೆತವು. ಅವುಗಳೆಲ್ಲಾ ನನ್ನ ಮುತ್ತಜ್ಜನ ಪಠ್ಯ ಪುಸ್ತಕಗಳು; ಪಾರಾಯಣ ಪುಸ್ತಕಗಳು. ಆದರೆ ಬೇಕೆಂದುದು ಸಿಕ್ಕಿರಲಿಲ್ಲ. ಅದು ಅಕಸ್ಮಾತ್ತಾಗಿ ಇಂದು ಸಿಕ್ಕಿತು. ಇತರ ಕೆಲಸಗಳನ್ನೆಲ್ಲಾ ಒತ್ತಟ್ಟಿಗಿಟ್ಟು ಅದನ್ನೇ ಓದುತ್ತಾ ಕುಳಿತೆ. ಒಂದು ಭಾಗ ಮಟ್ಟಿಗೆ ಬಹಳ ಸ್ವಾರಸ್ಯವಾಗಿ ಕಂಡುಬಂದಿತು. ಅದೇ ನನ್ನ ತಾಯಿಯು ದೃಷ್ಟಿ ತೆಗೆಯುತ್ತಿದ್ದುದನ್ನು ನೆನಪಿಗೆ ತಂದದ್ದು. ಹಾಗೆ ದೃಷ್ಟಿ ತೆಗೆಯುವ ವಿಷಯದಲ್ಲಿ ಆಲೋಚಿಸುವಂತೆ ಅವಕಾಶವನ್ನು ಕಲ್ಪಿಸಿದ್ದು. ಮೊದಲು ಮುತ್ತಜ್ಜನ ಕತೆಯನ್ನು ಹೇಳಿಬಿಡುತ್ತೇನೆ. ಆ ಮೇಲೆ ಅದರ ಮೇಲಿನ ಟೀಕೆಯನ್ನು ತೆಗೆದುಕೊಳ್ಳೋಣ.

ವಿಂಧ್ಯಪರ್ವತದ ಬಳಿಗೆ ಅವನು ಹೋಗುವುದರೊಳಗಾಗಿ ಅವನ ಜೊತೆ ಯಲ್ಲಿ ಹೊರಟಿದ್ದವರೆಲ್ಲರೂ ಹಿಂದೆ ಹಿಂದೆಯೇ ಬಿದ್ದುಬಿಟ್ಟಿದ್ದರು. ಅವನೊ ಬ್ಬನೇ ಹಿಡಿದ ವ್ರತವನ್ನು ಸಾಧಿಸಬೇಕೆಂದು ನಡುವೆ ಒದಗಿದ ಯಾವ ಎಡರು ತೊಡರುಗಳಿಗೂ ಹಿಮ್ಮೆಟ್ಟದೆ ಮುಂದುವರಿಯುತ್ತಿದ್ದ. ದಾರಿಯಲ್ಲಿ ವಾಂತಿ

ಭೇದಿಯ ಉಪದ್ರವಕ್ಕಿಟ್ಟುಕೊಂಡಿತು. ಅದರಲ್ಲಿಯೂ ಜಯಿಸಿಕೊಂಡು ಮುಂದಕ್ಕೆ ಹೊರಟ. ದರೋಡೆಗಾರರು ಅವನ ಮೈಮೇಲೆ ಬಿದ್ದು, ಇದ್ದು ಬದ್ದದ್ದನ್ನು ಕಸುಕೊಂಡು ಹೋದರು. ನಿಶ್ಚಿಂತನಾಗಿ ಮುಂದೆ ನಡೆದ. ನಿಬಿಡವಾಗಿದ್ದ ಕಾಡನ್ನು ಹೊಗಬೇಕಾಯಿತು. ದಾರಿ ತಪ್ಪಿತು. ಅನ್ನ ಆಹಾರಗಳನ್ನು ಕಂಡು ದಿನಗಳಾಗತೊಡಗಿದವು. "ದೇವರಿದ್ದಾನೆ, ಭಕ್ತ ರನ್ನೆಂದಿಗೂ ಕೈಬಿಡುವುದಿಲ್ಲ" ಎಂದು ಹೆಜ್ಜೆಹಾಕುತ್ತಲೇ ಇದ್ದ. ಕತ್ತಲು ಕವಿದುಕೊಂಡಿತು. ಕಣ್ಣು ಕಾಣದಾಯಿತು. ಬಂಡೆಯೊಂದನ್ನು ಹತ್ತಿ ಅದರ ಮೇಲ್ಗಡೆ ಪವಡಿಸಿದ. ನಿರ್ಭೀತಿಯಿಂದ ನಿದ್ರಿಸಿದ. ತನ್ನ ಸರ್ವಸ್ವ ವನ್ನೂ ಅವನಲ್ಲಿ ಅರ್ಪಿಸಿದ್ದಾನೆ. ಇನ್ನು ಭೀತಿಯೆಲ್ಲಿಯದು? ಅಲ್ಲದೆ ದಣಿದಿದ್ದ. ನಿದ್ರೆ ಚೆನ್ನಾಗಿ ಹತ್ತಿತು.

ಅರುಣೋದಯದ ಮೊದಲೇ ಎಚ್ಚರವಾಯಿತು. ಎದ್ದು ನಿಂತು ಸುತ್ತಲೂ ದಿಟ್ಟಿಸತೊಡಗಿದ. ದೂರದಲ್ಲಿ ಬೆಳಕೊಂದು ಕಾಣಿಸಿತು. ಅಸ್ತ ಮಿಸಲಿದ್ದ ನಕ್ಷತ್ರವೇನಾದರೂ ಅದೋ ಎಂಬ ಸಂದೇಹ ತಳೆಯಿತು. ಪುನಃ ನೋಡತೊಡಗಿದ. ರಾತ್ರಿ ತಾನಲ್ಲಿಗೆ ಬಂದಾಗ ಕಾಣುತ್ತಿರಲಿಲ್ಲ; ಈಗ ಹೇಗೆ ಬಂತು? ಎಂದು ಕಣ್ಣಮೇಲೆ ಕಣ್ಣಿಟ್ಟು ನೋಡತೊಡಗಿದ. ಅದು ಯಾವುದೋ ಗೃಹದಿಂದ ಹೊರಬೀಳುತ್ತಿರುವ ಬೆಳಕಾಗಿಯೇ ಇರಬೇಕು. ಅದೇ ದಿಕ್ಕನ್ನು ಹಿಡಿದು, ಬಂಡೆಯಿಂದಿಳಿದು ನಡೆಯ ತೊಡಗಿದ.

ಹೊತ್ತು ನೆತ್ತಿಗೇರಿತು. ಸುತ್ತಲೆಲ್ಲೂ ಮಾನವರ ವಸತಿಯ ಛಾಯೆಯೇ ಇಲ್ಲ. ನಿರಾಶನಾಗಿ ಮರದ ಕೆಳಗೆ ಕುಳಿತ. ಕಾಲುಗಳು ಸೋತಿದ್ದವು ಹೊಟ್ಟೆಯು ಬೆನ್ನಿಗೆ ಹತ್ತಿಕೊಂಡಿತ್ತು. ಕುಳಿತ ಮೇಲೆ ಮೇಲಕ್ಕೇಳಲೇ ಆಗದು. ಕಾಲಿನಲ್ಲಿ ತ್ರಾಣವಿಲ್ಲ. ಕುಸಿದು ಬಿದ್ದಿದ್ದಾನೆ.

ಸೂರ್ಯನು ಇಳಿಮುಖನಾಗುತ್ತಿದ್ದಾನೆ. ಅವನ ಮನದ ಸ್ಥಿತಿ ಆಸ್ತಿಕ ನನ್ನೊಡನೆ ನಾಸ್ತಿಕನನ್ನಾಗಿ ಮಾಡುವಂತಿತ್ತು. ಬೇಸರವು ತಲೆದೋರಲಿತ್ತು. ಆಗ ಎಲ್ಲೋ ಕಾಗೆಯ ಶಬ್ದವು ಕೇಳಿಬಂದಿತು. ಆಗಸವನ್ನು ದಿಟ್ಟಿಸಿದ. ಕೊನೆಗೆ ಕಾಣಿಸಿದವು ಕಾಗೆಯ ಬಳಗ. ಜೀವವು ಬಂದಿತು. ತಾನು ಮೋಸ ಹೋಗಿಲ್ಲ; ಹತ್ತಿರದಲ್ಲಿಯೇ ವಾಸಗೃಹವಿದೆಯೆಂದು ಧೈರ್ಯ ತಂದುಕೊಂಡು ಏಳಲಾರದೆ ಎದ್ದು, ಹಿಡಿದಿದ್ದ ಹಾದಿಯನ್ನೇ ಮುಂದುವರಿಸಿದ. ಆ ದುರ್ಭೇದ್ಯ

ವಾಗಿದ್ದ ಕಾನನವು ಹಿಂದುಳಿಯತೊಡಗಿತು. ಮುಂದು ಮುಂದಕ್ಕೆ ಹೆಜ್ಜೆ ಹಾಕಿದ. ಮನೆಯೊಂದು ಕಾಣಿಸಿತು. ಒಂದೇ ನೆಗೆತಕ್ಕೆ ನೆಗೆದು ಆ ಮನೆಯನ್ನು ಸೇರಿದ.

ಅದು ಮುಸಲ್ಮಾನರ ಮನೆ. ಮನೆಯ ಮುಂದೆ ಸಾರಣೆ-ಕಾರಣೆಯಿಲ್ಲ, ರಂಗವಲ್ಲಿಯಿಲ್ಲ, ಜನರ ಸುಳಿವಂತೂ ಇಲ್ಲ. ಗಂಡಸರೆಲ್ಲೊ ಕಾಣಿಸರು. ಹೆಂಗಸರಿಗೆ ಗೋಷಾ. ಎಷ್ಟು ಕೂಗಿದರೂ ಮಾರುತ್ತರವಿಲ್ಲ. ಕೊನೆಗೆ ರೋಸಿಹೋಗಿ ಬಾಗಿಲನ್ನು ಡಬಡಬನೆ ಬಡಿಯತೊಡಗಿದ. ಬಾಗಿಲು ತೆರೆಯಿತು. ಇದಿರಿನಲ್ಲಿ ನೋಡುತ್ತಾನೆ,—ಸೌಂದರ್ಯಮೂರ್ತಿ! ಕನಸೋ ನನಸೋ ಎಂದು ಕಣ್ಣುಜ್ಜಿಕೊಂಡು ನೋಡತೊಡಗಿದ. ಆಕೆ ಹಾಗೆ ಬಾಗಿಲನ್ನು ಹಾಕಿಕೊಳ್ಳುವುದರಲ್ಲಿದ್ದಳು. ಮುಂದುವರಿದು ಆಕೆಯನ್ನು ದಿಟ್ಟಿಸುತ್ತಾ ನಿಂತ.

ಮುತ್ತಜ್ಜ ಅವಳನ್ನು ಹೆಚ್ಚಿಗೆ ಬಣ್ಣಿಸಿಲ್ಲ. ಅವಳ ರೂಪು ದೇವಿಯ ನೆನಪನ್ನು ತರುತ್ತಿತ್ತು ಎಂದು ಮಟ್ಟಿಗೆ ಹೇಳಿಬಿಟ್ಟಿದ್ದಾನೆ. ಅದರಿಂದ ನಾನವಳ ಸೌಂದರ್ಯವನ್ನು ಹೆಚ್ಚಿಗೆ ವರ್ಣಿಸಲು ಹೋಗುವುದು ದುಷ್ಟತನ.

ಅವಳು ನವಯೌವನೆಯಂತೆ. ಬಾಗಿಲು ತೆರೆದೊಡನೆ ಅವನಿಗೆ ಆಕೆ ಚಂದ್ರನು ಮೋಡದ ಹಿಂಭಾಗದಿಂದ ನುಸುಳಿಕೊಂಡು ಹೊರಬಿದ್ದಂತೆ ಭಾಸವಾಯಿತಂತೆ. ಮುಂದುವರಿದು ಅಲ್ಲಿನ ಭಾಷೆಯಲ್ಲಿ "ತಾಯಿ, ಮೂರು ದಿನಗಳಿಂದಲೂ ಹೊಟ್ಟೆಗಿಲ್ಲ. ಅಡಿಗೆಗೆ ಕೊಟ್ಟಲ್ಲಿ ಮಾಡಿಕೊಂಡು ಊಟಮಾಡುತ್ತೇನೆ. ಬ್ರಾಹ್ಮಣನಿಗೆ ಭೋಜನ ಮಾಡಿಸಿದ ಪುಣ್ಯ ಕಟ್ಟಿಕೊಳ್ಳುತ್ತಿ" ಎಂದು ಕೇಳಿಕೊಂಡನಂತೆ.

ಆಕೆ ಅವನನ್ನು ಆ ಜಾಗದಿಂದ ಮೊದಲು ಬಿಟ್ಟು ಹೊರಡುವಂತೆ ಸಂಜ್ಞೆಮಾಡಿದಳು. ಅವನು ಕೇಳದೇ ಹೋಗಲು ಬಲವಂತದಿಂದ ಬಾಗಿಲು ಹಾಕಿಕೊಳ್ಳಲು ಹೋದಳು. ಅವನು ಹೊಸ್ತಿಲ ಮೇಲೆ ಕುಳಿತು "ನೀನು ಆಹಾರಸಾಮಗ್ರಿಯನ್ನು ಕೊಡದೇ ಹೋದಲ್ಲಿ ಇಲ್ಲೇ ಪ್ರಾಣವನ್ನು ಬಿಟ್ಟುಬಿಡುತ್ತೇನೆ"ಂದು ಹಟ ಹಿಡಿದನು. ಅವಳಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಅವನ ಕಡೆ ನೋಡಿದಳು. ಎಲುಬಿನ ಹಂದರದಂತಾಗಿರುವ ದೇಹ. ಮುಖದಲ್ಲಿ ದೀನಭಾವ. ಸ್ತ್ರೀಕರುಳು ಎಷ್ಟೇ ಆದರೂ. ಅವನನ್ನು ನೋಡಿ ಕಂಗಳಲ್ಲಿ

ಚಿಲುಮೆಯಂತೆ ಹೊರಹೊಮ್ಮಿದ ಆ ಕಂಬನಿಯನ್ನು ತಡೆಯುತ್ತಾ "ಮುದು ಕಪ್ಪ, ನಿನಗೆ ಏನು ಕೊಡುವುದಕ್ಕೂ ನಾನು ನಿರಾಶ್ರಯಳಾಗಿದ್ದೇನೆ. ಕೊಟ್ಟದ್ದೇ ಆದಲ್ಲಿ ನನ್ನ ಯಜಮಾನರು ನನ್ನನ್ನು ಸುಮ್ಮನೆ ಬಿಡುವುದಿಲ್ಲ. ನಿನ್ನನ್ನಂತೂ ಮುಗಿಸಿಯೇ ಬಿಡುತ್ತಾರೆ. ಅವರು ಯಾರೂ ಎನ್ನುವುದು ನಿನಗೆ ತಿಳಿಯದು. ಸುಮ್ಮನೆ ಹೊರಟು ಹೋಗಿಬಿಡು" ಎಂದು ಬೇಡಿಕೊಂಡಳು; ಅಂಗಲಾಚಿ ದಳು. ಅವಳು ಎಷ್ಟು ಕೇಳಿಕೊಂಡರೂ ಅವನು ಆ ಜಾಗವನ್ನು ಬಿಟ್ಟು ಎದ್ದಿದ್ದರೆ ತಾನೆ! ಕೊನೆಗೆ ಅವಳು "ಆದದ್ದಾಗಲಿ, ಹೊತ್ತು ಇಳಿಯುವುದ ರೊಳಗಾಗಿ ಹಿತ್ತಿಲಿನಲ್ಲಿರುವ ಆ ಬಾವಿಯ ಬಳಿ ಅಡಿಗೆ ಮಾಡಿಕೊಂಡು ತಿಂದು ಹೊರಟುಹೋಗು. ಅವರು ಬರುವುದರೊಳಗಾಗಿ ಹೊರಟುಹೋಗಿರಬೇಕು" ಎಂದು ಹೇಳಿ ಅವನಿಂದ ಮಾತು ತೆಗೆದುಕೊಂಡು ಅಡಿಗೆಗೆ ಬೇಕಾದ ಪಾತ್ರೆ ಪದಾರ್ಥಗಳನ್ನು ತಂದು ಕೊಟ್ಟಳು.

ಮನಃಪೂರ್ವಕವಾಗಿ ಅವಳನ್ನು ಆಶೀರ್ವದಿಸುತ್ತಾ ಅಡಿಗೆಯನ್ನು ಮಾಡಿಕೊಳ್ಳಲು ಬಾವಿಯ ಬಳಿಗೆ ತೆರಳಿದ. ಬಾವಿಯಲ್ಲಿಳಿದು ಸ್ನಾನಾಹ್ನಿಕ ಗಳನ್ನು ತೀರಿಸಿಕೊಂಡು ಅಡಿಗೆಗೆ ಆರಂಭಿಸಿದ. ಅನ್ನವನ್ನು ಮಾಡಿ ಎಲೆಯಲ್ಲಿ ಬಡಿಸಿಕೊಂಡ. ಸಾರು ಮಾಡಿಕೊಳ್ಳುವುದಕ್ಕೂ ಅವನಿಗೆ ತಾಳ್ಮೆಯಿಲ್ಲ. ಗೊಜ್ಜು ಕಿವಿಚಿಕೊಂಡು ಅವಳು ಕೊಟ್ಟಿದ್ದ ಮೊಸರನ್ನು ಹತ್ತಿರ ಇಟ್ಟುಕೊಂಡು ಕುಳಿತ. ಅಷ್ಟು ಹೊತ್ತಿಗೆ ಹೊತ್ತು ಇಳಿಮುಖವಾಗಿತ್ತು. ಸಂಧ್ಯಾವಂದನೆಯನ್ನು ಪೂರೈಸದೆ ಊಟ ಮಾಡುವುದು ಹೇಗೆ? ತನಗೆ ಅಂದು ಆಹಾರವನ್ನು ಒದಗಿ ಸಿರುವಾಗ ಸೂರ್ಯದೇವನಿಗೆ ಅರ್ಘ್ಯವನ್ನೀಯದೆ ಅವನನ್ನು ಕಳುಹಿಸಿ ಕೊಡಲು ಮನಸ್ಸು ಒಪ್ಪುತ್ತದೆಯೇ? ಊಟ ಮಾಡಲು ಕುಳಿತರೆ ಆಹಾರವು ಅನಾಯಾಸವಾಗಿ ಇಳಿಯುತ್ತದೆಯೋ? ಶ್ರೋತ್ರಿಯ ಬ್ರಾಹ್ಮಣನು ಅವನು. ಎಲೆಯ ಮುಂದೆ ಕುಳಿತಿದ್ದವನು ಹಾಗೇ ಎದ್ದು ಸಂಧ್ಯಾವಂದನೆಗೆ ಕುಳಿತು ಕೊಂಡ.

ಅವನ ಜಪತಪದ ವಿಷಯದಲ್ಲಿ ನನ್ನ ತಾಯಿ ಬಹಳ ಹೇಳುತ್ತಿದ್ದಳು. ಯೋಗಾರೂಢನಾಗಿ ಆಸನವನ್ನು ಹಾಕಿಕೊಂಡು ಜಪವನ್ನು ಮಾಡುತ್ತಾ ಕುಳಿತುಕೊಂಡನೆಂದರೆ ಭೂಮಿಯಿಂದ ಹಾಗೇ ಮೇಲಕ್ಕೆ ಏಳುತ್ತಿದ್ದನಂತೆ. ತನ್ನನ್ನೆ ತಾನು ಮರೆತು ಗಂಟೆಗಳು, ದಿನಗಳು ಹಾಗೇ ಕುಳಿತಿರುತ್ತಿದ್ದನಂತೆ.

ಅದು ಈಗ ಬೇಡ. ಅವನು ನೇಮಿಷ್ಠ ಎಂದು ಹೇಳಿದರೆ ಸಾಕು. ಅವನಿಗೆ ಕರ್ಮಗಳೆಲ್ಲವೂ ಸಾಂಗವಾಗಿ ನಡೆಯಬೇಕು. ಯಾವುದರಲ್ಲೂ ಯಾವ ವಿಧವಾದ ಲೋಪವೂ ಬರಬಾರದು. ಅದು ಅವನ ಹುಟ್ಟುಗುಣ. ಅಂತು ಇರುವಲ್ಲಿ ಸಂಧ್ಯಾವಂದನೆಯನ್ನು ಸಾಂಗವಾಗಿ ಪೂರೈಸದೆ ಊಟಕ್ಕೆ ಏಳುವನೆ?

ಹೊತ್ತು ಇಳಿಯಿತು; ಕತ್ತಲು ಕವಿಯತೊಡಗಿತು. ಅವನ ಸಂಧ್ಯಾವಂದನೆ ತೀರಲಿಲ್ಲ. ಎಷ್ಟು ಹೊತ್ತಾದರೂ ಊಟವನ್ನು ಮುಗಿಸಿ ತೆರಳದೇ ಇರುವುದನ್ನು ಕಂಡು ಅವಳಿಗೆ ಗಾಬರಿಯಾಯಿತು. ಗಂಡನಿನ್ನು ಬರುವ ಹೊತ್ತು. ಬಂದರೆ ಆಯಿತು ಅವಳ ಗತಿ. ಹಗಲುಗಳ್ಳನವನು. ದರೋಡೆಗಾರ. ಕೊಲೆಮಾಡಿ ದೋಚಿಕೊಳ್ಳುವುದೇ ಅವನ ವೃತ್ತಿ. ಅವಳೂ ಕಳವು ಮ್ಹಾಲೇ. ಯಾತ್ರಿಕರ ತಲೆ ಹೊಡೆದು ಆ ರತ್ನವನ್ನು, ಬ್ರಾಹ್ಮಣಕನ್ಯೆಯನ್ನು ಸಂಪಾದಿಸಿದ್ದ. ಹಾಗಿರುವಲ್ಲಿ ಅವನಿಲ್ಲದಿರುವಾಗ ಅವನ ಮನೆಯಲ್ಲಿಯೇ ಬ್ರಾಹ್ಮಣನೊಬ್ಬನು ಬಂದು ಅಡಿಗೆಮಾಡಿಕೊಂಡು ಊಟ ಮಾಡುತ್ತಿರುವುದನ್ನು ನೋಡಿದ್ದೇ ಆದಲ್ಲಿ ಅವನ ರಕ್ತವು ನೆತ್ತಿಗೇರದೇ ಇರುತ್ತದೆಯೋ? ಅವಳೂ ಒಳಸಂಚೆಂದು ಅವಳನ್ನು ತೀರಿಸದೇ ಇರುತ್ತಾನೆಯೇ? ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಇನ್ನೆರಡು ಗಳಿಗೆ ಕಾದಳು. ಕೊನೆಗೆ ಏನು ಮಾಡುತ್ತಿದ್ದಾನೆ? ಹೋಗಿ ಎಚ್ಚರಿಸೋಣವೆಂದು ಬಾವಿಯ ಬಳಿಗೆ ಕಾಲು ಹಾಕಿದಳು. ಆದಷ್ಟು ಅವನನ್ನು ಸಾಗಹಾಕಬೇಕೆಂದು ಮಾಡಿಕೊಂಡು ಅಲ್ಲಿಗೆ ಬಂದು ನೋಡುತ್ತಾಳೆ,—ಅಲ್ಲಿ ಅವನು ನಿಶ್ಚಿಂತನಾಗಿ ದೇವರ ಧ್ಯಾನದಲ್ಲಿ ಕುಳಿತಿದ್ದಾನೆ; ಗಾಯತ್ರಿಜಪದಲ್ಲಿ ತನ್ಮಯನಾಗಿದ್ದಾನೆ. ಕರೆದಳು; ಶಬ್ದ ಮಾಡಿದಳು. ಅವನನ್ನು ಮುಟ್ಟಿ ಎಬ್ಬಿಸಲು ಮನಸ್ಸು ಬಾರದು. ಜಾತಿಯನ್ನು ಕಳೆದುಕೊಂಡಿದ್ದಾಳೆ. ಹಿಂದಿನ ಸ್ಮರಣೆಯು ಬಂದಿತು; ತಾಯ್ತಂದೆಗಳ ನೆನಪಾಯಿತು. ಕಣ್ಣೀರಿಟ್ಟಳು. ಕೊನೆಗೆ ಆದುದು ಆಗಲೆಂದು ಅವನ ಗೊಡವೆಗೆ ಹೋಗದೆ ದೇವರ ಮೇಲೆ ಭಾರ ಹಾಕಿ ದೇವರನ್ನು ಪ್ರಾರ್ಥಿಸುತ್ತಾ ನಿಂತಳು.

ಎಂದಿನಂತೆ ಅವಳ ಗಂಡ ಆ ದಿನವೂ ಅಂದಿನ ಲೂಟಿಯನ್ನು ಹೊರಲಾರದೆ ಹೊತ್ತುಕೊಂಡು ರಕ್ತಾಭಿಷಿಕ್ತನಾಗಿ ಮನೆಗೆ ಬಂದ. ಬಾಗಿಲಿಗೆ ಬರುತ್ತಲೇ ಹೆಂಡತಿಯ ಹೆಸರನ್ನು ಹಿಡಿದು ಕೂಗತೊಡಗಿದ. ಮಾರುತ್ತರ

ಬರದಿರಲು ತಲೆಯ ಮೇಲಿದ್ದ ಹೊರೆಯನ್ನು ಕೆಳಗಿಳಿಸಿ ಬಾಗಿಲನ್ನು ಒದ್ದ. ಬಾಗಿಲು ತೆರೆಯದಿರಲು ಮತ್ತೆ ಅರಚಲಾರಂಭಿಸಿದ. ಅವಳು ನಡುಗುತ್ತಾ ಹಿತ್ತಲಕಡೆಯಿಂದ ಬರುತ್ತಿರುವುದನ್ನು ಕಂಡು ಆ ಕಡೆಗೆ ತಿರುಗಿದ. ಅವಳು ಬಂದವಳೇ ಅವನ ಪಾದಗಳ ಮೇಲೆ ಬಿದ್ದಳು. ಅವಳನ್ನು ಕೊಡವಿಕೊಂಡು ಏನೋ ಬಾವಿಯ ಬಳಿಗೆ ಒಡನೆ ನುಗ್ಗಿದ. ನುಗ್ಗಿ ನೋಡುತ್ತಾನೆ—ಅಲ್ಲಿ ಬ್ರಾಹ್ಮಣ! ಅವನ ಮನೆಯಲ್ಲಿ ಬ್ರಾಹ್ಮಣ!!

ರಕ್ತವು ಕುದಿಯಿತು. ಭೀಷಣ ಭಾವಗಳು ತಳೆದವು. ಕಳ್ಳನ ಮನಸ್ಸು ಯಾವಾಗಲೂ ಹುಳ್ಳುಹುಳ್ಳಗೆ ತಾನೆ. ಒಂದೇ ಏಟಿಗೆ ಅವನನ್ನು ಪೂರೈಸಿ ಬಿಡಬೇಕೆಂದು ಅವನಿದ್ದೆಡೆಗೆ ನಡೆದು ದೊಣ್ಣೆಯನ್ನೆತ್ತಿದ. ಆ ಬ್ರಾಹ್ಮಣ ಕಟ್ಟಕದಲಲಿಲ್ಲ. ಅವನಿಗೆ ಮತ್ತಷ್ಟು ರೇಗಿತು. ಅಂದಿಗೆ ಎಷ್ಟೋ ಜನರನ್ನು ಆಹುತಿ ತೆಗೆದುಕೊಂಡಿದ್ದಿತಾ ದೊಣ್ಣೆ. ಅವಳ ಮೈಯಲ್ಲಿ ನಡುಕ ಹತ್ತಿ ಕೊಂಡಿತು. ತನ್ನ ಜಾತಿಯ ಮಮತೆ ಮೈತೋರಿಬಂದಿತು. ತಿರುಗಿಬಿದ್ದ ಹುಲ್ಲೆಯಂತೆ ಅವಳು ಅವನ ಮೇಲೆ ಬಿದ್ದು ದೊಣ್ಣೆಯನ್ನು ಹಿಡಿದುಕೊಂಡಳು. ಅವನಿಗೆ ಮತ್ತಷ್ಟು ರೋಷವೇರಿತು. ಅವಳೊಡನೆ ಹೆಣಗಾಡತೊಡಗಿದ. ಅಷ್ಟು ಆಗುತ್ತಿದ್ದರೂ ಅಂತರ್ಮುಖಿಯಾಗಿದ್ದಾ ಬ್ರಾಹ್ಮಣ ಬಹಿರ್ಮುಖಿ ಯಾಗಲೇ ಇಲ್ಲ. ಅವನೊಂದು ವೇಳೆ ಕಪಟಿಯಾಗಿದ್ದರೆ ಈ ಸಂದರ್ಭದಲ್ಲಿ ಅವಳ ಸಹಾಯಕ್ಕವನು ಒದಗಿ ಬರುತ್ತಿರಲಿಲ್ಲವೇ ಎಂಬ ಸಂದೇಹ ತೋರಿತು. ಆಶ್ಚರ್ಯವೂ ಆಯಿತು. ಹೆಂಡತಿಯನ್ನು ಬಿಟ್ಟು ಅವನನ್ನೇ ದಿಟ್ಟಿಸಿದ. ಮಾಡಿ ಬಡಿಸಿಕೊಂಡಿದ್ದ ಅನ್ನವನ್ನೂ ದಿಟ್ಟಿಸಿದ. ಅವಳು ಗಂಡನನ್ನು ಪುನಃ ಪ್ರಾರ್ಥಿಸತೊಡಗಿದಳು. ದೀರ್ಘಶ್ವಾಸವನ್ನೆಳೆಯುತ್ತಾ ತಲೆಯನ್ನು ತೂಗುತ್ತಾ ಹಾಗೇ ನಿಂತುಬಿಟ್ಟ. ಕೆಲಕಾಲ ಅಲ್ಲಿ ಮೌನವು ಸಾಮ್ರಾಜ್ಯವನ್ನು ಬೆಳೆ ಯಿಸತೊಡಗಿತು.

ಜಪವನ್ನು ಪೂರೈಸಿದ ಮೇಲೆ ಆತ ಕಣ್ಣನ್ನು ಬಿಟ್ಟು ಆಚಮನವನ್ನು ಮಾಡಿ, ಅವಳೊಂದಿಗೆ "ಇವರೇ ಏನು ನಿಮ್ಮ ಯಜಮಾನರು?" ಎಂದು ಕೇಳಿ ಅವನನ್ನು ಆಶೀರ್ವದಿಸಿದ. ಅವನ ಆ ಶಾಂತಪ್ರಕೃತಿಯನ್ನು ಕಂಡು ಕಟುಕನ ಕರಳೂ ನೀರಾಯಿತು. "ನಿಮ್ಮ ಹೆಂಡತಿ ಬಹಳ ಉದಾರಹೃದಯಳು. ನಿಮ್ಮ ಸತ್ಕಾರ ದೇವರಿಗೆ ಪ್ರೀತಿಯಾಗಲಿ ನನಗೆ ಈ ಮೂರು ದಿನಗಳಿಂದ

ಹೊಟ್ಟೆಗಿರಲಿಲ್ಲ. ದೇವರೇ ಇಲ್ಲಿಗೆ ಕರೆತಂದು ಅನ್ನವನ್ನೊದಗಿಸಿದ. ತಾವು ಅಪ್ಪಣೆ ಕೊಟ್ಟರೆ ಈಗ ಊಟಮಾಡಿ ಆ ಮೇಲೆ ಬಂದು ಕಾಣುತ್ತೇನೆ" ಎನ್ನುತ್ತಾ ಎಲೆಯ ಬಳಿಗೆ ತೆರಳಿ ಪರಿಷಿಂಚನೆ ಮಾಡಲು ಹೋದ

ಅಷ್ಟರಲ್ಲಿ ಆಕೆ "ಬೇಡಿ, ಬೇಡಿ ಆ ಅನ್ನವನ್ನು ಊಟಮಾಡಬೇಡಿ. ಪಾತ್ರೆಯಲ್ಲಿ ಇನ್ನೂ ಉಳಿದಿದ್ದರೆ ಬೇರೆ ಬಡಿಸಿಕೊಂಡು ಊಟಮಾಡಿ. ನಾವು ಹೊರಟು ಹೋಗುತ್ತೇವೆ. ಅದನ್ನು ಮುಟ್ಟಗೆ ಊಟಮಾಡಬೇಡಿ" ಎಂದು ಅವನನ್ನು ತಡೆಯಲು ಹೋದಳು. ಅವನಿಗೆ ಹೊಟ್ಟೆ ಹಸಿವು. ಪಾತ್ರೆಯಲ್ಲಿದ್ದ ದ್ದನ್ನೆಲ್ಲಾ ಅಲ್ಲಿ ಬಡಿಸಿಕೊಂಡಿದ್ದಾನೆ. ಪುನಃ ಯಾವ ಹೊತ್ತಿಗೆ ಮಾಡಿಕೊಳ್ಳು ವುದು ಎಂದು ಅವಳ ಮಾತನ್ನು ಲೆಕ್ಕಿಸದೆ ಬಡಿಸಿಕೊಂಡಿದ್ದಕ್ಕೇ ಕೈ ಹಾಕಲು ಹೋದ. ಒಡನೆ ಅವಳು ನುಗ್ಗಿ ತನ್ನ ಗಂಡನೆದುರಿನಲ್ಲಿ ಇದ್ದರೂ ಧೈರ್ಯ ತಂದುಕೊಂಡು ಅನ್ನತುತ್ತನ್ನು ಹಿಡಿದಿದ್ದ ಅವನ ಆ ಕೈಯನ್ನು ಕಿತ್ತುಕೊಂಡು "ನನ್ನ ಮೇಲೆ ಆಣೆಯಿದೆ. ಅದನ್ನು ಮುಟ್ಟಗೆ ತಿನ್ನಬೇಡಿ. ನಿಮಗೆ ಮೈಲಿಗೆ ಆಯಿತು. ಸ್ನಾನಮಾಡಿ ಬೇರೆ ಮಾಡಿಕೊಳ್ಳಿ" ಎಂದಳು. "ಅದು ಮೈಲಿಗೆ ಆಗಲಿಲ್ಲವಲ್ಲ. ಸ್ನಾನಮಾಡಿ ತಿಂದರಾಯಿತು" ಎಂದು ಅವನೆನ್ನಲು ಆಕೆ ಅವನನ್ನು ವಿನಯದಿಂದ ಅದನ್ನು ತೆಗೆದುಕೊಳ್ಳಕೂಡದೆಂದು ಪ್ರಾರ್ಥಿಸಿದಳು. ಅಲ್ಲಿಯ ವರಿಗೂ ಸುಮ್ಮನೆ ನಿಂತಿದ್ದ ಅವಳ ಗಂಡನೂ ಅವನನ್ನು ಕುರಿತು "ನೀವು ಬೇರೆ ಮಾಡಿಕೊಂಡು ಊಟಮಾಡಿ. ಅದನ್ನು ಬಿಟ್ಟುಬಿಡಿ" ಎಂದು ಹೇಳಿ ಅಲ್ಲಿಂದ ತೆರಳಿದ. ಅವನು ಹೊರಟುಹೋದೊಡನೆ ಅವಳು ಮುತ್ತಜ್ಜ ನನ್ನು ಕುರಿತು "ನಾನು ಯಾತಕ್ಕೆ ಕೇಳಿಕೊಂಡೆನೆನ್ನುವುದು ತಮಗೆ ಮುಂದೆ ತಿಳಿಯುತ್ತದೆ. ಈಗ ಬೇಡ. ಅದರ ಮೇಲೆ ಮಕ್ಕರಿಯೊಂದನ್ನು ಗುಬರಿ ಹಾಕಿಬಿಡಿ" ಎಂದು ಹೇಳಿ ಅದರ ಮೇಲೆ ಮಕ್ಕರಿಯೊಂದನ್ನು ಗುಬರಿಹಾಕಿಸಿ ಬೆಳಗಿನ ವರಿಗೂ ಅದನ್ನು ಮುಟ್ಟಬಾರದೆಂದು ಕೇಳಿಕೊಂಡು ಸಾಮಾನು ಸರಂಜಾಮುಗಳನ್ನು ತಂದುಕೊಟ್ಟಳು.

ಮುತ್ತಜ್ಜ ಮನದಲ್ಲೇ ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋಯಿ ತಲ್ಲಾ ಎಂದು ಪೇಚಾಡುತ್ತಾ ಪುನಃ ಸ್ನಾನಮಾಡಿ ಒಲೆಯನ್ನು ಹೊತ್ತಿಸಿ ಎಸರಿಟ್ಟು ಅಡಿಗೆಮಾಡುತ್ತಾ ಕುಳಿತು ಬೆಳದಿಂಗಳು ಬಂದ ಮೇಲೆ ಮಾಡಿದ್ದನ್ನು ಬಡಿಸಿಕೊಂಡು ಊಟಮಾಡಿ ಅವರು ಸಿದ್ಧಪಡಿಸಿದ್ದ ಹುಲ್ಲು ಹಾಸಿಗೆಯ ಮೇಲೆ ಮಲಗಿಕೊಂಡ.

ಮಾರನೆಯ ದಿನ ಸೂರ್ಯೋದಯವಾಗುವ ಮೊದಲೇ ಅವರು ಅವನನ್ನು ಎಬ್ಬಿಸಲು ಬಂದಿದ್ದರು. ಇಬ್ಬರೂ ಅವನಿಗೆ ಪ್ರಣಾಮವನ್ನು ಮಾಡಿದ ಮೇಲೆ ಗಂಡನು ತಾನಿನ್ನು ತನ್ನ ಕಾರ್ಯಗಳಿಗೆ ತೆರಳುವೆನೆಂದು ಆ ದಿನವೂ ಅವನು ಅಲ್ಲಿದ್ದು ಅಡಿಗೆಮಾಡಿ ಊಟವನ್ನು ತೀರಿಸಿಕೊಂಡು ತೆರಳಬೇಕೆಂದೂ ದಾರಿಯನ್ನು ತೋರಿಸಬೇಕಾಗಿದ್ದಲ್ಲಿ ತಾನು ಬಂದು ಕರೆದೊಯ್ಯುವೆನೆಂದೂ ಹೇಳಿದನು. ಅದಕ್ಕೆ ಮುತ್ತಜ್ಜ ತಾನು ಈಗಲೇ ಹೊರಟುಬಿಡುವೆನೆಂದು ಹೇಳಿ ಯಾತಕ್ಕೆ ನಿನ್ನೆ ಆ ಅನ್ನವನ್ನು ಭುಂಜಿಸಬೇಡವೆಂದು ಕೇಳಿಕೊಂಡರೆಂದು ಆಕೆಯನ್ನು ಪ್ರಶ್ನಿಸಿದ. ರಾತ್ರಿಯೆಲ್ಲಾ ಅವನಿಗೆ ಅದೇ ಯೋಚನೆಯಿದ್ದಿರಬೇಕು. ಯಾತಕ್ಕಿರಬಹುದೆಂಬ ತರ್ಕ-ವಿತರ್ಕಗಳಲ್ಲಿಯೇ ಅರ್ಧನಿದ್ರೆಯನ್ನು ಕಳೆದುಕೊಂಡಿರಬೇಕು.

ಅವನ ಪ್ರಶ್ನೆಗೆ ಅವರು ನಕ್ಕು, ಬನ್ನಿರೆಂದು ಅವನನ್ನು ಆ ಅನ್ನವಿದ್ದೆಡೆಗೆ ಕರೆದೊಯ್ದು ಗುಬರುಹಾಕಿದ್ದ ಆ ಮಕ್ಕರಿಯನ್ನು ತೆಗೆಯಲು ಹೇಳಿದರು. ಅವನು ಮಕ್ಕರಿಯನ್ನು ಎತ್ತುತ್ತಾನೆ—ಅಲ್ಲಿ ನೋಡಿದರೆ ಆ ಅನ್ನವೆಲ್ಲವೂ ರಕ್ತದಲ್ಲಿ ಕಲಸಿದಂತೆ ಕೆಂಪಗೆ ಮಾಂಸದ ಮುದ್ದೆಯ ಹಾಗೆ ಕಾಣಿಸುತ್ತಿದೆ! ಮುತ್ತಜ್ಜನಿಗೆ ಆಶ್ಚರ್ಯವಾಗಿ ಹೋಯಿತು.

ಆಗ ಆಕೆಯ ಗಂಡ ಹೇಳಿದನಂತೆ "ನನ್ನ ದೃಷ್ಟಿಯು ಬಿದ್ದರೆ ಎಳೆಯ ಪ್ರಾಣಿಗಳು ಜೀವವನ್ನು ಬಿಟ್ಟುಬಿಡುತ್ತವೆ. ಒಂದು ದಿನ ನಾನು ಕೋಪದಲ್ಲಿರುವಾಗ ನಾನೇ ಸಾಕಿದ್ದ ನಾಯಿಯ ಮರಿ ಹತ್ತಿರ ಸುಳಿದು ನನ್ನ ಮೇಲೆ ಹಾರಲು ಬರಲು ನೆಟ್ಟ ದೃಷ್ಟಿಯಿಂದ ನಾನದನ್ನು ನೋಡಿದ್ದಕ್ಕೆ ಅದು ಹಾಗೇ ಮುದುರಿಕೊಂಡು ಸತ್ತುಬಿದ್ದಿತು. ನನ್ನ ದೃಷ್ಟಿ ಅಂತಹುದು-**ರಕ್ತದೃಷ್ಟಿ**" ಎಂದು. ಅದಕ್ಕೆ ಅವಳು "ಇವರದು ರಕ್ತದೃಷ್ಟಿ, ಆದರೆ ತಮ್ಮ ಶಾಂತಮುಖ ಪ್ರಶಾಂತ ದೃಷ್ಟಿ ಕಲ್ಲಿನಂತಿದ್ದ ಇವರ ಹೃದಯವನ್ನು ಬೆಣ್ಣೆಯ ಮುದ್ದೆಯನ್ನಾಗಿ ಮಾಡಿತು. ನಾವೆಷ್ಟು ಋಣಿಗಳೆಂಬುದನ್ನು ಎಷ್ಟು ಹೇಳಿದರೂ ತೀರದು. ಇವರು ಮುಂದೆ ಸನ್ಮಾರ್ಗ ಪ್ರವರ್ತಕರಾಗುವರೆಂದು ಹೇಳಿದ್ದಾರೆ. ತಾವು ಇಲ್ಲೇ ಇದ್ದು ನಮ್ಮ ಸತ್ಕಾರವನ್ನು ಸ್ವೀಕರಿಸಿ ತೆರಳಬೇಕು" ಎಂದು ಕೇಳಿಕೊಂಡಳು.

ಮುತ್ತಜ್ಜ ಆ ದಿನವೂ ಅಲ್ಲಿ ನಿಂತನೋ ಹಾಗೆಯೇ ಮುಂದಕ್ಕೆ ಹೊರಟನೋ—ಅಲ್ಲಿ ಆತನು ಅಂದಿನಿಂದ ಸನ್ಮಾರ್ಗ ಪ್ರವರ್ತಕನಾದನೋ ಇಲ್ಲವೋ—ಅದು ಈಗ ಬೇಡ. ಅವುಗಳನ್ನೆಲ್ಲಾ ಬಿತ್ತರಿಸುತ್ತಾ ಹೋದರೆ ಕತೆಗೆ ಕಾಲಿಲ್ಲದಂತಾಗುತ್ತದೆ. ಸಮಯ ದೊರೆತಾಗ ಅವನು ಬರೆದಿಟ್ಟಿರುವ ಪ್ರತಿಯೊಂದು ಅನುಭವವನ್ನು ವಿಸ್ತರಿಸಿ ಹೇಳುತ್ತೇನೆ.

ಇಲ್ಲಿಯ ವರಿಗೂ ಕತೆ ಎಂಬ ಮಾತನ್ನೇ ಪ್ರಯೋಗಿಸುತ್ತಾ ಬಂದೆನಲ್ಲವೇ? ಕತೆಯೆಂದಿದ್ದರೆ ಇದನ್ನು ಸುಲಭವಾಗಿ ನಂಬಿ ಬಿಡಬಹುದಾಗಿತ್ತು. ಆದರೆ ಇದು ಅವನ ಅನುಭವ. ಎಷ್ಟೋ ಸಂಧರ್ಭಗಳಲ್ಲಿ ಸತ್ಯವೂ ಕಲ್ಪನೆಗಳಿಗಿಂತ ನಂಬಲು ಆಶ್ಚರ್ಯವಾಗಿರುವುದಲ್ಲವೇ? ಹಾಗಾದರೆ ದೃಷ್ಟಿಕಟ್ಟುವ ವಿಷಯದಲ್ಲಿ ವಿಜ್ಞಾನ ಶಾಸ್ತ್ರಜ್ಞರು ಏನೆನ್ನುವರು? "ಕಣ್ಣಿನಿಂದ ಹೊರಟ ಬೆಳಕಿಗೆ ಶಕ್ತಿ ಯುಂಟು. ಪ್ರತಿ ಬೆಳಕಿನ ರಶ್ಮಿಗಳಲ್ಲಿಯೂ ಶಕ್ತಿಯಡಗಿದೆ. ಅದರ ಪರಿಮಾಣದಂತೆ ಬೆಳಕು ಬಿದ್ದ ಕಡೆ ಬದಲಾವಣೆಯನ್ನುಂಟು ಮಾಡುತ್ತದೆ. ಅಲ್ಲಿ ಅವನ ದೃಷ್ಟಿಕಟ್ಟಿ ಹಾಲಿನಲ್ಲಿ ತೋಯ್ದಂತೆ ಬೆಳ್ಳಗಿದ್ದ ಅನ್ನ ರಕ್ತದಲ್ಲಿ ಕಲಸಿದಂತೆ ಕೆಂಪು ವರ್ಣವನ್ನು ತಾಳಿತು. ಇವನ ದೃಷ್ಟಿಯ ಪರಿಣಾಮ ದಿಂದ ಮಾತೆತ್ತಿದರೆ 'ಮಾರೋ' ಎನ್ನುತ್ತಿದ್ದವನು ಬಾಳೆಯ ಹಣ್ಣಿನಂತೆ ಮೃದುಹೃದಯದವನಾದನು" ಎನ್ನುವರಲ್ಲವೇ?

ಇನ್ನು ಅದರ ನಿವಾರಣೆಗೋಸ್ಕರ ಹಿಂದಿನವರು ಆ ಆಚರಣೆಗಳನ್ನು ತಂದರೇ? ಮೊದಲು ಈ ವಿಷಯಗಳಲ್ಲಿ ಟೀಕೆ ಮಾಡುವೆನೆಂದು ಹೇಳಿದ್ದೆ. ಬೇಡ, ಇಲ್ಲಿಗೇ ಸಾಕು ಮಾಡುತ್ತೇನೆ. ಋಷಿಮೂಲ, ಕವಿಮೂಲ ಹುಡುಕ ಬಾರದಂತೆ. ಅದರಂತೆ ಸ್ವರ್ಗಸ್ಥರಾಗಿರುವ ನನ್ನ ಮಾತೋಶ್ರೀಯವರ ಆಚ ರಣೆಯ ವಿಷಯದಲ್ಲಿ, ಅದರಲ್ಲಿಯೂ ಈ ದಿನ ಟೀಕೆ ಮಾಡಲು ಇಷ್ಟವಿಲ್ಲ. ಅವುಗಳ ವಿಷಯದಲ್ಲಿ ತಳೆದಿರುವ ಭಾವಗಳನ್ನು ಮನದಲ್ಲಿಯೇ ಮೆಲಕು ಹಾಕುತ್ತೇನೆ. ನಿಮಗೆ ತೋರಿದಂತೆ ನೀವು ಟೀಕೆ ಮಾಡಬಹುದು. ನನ್ನ ಅಭ್ಯಂತರವಿಲ್ಲ.

---

# ಅಪರಾಧಿ ಯಾರು

ಮಿಸೆಸ್ ಬಿ. ಟಿ. ಜಿ. ಕೃಷ್ಣ ಅವರು

೧

ಅಣ್ಣಾ,

ನಾನು ಬರೆದ ಹಿಂದಿನ ಕಾಗದವು ನಿನಗೆ ತಲಪಿರಬಹುದು. ಆದಕ್ಕೆ ನೀನು ಪ್ರತ್ಯುತ್ತರವನ್ನು ಬರೆಯುವ ಮೊದಲೇ ಈ ಕಾಗದವನ್ನು ನೋಡಿ ನಿನಗೆ ಆಶ್ಚರ್ಯವಾಗಲೂ ಬಹುದು. ಆಶ್ಚರ್ಯದ ವಿಷಯವೇ ಇರುವುದ ರಿಂದ ನಿನಗಿದನ್ನು ಬರೆಯುತ್ತಿರುವೆನು.

ನಮ್ಮ ಮನೆಯ ಪಕ್ಕದ ಮನೆಯಲ್ಲಿದ್ದ ನಾಗೇಶರಾಯರದು ನಿನಗೆ ಗೊತ್ತಿದೆ. ಗೊತ್ತಿದೆ ಎಂದರೆ ನಿನಗವರ ಗುಣಗಳೆಲ್ಲಾ ಗೊತ್ತಿರಲಾರದು. ಈ ಮನೆಗೆ ನಾವು ಮೊದಲು ಬಂದ ಸುರುವಿನಲ್ಲಿ ಅವರನ್ನು ನೋಡಿ 'ಕ್ರೂರಿಯ ಕಣ್ಣುಗಳಂತಿವೆ ರಾಯರ ಕಣ್ಣುಗಳು' ಎಂದು ಹೇಳಿಕೊಂಡು ನಗುತ್ತಿದ್ದುದು ನಿನಗೆ ಮರೆತುಹೋಗಿರಲಾರದು. ಚಿಕ್ಕತನದ ತಂಟೆಯಲ್ಲಿ ತಮಾಷೆಗಾಗಿ ನಾವಾಡಿದ ಮಾತುಗಳು ಈಗ ನಿಜವಾಗಿ ಪರಿಣಮಿಸಿವೆ. ನಾವು ಊಹಿಸಿದುದಕ್ಕಿಂತಲೂ ಹೆಚ್ಚಿನ ನೀಚರವರು. ನಾನೇಕೆ ಅವರ ಗುಣ ವರ್ಣನೆ ಮಾಡುತ್ತಿರುವೆನೆಂದು ನೀನು ಹುಬ್ಬುಗಂಟಿಕ್ಕಬಹುದು. ಸ್ವಲ್ಪ ಸಮಾಧಾನ ತಾಳಿಕೋ; ನಾನೀ ಕಾಗದ ಬರೆಯುತ್ತಿರುವುದೇ ಅವರ ನೀಚ ತನಕ್ಕೆ ಬಲಿಯಾಗಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವ ಪಾರ್ವತಿಗಾಗಿ. ಪಾರ್ವತಿ ಯಾರೆಂದು ಗೊತ್ತೇ? ನಮಗೆ ಕನ್ನಡವನ್ನು ಕಲಿಸುತ್ತಿದ್ದರಲ್ಲ— ಆ ಪಂಡಿತರ ಮಗಳು. ಪಂಡಿತರು ಪಾರ್ವತಿಯನ್ನು ಮದುವೆ ಮಾಡಿದ ವರ್ಷವೇ ಸತ್ತುಹೋದದ್ದು ನಿನಗೆ ತಿಳಿದಿದೆ. ಕಳೆದ ವರ್ಷ ಅವಳ ಪತಿಯೂ ಬೇಕಾದಷ್ಟು ಸಾಲ ಮಾಡಿಟ್ಟು ಅವರ ದಾರಿ ಹಿಡಿದ. ಅಂದಿನಿಂದ ಅನಾಥೆ ಪಾರ್ವತಿ ಅವಳ ಚಿಕ್ಕ ಮಗುವನ್ನು ಸಾಕುವುದಕ್ಕೆ ಬೇರೇನೂ ಉಪಾಯ ತೋರದೆ ನಾಗೇಶರಾಯರ ಮನೆಯಲ್ಲಿ ಅಡಿಗೆಯ ಕೆಲಸಕ್ಕೆ ನಿಂತಳು. ಇದು ಒಂದು ವರ್ಷದ ಹಿಂದಿನ ಮಾತು.

ಮಗುವಿಗೋಸ್ಕರವಾಗಿ ರಾಯರ ಅತ್ಯಾಚಾರವನ್ನು ಸಹಿಸಿಕೊಂಡಿದ್ದ ಪಾರ್ವತಿಯನ್ನು ರಾಯರು ಅಪವಾದದ ಹೊರೆಯೊಡನೆ ಬಹಿಷ್ಕಾರವನ್ನೂ

ಹಾಕಿಸಿ ಮೊನ್ನೆ ಮನೆಯಿಂದ ಹೊರದೂಡಿರುವರು. ನಿನ್ನೆರಾತ್ರಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ಮಗುವಿನೊಡನೆ ಬಾವಿಯ ಹತ್ತಿರ ನಿಂತಿದ್ದಳಂತೆ. ಗೈಬಿ ರಾತ್ರಿ ತಪ್ಪಿಸಿಕೊಂಡು ಹೋದ ದನವನ್ನು ಹಿಡಿದುಕೊಂಡು ಬರುವುದಕ್ಕೆ ಹೋಗಿದ್ದಾಗ ಅವಳನ್ನು ಕಂಡು ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದಿದ್ದಾಳೆ. ಬಲಾತ್ಕಾರದಿಂದ ಗೈಬಿ ಅವಳನ್ನು ಕರೆದುಕೊಂಡು ಬಾರದಿದ್ದರೆ ಈ ದಿನ ತಾಯಿ ಮಗುವಿನ ಶವಗಳನ್ನು ಬಾವಿಯಿಂದ ತೆಗೆಯಬೇಕಾಗುತ್ತಿತ್ತು. ನೋಡಿದೊಡನೆಯೇ ನನಗವಳ ಗುರುತುಸಿಕ್ಕಿತು.

ನನ್ನನ್ನು ನೋಡಿ ಪಾಪ—ಮುಖವನ್ನು ಮುಚ್ಚಿಕೊಂಡು ಅಳತೊಡಗಿದಳು. ರಾತ್ರಿ ನಿದ್ರೆಯೇ ಮಾಡಲಿಲ್ಲ. ಹಸಿದಿದ್ದ ಮಗುವಿಗೆ ಸ್ವಲ್ಪ ಹಾಲು ಕುಡಿಸಿದ್ದಾಳೆ. ಎಷ್ಟು ಹೇಳಿದರೂ ತಾನೇನೂ ಮುಟ್ಟುವುದಿಲ್ಲ ನಿನ್ನೆಯಿಂದಲೂ ಉಪವಾಸ. ನಿನಗಿದೆಲ್ಲಾ ಏಕೆ ಬರೆಯುತ್ತಿರುವೆನೆಂದರೆ ಈ ವಿಷಯದಲ್ಲಿ ನಿನ್ನ ಸಹಾಯವು ಅತ್ಯಗತ್ಯವಾದುದರಿಂದ. ಎಲ್ಲಿ ಹೋಗುವುದು, ಏನು ಮಾಡುವುದು ಎಂದು ಅವಳಿಗೆ ತಿಳಿಯದಾಗಿದೆ. ಜಾತಿಯವರು ಸೇರಿಸುವಂತಿಲ್ಲ. ಇಲ್ಲಿಂದ ನಾವು ಹೊರಗೆ ಕಳುಹಿಸಿದರೆ ಬಾವಿಯೇ ಅವಳಿಗೆ ಗತಿಯಾಗುವುದು. ಏನು ಮಾಡುವಿ ಎಂದು ಕೇಳಿದರೆ "ಇಲ್ಲೇ ಇದ್ದುಬಿಡುತ್ತೇನೆ; ಈ ಮಗುವಿನ ಸಲುವಾಗಿ ನೀವಾದರೂ ಆಶ್ರಯ ಕೊಡಿ" ಎಂದು ಅಳುತ್ತಾಳೆ. ಆದುದರಿಂದ ನೀನು ಇಲ್ಲಿಗೆ ಬಂದರೆ ಅವಳನ್ನು ಶಾಸ್ತ್ರೋಕ್ತವಾಗಿ ನಮ್ಮ ಜಾತಿಗೆ ಸೇರಿಸಿ ಅವಳ ಮುಂದಿನ ಜೀವನಕ್ಕೆ ದಾರಿ ಮಾಡಬಹುದು.

ಅಣ್ಣಾ, ಅವಳ ತಂದೆ ಪಂಡಿತರು ತಮ್ಮ ಜಾತಿಯನ್ನು ಹೊಗಳಿಕೊಳ್ಳುತ್ತಿದ್ದುದು ನಿನಗೆ ಜ್ಞಾಪಕವಿರಬಹುದು. ಅನಾಥೆ ಅಬಲೆಯರು ಅತ್ಯಾಚಾರಿಯ ಅತ್ಯಾಚಾರಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೇ ಅವರ ಜಾತಿಯ ನೀತಿಯಾದರೆ ನಮಗಾ ಜಾತಿಯಲ್ಲಿ ಜನ್ಮ ಕೊಡದಿದ್ದುದಕ್ಕಾಗಿ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ ಇದನ್ನು ನೋಡುವುದಕ್ಕೆ ಪಂಡಿತರು ಇದ್ದಿದ್ದರೆ ಅವರ ಜಾತಿಯ ವಿಷಯದಲ್ಲಿದ್ದ ಭಾವನೆಯನ್ನವರು ಬದಲು ಮಾಡಬೇಕಾಗಿ ಬರುತ್ತಿತ್ತು. ಇರಲಿ; ಈ ಕಾಗದವನ್ನು ನೋಡಿದೊಡನೆ ನೀನು ಬರುವಿಯಾಗಿ ಆಶಿಸುವ,

ನಿನ್ನ ಪ್ರೀತಿಯ ತಂಗಿ,
**ಉನ್ನೀಸಾ.**

೨

ಸೀತಮ್ಮನವರೇ,

ಬಹಳ ದಿನಗಳಿಂದಲೂ ನಿಮಗೆ ಕಾಗದ ಬರೆಯಬೇಕೆಂದು ಆಲೋಚಿಸಿ ಕೊಂಡಿದ್ದೇನೆ. ಬರೆಯುವುದಕ್ಕೆ ಮಾತ್ರ ಸ್ವಲ್ಪವೂ ಸಮಯವಾಗುವುದಿಲ್ಲ ನೋಡಿ; ಈಗಲಾದರೂ ಸಮಯ ಸಿಕ್ಕಿತೇ ಎಂದು ನೀವು ಕೇಳಬಹುದು. ನಿಜವನ್ನು ಹೇಳುವುದಾದರೆ ಈಗಲೂ ಇಲ್ಲ. ಕಮಲೆಗೆ ಜ್ವರ; ಅವಳಿಗೆ ಔಷಧಿ ಕುಡಿಸಿಲ್ಲ. ರಘುವನ್ನು ಇನ್ನೂ ಸ್ನಾನಮಾಡಿಸಿಲ್ಲ. ಅಡಿಗೆಯೂ ಆಗಿಲ್ಲ. ಆದರೂ ನಿಮಗೊಂದು ವಿಶೇಷದ ಸುದ್ದಿ ತಿಳಿಸಿಬಿಡಬೇಕೆಂದು ಕೆಲಸಗಳನ್ನೆಲ್ಲಾ ಬಿಟ್ಟು ಬರೆಯುವುದಕ್ಕೆ ಕೂತಿದ್ದೇನೆ.

ಆ ಪಾರ್ವತಿ ನೋಡಿ—ಬೊಂಬೆಯ ಹಾಗೆ ಅಲಂಕಾರಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ—ಆ ಪಂಡಿತರ ಮಗಳು—ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ ನೋಡಿ—ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಲೆಗೆ ಕಳುಹಿಸುವಾಗಲೇ ನನಗೆ ಗೊತ್ತಿತ್ತು—ಅವಳು ಹೀಗಾಗುವಳೆಂದು! ಇದು ಬೇರೆ ತಮಾಷೆ ನೋಡಿ—ಪಕ್ಕದ ಮನೆ ಲಕ್ಷ್ಮಿ ಇದ್ದಾಳಲ್ಲ—ಈ ಜಾತಿಗೇಡಿ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದವಳು—ಅವಳನ್ನುತ್ತಾಳೆ ಕೇಳಿ—"ಸೇರದೆ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವುದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ ಬಾವಿಯ ದಾರಿ ತೋರಿಸಿದ ನಿಮಗೆ ಅವಳೇನಾದರೇನು?" ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ! ಜಾತಿಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳ ಬೇಕಾಗಿತ್ತಂತೆ! ನೋಡಿದಿರಾ ಹೇಗಿದೆ ಎಂತ!!

ಹೊತ್ತಾಗಿ ಹೋಯಿತು; ಅಡಿಗೆ ಮಾಡಬೇಕು—ಇನ್ನೊಮ್ಮೆ ಬಿಡು ವಿದ್ದಾಗ ಬರೆಯುತ್ತೇನೆ.

ನಿಮ್ಮ

..................

೩

ನಲಿನಿ,

ಬಹಳ ದಿವಸಗಳಾದವು ನಿನ್ನ ಕಾಗದಗಳೊಂದೂ ಬಾರದೆ. ಏಕೆ ಬರೆಯುವುದಿಲ್ಲ? ಕಣ್ಮರೆಯಾದೊಡನೆಯೇ ಮರೆತುಹೋಯಿತೇನು? ಸಹಜ; ಬೇಕಾದಷ್ಟು ಹೊಸ ಗೆಳತಿಯರು ಸಿಕ್ಕಿರುವಾಗ ಹಳೆಯ ಹಳ್ಳಿಯ

ಸ್ನೇಹಿತೆಯೊಬ್ಬಳನ್ನು ಜ್ಞಾಪಿಸಿಕೊಳ್ಳುವುದು ಕಷ್ಟ. ಆದರೆ ನೀನೆಷ್ಟು ನನ್ನನ್ನು ಮರೆಯುವುದಕ್ಕೆ ಯತ್ನಿಸಿದರೂ, ಯತ್ನದಲ್ಲಿ ಸಫಲತೆಯನ್ನು ಪಡೆದರೂ ನಾನು ಮಾತ್ರ ಆಗಾಗ ಕಾಗದಗಳನ್ನು ಬರೆದು ಈ ಪ್ರಪಂಚದಲ್ಲಿ ನಾನೊಬ್ಬಳಿದ್ದೇನೆ ಎಂಬುದನ್ನು ನಿನಗೆ ಜ್ಞಾಪಿಸದೆ ಬಿಡುವುದಿಲ್ಲ. ನನ್ನ ಹತ್ತು ಕಾಗದಗಳಿಗೆ ನೀನು ಒಂದೇ ಒಂದು ಕಾಗದವನ್ನಾದರೂ ಬರೆಯದಿದ್ದರೆ ನಾನೇ ಅಲ್ಲಿಗೆ ಬಂದು ನಿನ್ನ ಅತ್ಯಮೂಲ್ಯವಾದ ಸಮಯವನ್ನು ನನ್ನೊಡನೆ ಮಾತಿಗಾಗಿ ಉಪಯೋಗಿಸಿಕೊಳ್ಳುತ್ತೇನೆ. ಈ ಬೆದರಿಕೆಗೆ ನೀನು ಹೆದರದಿರ ಲಾರೆ. ಏಕೆಂದರೆ ಚಿಕ್ಕವರಾಗಿರುವಾಗ ನಾನು ಕೀಟಲೆ ಮಾಡತೊಡಗಿದರೆ ನೀನೂ ಪಾರ್ವತಿಯೂ ಹೆದರಿ ನಾನು ಕೇಳಿದುದನ್ನು ಕೊಡುತ್ತಿದ್ದಿರಿ.

ನೆನಪಿದೆಯೇ ನಲಿನಿ!—ಆಗಿನ ಆಟ, ತಮಾಷೆ, ಜಗಳ, ನಗು ಎಲ್ಲಾ! ಆಗ ನಾವು ಶಾಲೆಯ ಹಿಂದಿನ ದಿಣ್ಣೆಯ ಮೇಲೆ ಕುಳಿತು ನಮ್ಮ ಮುಂದಿನ ಜೀವನವನ್ನು ಚಿತ್ರಿಸಿಕೊಳ್ಳುತ್ತಿದ್ದುದು! ನಾವು ಕಲ್ಪಿಸಿ, ನೋಡಿ ನಲಿಯು ತ್ತಿದ್ದ ಹಗಲು ಕನಸುಗಳ ಸ್ಮೃತಿ! ಆಗ ನಾವು ಜೀವನವು ಸುಖ ಸಂತೋಷ ಮಯ ಎಂದು ತಿಳಿದಿದ್ದೆವಲ್ಲ ನಲಿನಾ! ಈಗ ನಮ್ಮಲ್ಲೆಷ್ಟು ಜನರು ಆ ಭಾವ ನೆಯನ್ನು ಬದಲಾಯಿಸಬೇಕಾಗಿ ಬಂದಿದೆ ನೋಡು. ನಮ್ಮ ಗೆಳತಿ ಸೀತೆ ಯನ್ನು ನೋಡು—ಅವಳು ಬಯಸುತ್ತಿದ್ದ ಬಯಕೆಗಳೆಲ್ಲಿ? ಈಗವಳನುಭವಿ ಸುತ್ತಿರುವ ಯಾತನೆಗಳೆಲ್ಲಿ! ನಾವೆಂದಾದರೂ ಅವಳ ಗತಿ ಹೀಗಾಗಬಹುದೆಂದು ಎಣಿಸಿದ್ದೆವೇ? ಕ್ಲಾಸಿನಲ್ಲಿ ಹುಚ್ಚಿ ಎಂದು ನಾವು ಹಾಸ್ಯ ಮಾಡುತ್ತಿದ್ದ ಉಮಾ ಈಗ ನೋಡು—ದೊಡ್ಡ ಸಮಾಜ ಸುಧಾರಕಳಾಗಿ ಬಿಟ್ಟಿದ್ದಾಳೆ. ಅವಳ ಮಾತುಗಳನ್ನು ಕೇಳಲು ಜನರು ಹಾತೊರೆಯುವುದನ್ನು ನೋಡಿದರೆ ಅಂದಿನ ಉಮಾ ಇವಳೇನು? ಎನ್ನಿಸುತ್ತದೆ. 'ಮದುವೆಯಾಗುವುದೇ ಇಲ್ಲ' ಎನ್ನು ತ್ತಿದ್ದ ಶಾಂತೆಗೆ ಈಗ ಇಬ್ಬರು ಮಕ್ಕಳಿದ್ದಾರೆ. ಕ್ಲಾಸಿನಲ್ಲಿ ಮೊದಲನೆಯವ ಳಾಗಿ ಬುದ್ಧಿವಂತೆ ಎನ್ನಿಸಿಕೊಳ್ಳುತಿದ್ದ ಕಮಲೆಗೆ ಅತ್ತೆಯ ಮನೆಯಲ್ಲಿ ದಡ್ಡೆ, ಮೂದೇವಿ ಎಂದು ಬಿರುದುಗಳು ಬಂದಿವೆ.

ಇವುಗಳೆಲ್ಲವುಗಳಿಗಿಂತಲೂ ವಿಷಾದಕರವಾದ ಇನ್ನೊಂದು ಸುದ್ದಿ ಇದೆ ನಲಿನಾ—ಅದೂ ನಮ್ಮ ಪ್ರೀತಿಯ ಪಾರ್ವತಿಯ ವಿಷಯ—ಹೇಗದನ್ನು ಬರೆ ಯಲಿ ಹೇಳು?

ಸೌಂದರ್ಯ, ಗುಣ, ನಡತೆಗಳಲ್ಲಿ ನಮ್ಮೆಲ್ಲರ ಮೆಚ್ಚಿಕೆಯನ್ನು ಪಡೆದಿದ್ದ ಪಾರ್ವತಿ ವಿಧವೆಯಾದದ್ದೂ, ನಾಗೇಶರಾಯರ ಮನೆಯಲ್ಲಿ ಕೆಲಸಮಾಡಿಕೊಂಡಿದ್ದುದೂ ನಿನಗೆ ಗೊತ್ತಿದೆ. ಅವಳ ಭವಿಷ್ಯವನ್ನು ನಾವು ಚಿತ್ರಿಸಿದಂತೆ ಇನ್ನಾರದನ್ನು ಚಿತ್ರಿಸಿದ್ದೆವು ನಲಿನಾ! 'ನಮ್ಮ ಸುಂದರಿ, ರಾಜನ ರಾಣಿ ಕಿರೀಟಧಾರಿಣಿ'ಯಾಗುವಳೆಂದು ಹೇಳಿಕೊಂಡು ನಾವು ನಲಿಯುತ್ತಿದ್ದೆವಲ್ಲ! ಅವಳೀಗ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವಳು ನಲಿನಾ—ರಾಯರ ಪಾಪದ ಪ್ರತಿಫಲವಾಗಿ. ಇದೇ ನೋಡು—ನಮ್ಮ ಸಮಾಜದ ನ್ಯಾಯ. ನಮ್ಮ ಜಾತಿ, ನೀತಿ, ಸಮಾಜ ಉತ್ತಮವೆಂದು ಹೇಳಿಕೊಂಡು ನಾವೆಷ್ಟು ಸಲ ಉನ್ನೀಸಳೊಡನೆ ಜಗಳವಾಡಿಲ್ಲ! ಮುಸಲ್ಮಾನ ಜಾತಿಯುವಳೆಂದು ಎಷ್ಟು ಸಾರಿ ಉನ್ನೀಸಳನ್ನು ತಿರಸ್ಕರಿಸಿಲ್ಲ! ಊರು ತುಂಬ ನಮ್ಮವರ ಮನೆಗಳಿದ್ದೂ ಪಾರ್ವತಿಗೆ ಬಾಗಿಲನ್ನು ತೆರೆಯುವರಿರಲಿಲ್ಲ. ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ. ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ. ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು, ನಮ್ಮ ಜಾತಿಯ ದೊಡ್ಡತನದ ಕುರುಹು.

ಉತ್ತಮ, ಅತ್ಯುತ್ತಮ ಜಾತಿಯ ನಮ್ಮವರು ಪಾರ್ವತಿಗೆ ಅವಳ ಮುದ್ದು ಮಗುವಿನೊಡನೆ ಬಾವಿಯ ದಾರಿಯನ್ನು ತೋರಿಸಿಕೊಟ್ಟಾಗ ಕೈಹಿಡಿದು ಆದರದಿಂದ ಆಶ್ರಯವಿತ್ತವಳು ಯಾರು ಗೊತ್ತೇ? ಉನ್ನೀಸ! ಮ್ಲೇಂಛಳೆಂದು ನಾವು ನಕ್ಕು ತಿರಸ್ಕರಿಸುತ್ತಿದ್ದ ಉನ್ನೀಸ! ಈಗ ಹೇಳು ನಲಿನಾ, ಉತ್ತಮರು ಯಾರೆಂದು?

ಊರವರೆಲ್ಲರೂ ಪಾರ್ವತಿಯನ್ನು ಮುಸಲ್ಮಾನ ಜಾತಿಗೆ ಸೇರಿದಳೆಂದು ತಿರಸ್ಕರಿಸುತ್ತಿರುವರು. ಮೊದಲೇ ನಮಗೆ ಅವಳು ಹಾಗಾಗುವಳೆಂದು ಗೊತ್ತಿತ್ತು ಎನ್ನುವರು. ಇಷ್ಟೆಲ್ಲಾ ತಿಳಿದವರು ಅವಳು ಹಾಗಾಗದಿರುವಂತೆ ಮಾಡಲು ಯಾವ ಯತ್ನವನ್ನೂ ಮಾಡಿಲ್ಲವೇಕೆ? ಎಂದು ನಾನು ಕೇಳಿದೆ. ಅದಕ್ಕಾಗಿ ಪಾರ್ವತಿಯ ಪಕ್ಷವೆಂದು ನೀರಿಗೆ ಹೋದಲ್ಲಿ ಎಂದಿನಂತೆ ನೆರೆಕರೆಯವರು ನನ್ನೊಡನೆ ಮಾತಾಡುವುದಿಲ್ಲ.

ಅಪರಾಧಿ ಯಾರು ನಲಿನಾ? ಪಾರ್ವತಿ ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ? ರಾಯರೇ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ?

ಯಾರಾದರೇನು? ಆದುದಾಗಿಬಿಟ್ಟಿತು. ಪಾರ್ವತಿಯಾಗಿ ಅವಳು ಸುಖದಲ್ಲಿರಲಿಲ್ಲ. ರಜಿಯಾ ಆಗಿಯಾದರೂ ಅವಳ ಜೀವನವು ಸುಖಮಯ ವಾಗಲೆಂದು ದೇವರಲ್ಲಿ ನನ್ನ ಬೇಡಿಕೆ.

ಸಾಕು; ಇನ್ನೇನು ಬರೆಯಲಿ—

ನಿನ್ನ
**ಲಕ್ಷ್ಮಿ.**

೪

ತಾರೀಖು 8ರ ಸ್ಥಳಿಕ ಪತ್ರಿಕೆಯೊಂದರಲ್ಲಿ ಹೀಗಿತ್ತು—

ಮೊನ್ನೆ ದಿನ ಹಿಂದೂ-ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕ ರಿಸಿದುದು ಊರಿನ ಹಿಂದೂಗಳಿಗೆಲ್ಲಾ ಬಹಳ ವಿಷಾದವನ್ನುಂಟುಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆ ಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು.

---



**ಅರ್ಗಸ್ ಲಕ್ಷ್ಮಣರಾಯರು, ದಾವಣಗೆರೆ**

'ಹೊಯಿಸಳ' ಎಂಬ ಅಭಿಧಾನದಿಂದಲೇ ಹೆಚ್ಚು
ಶಾಂತಿನಿಕೇತನದ ವಿದ್ಯಾರ್ಥಿಗಳಾಗಿದ್ದರು.
ಹಾಗೂ ಕತೆಗಾರರು. ಕನ್ನಡದಲ್ಲಿ
ಲು ಮೊತ್ತಮೊದಲು ಆರಂಭಿಸಿದ
ು ಬರೆದ 'ಶಾಂತಿನಿಕೇತನದ ಪರಿ
೧ ಬೇಗನೆ ಪ್ರಕಟವಾಗಲಿದೆ.
ಗು' ಎಂಬ ಪುಸ್ತಕಗಳು ಈ
ಕಾಲವು ಅತ್ಯಂತ ಸುಂದರ
ನಾಥರ ಗೀತೆಗಳೊಳಗಿನ
ವೆ. ಎಷ್ಟೋ ಸುಂದರ
ಪ್ರಯೋಗಗಳು, ನವ
ೊರಕುತ್ತವೆ.
ಿನದು. ಇದು ಕನ್ನಡ
, ಒಂದಾಗಿದೆ.

'ಹೊಯಿಸಳರು' ೧

"ಭಯ, ದಿಗಿಲು, ಅಂಜಿಕೆ, ಹೆದರಿಕೆ—ಇವು ಎಲ್ಲವೂ ಒಂದೇ ಭಾವದ ಶಾಖೋಪಶಾಖೆಗಳು. ಯಾವಾಗ್ಗೆ ಮನುಷ್ಯನಲ್ಲಿ ಭಯವು ಹುಟ್ಟಿತೋ ಆಗ್ಗೆ ಮನುಷ್ಯನು ಮೃತನಂತೆ.

"ಭಯೇ ವ್ಯಾಪಿಲೇ ಸರ್ವ ಬ್ರಹ್ಮಾಂಡ ಆಹೇ ।
ಭಯಾತೀತ ತೇ ಸಂತೆ ಆನಂದ ಪಾಹೇ ।"

ಹೀಗೆಂದು ರಾಮ ಸಮರ್ಥರು ಶ್ರೀ ಶಿವಾಜಿಗೆ ಹೇಳಿದ್ದಾರೆ. ಭಯಾತೀತನಾಗಬೇಕು ಆನಂದ ಬರಲು ಬಯಸಿದರೆ!" ಹೀಗೆಲ್ಲ ಹೇಳಿದ ರಾಣೋಜೀರಾಯ. ಸುಂದರ ತರುಣಿ ಆತನ ಸತಿ ಎಲ್ಲಮ್ಮ ಕೇಳಿದಳು. ನೀಳವಾಗಿ ನಿಂತಿದ್ದವಳು ಸರ್ರನೆ ಆತನ ಕಡೆಗೆ ಸರಿದು ಬಂದು ಅವನ ಕೈಲಿದ್ದ ಪುಸ್ತಕವನ್ನು ಕಿತ್ತುಬಿಸಾಟು ಮಲ್ಲಿಗೆಯ ಅಂಟಾಗಿ ಒಲಿದೊಲಿದು ಆತನ ಮೈಗೆಲ್ಲ ಹಬ್ಬಿಕೊಂಡಳು.

"ನೋಡಿ! ನಿಮ್ಮಂಥ ಕೊಲೆ ಘಾತುಕರನ್ನೇ ತಬ್ಬಿಕೊಂಡು ಹಣ್ಣುಮಾಡಿಬಿಟ್ಟೆ—ಕ್ರೂರ ಯುದ್ಧದಲ್ಲಿ! ನನಗೆಲ್ಲಿಯ ಭಯ? ಎಂಥೆಂಥವರ ಎದೆಯಲ್ಲೂ ಭಯಹುಟ್ಟಿಸುವ ಮೃಗರಾಜ ಸಿಂಹನನ್ನು ಬೆನ್ನುತಟ್ಟಿ ಎಬ್ಬಿಸಿ—ಅದು 'ಆಂ' ಎಂದು ಆರ್ಭಟಿಸಿದಾಗ ಅದರ ಬಾಯೊಳಗೆ ಕೈ ಹೊಗಿಸಿ ಅದರ ಹೃದಯವನ್ನು ಕಿತ್ತು ತೆಗೆಯುವ ನಿಮ್ಮಂಥವರನ್ನು ಮಿದುವುಮಾಡುವ ಶಕ್ತಿ ನನಗೆ ಇದೆ. ಭಯವೆಲ್ಲಿಯದು ನನಗೆ? ನಿಮ್ಮನ್ನು ಅಂಜಿಸುವ ಬೆಂಕಿಯನ್ನು ನಾನು ಹೇಗೆ ಇಟ್ಟಾಡಿಸುವೆನು ನೋಡಿರಿ. ಯಾವಾಗ ಏನು, ಹುರಿ–ಕರಿ–ಬೇಯಿಸೆಂದರೆ—ಅವೆಲ್ಲ ತತ್‌ಕ್ಷಣವೇ ಮಾಡುವುದಿಲ್ಲವೆ?—ಆ ಬೆಂಕಿ!—ನನ್ನ ಅಡಿಯಾಳಾಗಿ!"

ಈ ಮಾತಿಗೆ ರಾಣೋಜಿ "ಜಾಣೆಯೇ ಸರಿ ನನ್ನಾಕೆ! ತಬ್ಬಿಕೊಂಡು ತಬ್ಬಿಬ್ಬುಮಾಡಿದೆ. ಫಣಿವೇಣಿಯಿಂದ ಕೈಗಳನ್ನು ಬಿಗಿದುಬಿಟ್ಟೆ. ಈಗ ನೆಟ್ಟ ದಿಟ್ಟಿಯಿಂದ ನನ್ನ ಎದೆಯನ್ನು ಚುಚ್ಚುತಲಿರುವೆ—ಸರಿ, ಎನ್ನು—ಆದರೆ ಹೀಗೇ, ಇಂಥಾದ್ದೇ, ಒಂದು ಸರ್ಪಬಂದಿತು ಎನ್ನೋಣ—ನಿನ್ನ ಮೈಗೆ ಹೀಗೆ ಸುತ್ತಿತು ಎನ್ನೋಣ—ಆಗ?"

ಎಲ್ಲಮ್ಮ "ಮಾಡುವುದೇನು? ನೀವು ಇರುತ್ತೀರಲ್ಲ ಹತ್ತಿರ. ಚಾಕು ಬಿಚ್ಚಿ ಪಡುವಲ ಕಾಯಿ ಹೆಚ್ಚಿದಂತೆ ಹೆಚ್ಚಿ ಬಿಡಿ ಎನ್ನುವೆನು. ನೀವು........"

ರಾಣೋಜಿ "ಆಹಾ, ನಾನಿರಲಿಲ್ಲ ಎಂದುಕೋ"

ಎಲ್ಲಮ್ಮ "ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ ಕಂಡಿರ!"

ರಾಣೋಜಿ "ಮಸಲ, ದೊಡ್ಡ ಆನೆ ಬಂತು! ಸೊಂಡಿಲು ಅಲ್ಲಾಡಿಸುತ್ತ—ಹೆಜ್ಜೆಹೆಜ್ಜೆಗೂ ಭೂಮಿಯನ್ನು ನಡುಗಿಸುತ್ತ—ಬಂದಿತು ಎಂದುಕೋ. ಆಗ್ಗೆ!"

ಎಲ್ಲಮ್ಮ "ಸೊಂಡಿಲ ಒಳಗೆ ಕಟ್ಟಿರುವೆಯಾಗಿ ಹೋಗಿ ಕಚ್ಚುವೆನು. ಆಗ ಎಂತಿದ್ದರೂ ಸತ್ತೇ ಸಾಯುವುದು."

ರಾಣೋಜಿ "ಹೀಗೆಲ್ಲ ಅಡ್ಡಾದಿಡ್ಡಿಯಾಗಿ ಮಾತಾಡಲಿಕ್ಕೇ ಸರಿ. ಎಲ್ಲಿ ಹೇಳು. ಉತ್ತರಕುತ್ತರ ಸರಿಯಾಗಿ ಹೇಳಬೇಕು. ಹೂ!"

"ಹೂಂ ಕೇಳುವಂಥವರಾಗಿ. ಹೆದರುವರಾರು!" ಎಂದು ಉತ್ತರ ಕೊಡಲು ಸಿದ್ಧಳಾದ ಕಾಂತೆಯು, ತನ್ನ ಅರಳೀಪೇಟೆ ಸೀರೆ ನೆರಿಗೆಯನ್ನು ನವಿಲು ಬಾಲದಂತೆ ಕೆದರಿಕೊಂಡು ಕುಳಿತಳು. ಹೇಳಿ ನೇಯಿಸಿಕೊಂಡದ್ದು ಆ ಸೀರೆ. ಬೆಂಗಳೂರಿನದು. ಸೆರಗಿನಲ್ಲಿ ಮೋಡ ಮುಸುಕಿದ ಆಕಾಶ. ಒಡಲೆಲ್ಲ ಜರತಾರಿ ನವಿಲುಕಣ್ಣು. ಯಾವ ಹೆಂಗಸೂ ಎಂದೂ ಉಡದಂಥ ಸೀರೆ.

ರಾಣೋಜಿ ಚಪ್ಪಾಳೆ ತಟ್ಟಿಕೊಂಡು ಕುಣಿದುಬಿಟ್ಟ. "ಯಾಕೇಂದ್ರೆ ಇದೇನು ಕುಣಿತ!" "ಸಿಂಹದ ಮೇಲೆ ನವಿಲು ಕುಳಿತುಬಿಟ್ಟದೆ. ಹಾ, ಹಾಹಾ!" ಎಂದು ಮತ್ತೆ ಕುಣಿದ. ಚಪ್ಪಾಳೆ ತಟ್ಟಿದ. ಎಲ್ಲಮ್ಮ ತಿರುಗಿ ನೋಡಿದಳು. ಹೌಹಾರಿ ಬೆದರಿ ಎದ್ದೋಡಿದಳು. ಸಿಂಹದ ತಲೆಯ ಮೇಲೆ ಕುಳಿತುಬಿಟ್ಟಿದ್ದಳು ಆಕೆ. ರಾಣೋಜಿ ತತ್‌ಕ್ಷಣವೇ ಮೇಜಿನ ಮೇಲಿದ್ದ ಬಂದೂಕನ್ನು ತೆಗೆದು ಕೈಲಿ ಕೊಡಹೋದನು. "ಹಿಡಿ! ಶೂರಾಗ್ರಣೀ, ಇದು ಬಾರುಮಾಡಿದ ಬಂದೂಕು. ಹೊಡೆದು ಕೊಂದುಬಿಡು ಆ ಸಿಂಹವನ್ನು! ಹೀಗೆ ಹಿಡಿ, ಗುರಿ ಇಡು, ಕುದುರೆ ಎಳಿ, ಸುಟ್ಟುಬಿಡು—ಆ ಸಿಂಹವನ್ನು. ಅಬ್ಬಬ್ಬ ಎಷ್ಟೊಂದು ಧೈರ್ಯ ಆ ಕರುಳಿಲ್ಲದ ಸಿಂಹಕ್ಕೆ?"

ಎಲ್ಲಮ್ಮ ಸಿಟ್ಟಾದಳು. ಆ ಸಿಟ್ಟು ಅವಳ ಸೌಂದರ್ಯವನ್ನು ಇನ್ನೂ ಹೆಚ್ಚಿಸಿತು. ಝುರಿಯು ಜಲಪಾತವಾದ ಹಾಗೆ! "ಕರುಳೂ ಇಲ್ಲ, ಎದೆಯೂ

ಇಲ್ಲ. ನೀವು ಇಂಥ ಸತ್ತ ಸಿಂಹಗಳನ್ನೆಲ್ಲ ತಂದಿಟ್ಟು—ನಿಮ್ಮ ಕೋಣೆಯ ಸೌಂದರ್ಯವನ್ನೆಲ್ಲ ಕೊಂದೇ ಬಿಟ್ಟದ್ದೀರಿ. ಇಷ್ಟಕ್ಕೆಲ್ಲ ಹೆದರಲೇಕೆ?" ರಾಣೋಜಿ "ಹೌದೌದು! ನೀನೀಗ ನೋಡು, ಅಂಜಿಲ್ಲ. ನಿನ್ನ ಮೈ ನಡುಗಲಿಲ್ಲ. ಕಣ್ಣುಗಳಲ್ಲಿ ನೀರೂ ಸಹ ತುಂಬಿಲ್ಲ. ಪಾಪ! ಆ ಸಿಂಹವೇ ತಾನೆ, ನಿನ್ನ ಸೋಂಕಿಗೆ ಸತ್ತು ಒಣಗಿ ಚರ್ಮವಾಗಿ ಹೋಗಿಬಿಟ್ಟಿದೆ." ಎಲ್ಲಮ್ಮನೇನೂ ಹೇಳಲಿಲ್ಲ. ಗೇರು ಸೊಪ್ಪೆ ಜಲಪಾತದ ಚಿತ್ರವೊಂದನ್ನು ನೋಡುತ ನಿಂತಳು.

ಮತ್ತೆ ರಾಣೋಜಿಯೇ ಆಕೆಯ ಹತ್ತಿರಕ್ಕೆ ನಡೆದನು. "ಬಾ ಹೆಣ್ಣೆ! ನನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತು. ಹೆಂಗುಸಲ್ಲವೆ ನೀನು? ವೀಣೆ ಹಿಡಿಯುವುದೇ ಹೆಚ್ಚಿನ ಕೆಲಸ ನಿನ್ನದು. ಬಾರಿಸು ನಿನ್ನ ವೀಣೆ. ಭಯ ಭ್ರಾಂತಿ ಹೋಗಲಿ. ಸೆರಗು ಹೊದ್ದಿಸಲಾದರು ಹತ್ತಿರ ಬರಬಹುದೇ ರಾಣಿ ಸಾಹೇಬರೇ! ಚಂಚು! ಇವರಿಗೆ ಸಂಗೀತ ಮಂದಿರದ ದಾರಿ ತೋರಿಸು."

ಎಲ್ಲಮ್ಮ ಕಸರಿಕೊಂಡು ಹಿಂತಿರುಗಿದಳು. "ಸಂಗೀತ ಮಂದಿರವಂತೆ, ನಾಟ್ಯಶಾಲೆಯಾಕಾಗಬಾರದು! ಮೃತ್ಯುವಿಗೆ! ನೆಟ್ಟಗೊಂದು ಅಡುಗೆಮನೆ ಯಿಲ್ಲ ನನ್ನ ಭಾಗ್ಯಕ್ಕೆ ಈ ಕಾಡಲ್ಲಿ! ನಮ್ಮ ದೇಶದ ಗೊಂಡಾರಣ್ಯವೇ ವಾಸಿ. ದೇಶವಲ್ಲದ ದೇಶ! ಕಾಡಲ್ಲದ ಕಾಡು. ಇಂಥಾ ಬಳಿಗೆ ಹೊತ್ತುತಂದಿದ್ದೀರಿ ನನ್ನ. ಸೀತಮ್ಮನವರಿಗಾದರೂ ಇಷ್ಟು ಕಷ್ಟವಿತ್ತೋ ಇಲ್ಲವೋ ಆ ಕಾಡಲ್ಲಿ! ಆ ಲಂಕೆಯಲ್ಲಿ! ಊಳಿಗಕ್ಕೆ ಈ ನೀಗ್ರೋ ರಾಕ್ಷಸರು. ನರಭಕ್ಷಕರು! ಈ ನನ್ನ ಬಾಳಿನ ಬಳಗಕ್ಕೆ ಪೀತಾಂಬರದ ಸಿಂಗವ್ವ, ಬೇಂಗಟೇ ಬೇತಾಳ ಜಿರಾಫೆ, ಕೋಡುಮುಸುಡಿ ಎಮ್ಮೆ. ಓಹೋಹೋ ಏನೂಂತ ಕೊಚ್ಚಿಕೊಳ್ಳುವಿರೀಂದ್ರೇ! ನಿಮ್ಮ ಹೆಮ್ಮೆ ಹಲಸಿನಕಾಯ!"

ಇಷ್ಟೆಂದ ಮೇಲೆ ಸಹ ಕೋಪ ಮಾಡದಿದ್ದರೆ ಅವನೆಂಥಾ ಗಂಡಸು! ರಾಣೋಜಿಗೆ ತನ್ನ ದೇಶದ ನೆನಪು ಬಂತು. ಕಿಟಕಿಯಿಂದಾಚೆ ನೋಡುತ್ತ ನಿಂತ. ಹೇಳಿದ "ನಿನ್ನ ಉಡಿಗೆತೊಡಿಗೆಯ ಅತ್ಯಾಶೆಗಾಗಿಯೇ ಇಲ್ಲಿಗೆ ಬಂದದ್ದು, ಈ ಆಫ್ರಿಕಕ್ಕೆ. ನಿನ್ನ ರತ್ನದ ಕಂಠಿ, ನಿನ್ನ ಬೆಡಗಿನ ಸೀರೆ—ಆ ನಿನ್ನ ಬೆಳ್ಳಿ ಬಂಗಾರವೆಲ್ಲ ಬರುತ್ತಿತ್ತೆ ನಿನ್ನ ದೇಶದಲ್ಲಿದ್ದಿದ್ದರೆ? ಇಂಡಿಯದಲ್ಲಿ? ಕನ್ನಡ ನಾಡಿನಲ್ಲಿ! ಅದೂ ಮೈಸೂರಲ್ಲಿ! ಆ ನೂಕು ನುಗ್ಗಲಲ್ಲಿ! ಆ ಬಡತನದಲ್ಲಿ! ನಡಿ, ವೀಣೆಬಾರಿಸುತ್ತ ಕುಳಿತಿರು—ಊಟದ ಹೊತ್ತಿಗೆ ನಾನೊಂದಿಷ್ಟು ಅಡ್ಡಾಡಿ ಬರುವೆನೆ"ಂದು ಕೈಲಿ ಬಂದೂಕು ಹಿಡಿದು ಹೊರಗೆ ಹೊರಟೇಬಿಟ್ಟನು.

ಮಧ್ಯ ಆಫ್ರಿಕದ ಕಾಡು! ಕಾಡಿನ ನಡುವೆ ರಾಣೋಜಿಯ ಮರಮುಟ್ಟುಗಳ ಬಂಗಲಿ, ಸುತ್ತಣ ಕಾಡು ಕತ್ತರಿಸಿ ಆರು ತಿಂಗಳಾಗಿಲ್ಲ. ಈಗಾಗಲೆ ಬಂಗಲಿಯನ್ನು ಬಳಸಿ ಬಂದಿದೆ ಕಾಡುಪೊದೆ. ಸ್ವಲ್ಪ ದೂರ ಹೋದ ರಾಣೋಜಿಯು ಒಂದು ಮರವನ್ನು ಹತ್ತಿ ಕುಳಿತುಕೊಂಡನು. ಇತ್ತ ಚೇಡನೊಂದು ಪುಟ್ಟ ಹಕ್ಕಿಯನ್ನೇ ಹಿಡಿದು ಹೀರುತಲಿದೆ ರಕ್ತ. ಅತ್ತ ಕೋತಿಯೊಂದು ಬಾಲವನ್ನು ದೊಡ್ಡ ಬಳ್ಳಿಯೊಂದಕ್ಕೆ ಸುತ್ತಿ ಜೋಕಾಲೆಯಾಡುತಲಿದೆ ಅದೋ ಅಲ್ಲಿ ನೀರಿನ ಬಳಿ ಪಟ್ಟೇಕತ್ತೆಗಳು ಹಿಂಡುಹಿಂಡಾಗಿ ಮೇಯುತಲಿವೆ. ಕಣ್ಣಿಗೆ ದುರ್ಬೀನು ಹಿಡಿದು ನೋಡಿದನು—ದೂರದ ಬೆಟ್ಟ—ಅದರ ಇಳಿಜಾರಲ್ಲಿ ನಾಲ್ಕೈದು ಖಡ್ಗಮೃಗಗಳು ಮೇಯುತಲಿವೆ. ಅದರಾಚೆ—ಕೆಸರು—ಅಲ್ಲಿ ನೀರ್ಗುದುರೆಗಳು ಹಾಯಾಗಿ ಮಲಗಿವೆ. ಇತ್ತ ದಕ್ಷಿಣ ದಿಕ್ಕಿನಲ್ಲಿದೆ ಆ ನಗರ. ಅದಕ್ಕೆ ನೀರಿನ ವ್ಯವಸ್ಥೆಮಾಡಲಿಕ್ಕಾಗಿಯೇ ರಾಣೋಜಿಯು ಬಂದುದು. ಇಂಜನಿಯರಾಗಿ ಇಂಡಿಯದಲ್ಲಿ ಇರಲೊಲ್ಲದೆ ಆಫ್ರಿಕಕ್ಕೆ ಬಂದಿದ್ದನು. ಕೆನಿಯಕ್ಕೆ ಬಂದು, ಅಲ್ಲಿಂದ ಲಕ್ಷ್ಮಿಯ ಹೆಜ್ಜೆಯ ಜಾಡನ್ನು ಹಿಡಿದು ಇಲ್ಲಿಗೆ ಬಂದಿದ್ದನು. ಈಗಾಗಲೆ ಒಂದೆರಡು ಬಾರಿಯ ಕೆಲಸಗಳನ್ನು ಮಾಡಿ ಹಣವಂತನಾಗಿರುವನು. ಬೇಟೆಯಲ್ಲಿ ಸಿಕ್ಕಿದ ಮೃಗಗಳ ಚರ್ಮಗಳಿಂದಲೇ ಬಹಳ ಬಂಗಾರ ಬಂದಿದೆ. ಇಲ್ಲಿಯ ಜೀವನವಾಗಲೀ, ಕೆಲಸವಾಗಲೀ ಕಷ್ಟತರವಾಗಿರಲಿಲ್ಲ ರಾಣೋಜಿಗೆ. ಕಷ್ಟವಾಗಿ ತೋರಿದ್ದು ಹೆಂಡತಿಯ ಭಯನಿವಾರಣೆ. ಅವಳು ಧೈರ್ಯ ಕಲಿತು ಕಾಡಿನಲ್ಲಿ ಓರ್ವಳೇ ಇರುವಳಾದರೆ, ಅನುಕೂಲ ಹೆಚ್ಚು. ಇನ್ನು ಮುಂದಿನ ಠಾವಾದರೋ ಸಿಂಹ ಹೆಬ್ಬಾವುಗಳ ಬೀಡು ಎಲ್ಲಮ್ಮ ಧೈರ್ಯ ಕಲಿಯದೆಲೆ ಏನೇನೂ ಆಗುವಂತಿಲ್ಲ. ಅದಕ್ಕಾಗಿ ಎಲ್ಲಾ ಜಾತಿಯ ಮೃಗಗಳ ಚರ್ಮಗಳನ್ನೂ ತಂದು ತನ್ನ ಕೋಣೆಯಲ್ಲಿ ಅಲಂಕಾರವಾಗಿ ಹರಡಿರುವನು. ಇಷ್ಟು ದಿನಗಳಾದರೂ ಕೂಡ ಸತ್ತ ಮೃಗಗಳನ್ನು ಕಣ್ಣೆತ್ತಿ ನೋಡುವ ಧೈರ್ಯ ಸಹ ಎಲ್ಲಮ್ಮನಿಗೆ ಬರಲಿಲ್ಲ. ಮುಂದಿನ್ನೇನು ಉಪಾಯ ಹೂಡಲೆಂದು ಯೋಚಿಸುತ್ತಿರುವಲ್ಲಿ—ಊಟದ ತುತ್ತೂರಿ ಕೇಳಿಬಂತು. ಕೊಂಬೆಯಿಂದ ಕೊಂಬೆಗೆ ಇಳಿದಿಳಿದು ಮನೆಗೆ ಬಂದನು. ಯಾರನ್ನೂ ಮಾತನಾಡಿಸದೆಲೆ ತನ್ನ ಅರ್ಧಾಂಗಿಯನ್ನು ಕಾಣಲು ಭೋಜನ ಶಾಲೆಗೆ ನಡೆದನು. ಅಂದು ಸರಸ ಸಲ್ಲಾಪಗಳಿಲ್ಲದೆಲೆ ಊಟದ ರುಚಿ ಕೆಟ್ಟುಹೋಯಿತು.

೨

ಉರಿ ಬಿಸಿಲಿನ ಹಗಲೊಂದು, ಉದ್ವೇಗದ ರಾತ್ರಿಯೊಂದು ಕಳೆದವು. ಭಾಮಿನಿಗೆ ಭಯನಿವಾರಣೆಯಾಗಲಿಲ್ಲವೆಂದು ಯೋಚನೆಯು ಅತ್ಯುತ್ಕಟ ವಾಯಿತು ರಾಣೋಜಿಗೆ. ಇನ್ನೂ ಮುಂದೆ ಭಯಂಕರವಾದ ಕಾನನಗಳಿಗೆ ಹೋಗಬೇಕು. ನದಿಯ ನೀರು ಎಲ್ಲಿ ಎತ್ತರದಲ್ಲಿದೆಯೋ ಅಲ್ಲಿಂದ ಕಾಲುವೆ ತೋಡುವ ವ್ಯವಸ್ಥೆಮಾಡಬೇಕು. ಆ ಸ್ಥಳಗಳನ್ನು ಹುಡುಕುತ್ತಾ ಇನ್ನೆಲ್ಲೆ ಲ್ಲಿಗೆ ಹೋಗಬೇಕಾದೀತೋ ಬಲ್ಲವರಾರು! ಸುತ್ತ ಪಹರೆಗಳನ್ನು ಹೆಚ್ಚಿ ಸೋಣವೆ ಸತಿಯ ಸೌಖ್ಯಕ್ಕೆ? ಯಾರನ್ನು ನಂಬಿ ಬಿಟ್ಟು ಹೋಗಬೇಕು? ಇಬ್ಬರು ನೀಗ್ರೋಗಳನ್ನು ಕಾಡಿನ ಮಧ್ಯೆ ನಂಬುವುದಕ್ಕೆ ಸಾಧ್ಯವಿಲ್ಲ.

"ಎಲ್ಲಮ್ಮ ನೋಡಲಿಕ್ಕೆ ಬಲು ಸೌಮ್ಯ-ಸುಂದರ, ಮಂದರ-ಮಧುರ, ಕೋಮಲ—ಯಾರ ಬಾಯಿಗಾದರೂ ತುತ್ತಾದಾಳು. ಇಲ್ಲಿ ಯಾಕಾದರೂ ಈಕೆಯನ್ನು ಕರತಂದೆನೋ, ಬಂದೂಕು ಹಿಡಿಯಲಿಕ್ಕೆ ಕೂಡ ಇವಳಿಗೆ ಬರ ಲಿಲ್ಲವಲ್ಲ. ಮುಂದೇನು ಮಾಡಲಿ? ಕೆನಿಯದೇಶದಲ್ಲಿರುವ ನೆಂಟರಲ್ಲಿಗಾದರೂ ಹೋಗೆಂದರೆ ಹೋಗಳಲ್ಲ. ಆಗಲಿ, ಇನ್ನೂ ಮುನ್ನೂ ಪ್ರಯತ್ನಮಾಡಿ ಸತ್ತ ಪ್ರಾಣಿಗಳನ್ನು ತಂದು ಮುಂದಿಟ್ಟು ಆಕೆಗೆ ಭಯ ಹೋಗುವುದೇನೋ ನೋಡುವೆನು. ಮನುಷ್ಯನು ತನ್ನ ಎಚ್ಚರದಲ್ಲಿದ್ದರೆ ದುಷ್ಟ ಜಂತುಗಳೇನು ಮಾಡಿಯಾವು? ಅವುಗಳಿಗೆ ಯಥಾ ಪ್ರಕೃತಿವಿಧಿಯಾದ ಒಂದೊಂದೇ ಮಾರ್ಗ ಗಳು. ನಮಗಾದರೊ ಬುದ್ಧಿ ವಿಕಾಸದ ಹಲವು ಮಾರ್ಗಗಳು. ಜೀವಿಗಳು ಆತ್ಮರಕ್ಷಣೆಗೆ ದುಷ್ಟತನ ತೋರಿಸುವವು—ಮನುಷ್ಯ ಜೀವಿಯು ತನ್ನ ಹಿರೇ ತನವನ್ನು ತೋರಿಸಿಕೊಳ್ಳಬೇಕು. ಈ ಯುದ್ಧದಲ್ಲಿ ಆದಿಯಿಂದಲೂ ಮನುಷ್ಯನೇ ಜಯಿಸಿ ನಿಂತು ಬದುಕಿ ಬಂದವನು. ಎಲ್ಲಮ್ಮನ ಭಯ ನಿವಾರಣೆಗೆ ಉಪಾಯವಿದ್ದೇ ಇದೆ. ಸತ್ತ ಸಿಂಹಗಳನ್ನೂ ಹೆಬ್ಬಾವುಗಳನ್ನೂ ತಂದು ಕೋಣೆಯಲ್ಲಿ ಜೋಡಿಸಿ ಇಡಬೇಕು. ಸತ್ತವನ್ನು ಮುಟ್ಟಿ ಅಭ್ಯಾಸ ವಾದರೆ ಸಾಕು. ಆಕೆಗೆ ಆ ಕೋಣೆಯಲ್ಲಿರುವಷ್ಟು ಧೈರ್ಯ ಬಂದರೆ ಸಾಕು. ಎಲ್ಲಿಯಾದರೂ ಹೋಗಿ ಬರುವ ವರೆಗೆ ಹೆಂಡತಿ ಬದುಕಿರುವಳೆಂದು ಧೈರ್ಯ ದಿಂದಿರಬಹುದು. ಆಳುಗಳು ಯಾರೂ ಆ ಕೋಣೆಗೆ ಬರುವುದಿಲ್ಲ. ಬಲು ಹೆದರುವರು. ಕಾಡಿನಲ್ಲಿ ಆರ್ಭಟಿಸುವ ಮೃಗಗಳಿಗೆ ಅವರು ಹೆದರುವುದಿಲ್ಲ.

ಆದರೆ ಈ ನನ್ನ ಸತ್ತ ಪ್ರಾಣಿಗಳನ್ನು ಕಂಡರೆ ಬಲು ಭಯಪಡುವರು. ನನಗೆ ಅದ್ಭುತವಾದ ಮಂತ್ರ ಶಕ್ತಿಯಿದೆಯೆಂದು ಅವರು ಭಾವಿಸಿರುವರು. ಏನು ಮಾಡಿದರೂ ಒಬ್ಬೊಬ್ಬರೇ ನನ್ನ ಕೋಣೆಗೆ ಇಲ್ಲಿಯವರಾರೂ ಬರುವುದಿಲ್ಲ. ಈ ಭಾಗದಲ್ಲಿ ಎಲ್ಲಮ್ಮನಿಗೆ ಕ್ಷೇಮ. ನಾನಿಲ್ಲದಾಗ ಆಕೆ ಅಲ್ಲಿರುವುದಾದರೆ— ಯಾವದೊಂದು ಭಯವೂ ಇರದು. ಸತ್ತ ಮೃಗಗಳ ಸಂಗಡವಾದರೂ ಆ ಪುಣ್ಯಾಗಿತ್ತಿ ಇರುವುದಾದರೆ ಧೈರ್ಯದಿಂದ ಸುತ್ತುತ್ತ ಹೋಗಬಹುದು" ಎಂದು ಮುಂತಾಗಿ ಅಲೆ ಅಲೆಯಾಗಿ ಆಲೋಚನೆಗಳು ಬಂದುವು.

ರಾತ್ರಿ ಕಳೆಯಿತು; ರಾಣೋಜಿಯ ಮುಖ ಕಳೆಗೂಡಿತು. ನಗುನಗುತ ಎಲ್ಲಮ್ಮನನ್ನು ಎಬ್ಬಿಸಿ 'ಕೋಕೋ' ಮಾಡಹೇಳಿದನು. ಹೊರಗೆ ಹೋಗಿ ನೀಗ್ರೊ ಆಳುಗಳನ್ನೆಲ್ಲ ಸಿದ್ಧವಾಗಿರ ಹೇಳಿದನು. ಗಿಣಿಯ ಬಳಿ ನಿಂತು ಮಾತಾಡಿಸಿದನು. ಉಪ್ಪುಪಕ್ಷಿಯನ್ನು ಎತ್ತಿನಿಲ್ಲಿಸಿದನು—ಅದು ಕೊಕ್ಕು ಬಿಚ್ಚಲು ಅದರ ಬಾಯಿಗೆ ಒಂದು ಪೆಪರ್‌ಮಿಂಟು ಹಾಕಿದನು. ಈ ವೇಳೆಗೆ ನಾಯಿಗಳು ಮೋರೆ ನೋಡಿ ನೆಗೆಯಲಾರಂಭಿಸಿದವು. ಅವುಗಳನ್ನು ಬಿಚ್ಚಿ ಬಿಟ್ಟು ಬೆನ್ನು ತಟ್ಟಿ ಕಳಿಸುವ ಹೊತ್ತಿಗೆ ಚಿಂಪಾಂಸೀ ಹ್ಯಾಟುಗಾಲು ಹಾಕುತ್ತ ಅವನ ಬಳಿಗೆ ಬಂದು ಕೈಕೊಟ್ಟು ನಡುವೇರಿತು. ಕಡೆಗೆ ಬೇರೆ ಮೃಗ ಶಾಬಕ ಗಳನ್ನು ಮಾತನಾಡಿಸಲು ಕೈಸಾಲೆಗೆ ಹೋದನು. ಅಂತು ಆ ದಿನ ಒಂದು ಬಗೆಯ ಆನಂದದಿಂದ ಕಾಡು ತಿರುಗಿಬರಲು ಹೊರಟನು ರಾಣೋಜಿರಾಯ.

ಬಹಳ ಬಿಸಿಲಾಗುತ್ತ ಬಂದಿತು. ಕಾಡಿನಿಂದ ಹವೆಯೇರಲು ಆರಂಭ ವಾಯಿತು. ಕೊಳೆತ ಸೊಪ್ಪುಸದೆಯ ವಾಸನೆ ಅಲ್ಲಲ್ಲಿ ಎದ್ದಿತು. ಎಷ್ಟೋ ಕಡೆ ಆಕಾಶವೂ ಕಾಣದು, ನೆಲವೂ ಕಾಣದು. ಮೇಲೆ ಸೊಪ್ಪು ಹೂ ಹಣ್ಣು ಗಳ ಹಂದರ; ಕೆಳಗೆ ಎಳೆ ಬಳ್ಳಿಗಳ ಪಂಜರ. ಹೂವಿಗೊಂದು ಚಿಟ್ಟೆ, ಎಲೆ ಗೊಂದು ಇರುವೆ, ಕೊಂಬೆಗೊಂದು ಕೋತಿ, ರೆಂಬೆಗೊಂದು ಪಕ್ಷಿ—ಝೇಂ ಯೆಂದು ಶಬ್ದ. ಕಾಲಿಟ್ಟು ತೆಗೆದರೆ ಸೊಳ್ಳೆಗಳು, ನೊಣಗಳು ಎದ್ದು ಹಾರು ವವು. ಮರಗಳ ಮೇಲೆ ಅಲ್ಲೊಂದಿಲ್ಲೊಂದು ಕೊಡಲಿಯ ಗುರುತು ಮಾಡಿ ಕೊಂಡು ಹೊರಟನು. ಬರಬರುತ ಕಾಡು ದಟ್ಟವಾಯಿತು. ಯಾವದು ಬಳ್ಳಿಯೊ ಮತ್ತಾವುದು ಹೆಬ್ಬಾವೊ ತಿಳಿಯಲು ಕಷ್ಟ. ಹಸುರು ಮುಸುಕಿದ ಪಂಕಗಳು ಗಟ್ಟಿ ನೆಲದ ಭ್ರಾಂತಿ ಹುಟ್ಟಿಸುವವು. ದೂರದಿಂದ ಸೊಗಡು

ವಾಸನೆ ಬರುತಲಿದೆ—ಅದು ರಕ್ಕಸ ಕಮಲದ ಕಂಪು. ಮೃಗ-ಪಕ್ಷಿಗಳ ಕಲಕಲದಲ್ಲಿ ತಾನಾಡಿದ್ದು ತನಗೇ ಕೇಳಿಸದು. ಕಾಲಿಟ್ಟು ತೆಗೆದರೆ ಮಂಡಿ ಯುದ್ದದ ದರಗು—ಅದರ ಝುರಝುರ ಶಬ್ದ—ಆ ಶಬ್ದಕ್ಕೆ ಹಲವು ಹದಿನೆಂಟು ಜಾತಿ ಪ್ರಾಣಿಗಳು ಎದ್ದೋಡುವವು. ಸೂರ್ಯನು ನೆತ್ತಿಯ ಮೇಲೆ ಬಂದರೂ ಕೂಡ ಈ ಆಫ್ರಿಕದ ಕಾಡಿನಲ್ಲಿ ಗಾಢಾಂಧಕಾರದ ಭಯಂಕರ ಕನಸು.

ರಾಣೋಜಿಯು ಹಿಂತಿರುಗಿ ಕಣ್ಣಮೇಲೆ ಕಣ್ಣು ಪಹರೆ ಇಟ್ಟು ನಡೆದು ಬಂದನು. ಮನೆಯು ಹತ್ತಿರ ಬಂದಿತು. ದೂರದಲ್ಲಿ ಅತ್ತ ಕಡೆ ಏನೋ ಕಂಡನು. ನಿಂತು ನೋಡಿದನು. ಏನೋ ಯೋಚನೆ ಹೊಳೆಯಿತು. ಮೊಗದಲ್ಲಿ ನಗೆ ಕಂಡಿತು. ಅರ್ಧ ಗಂಟೆಯ ಕಾಲ ನಡೆದಿರಬಹುದು. ಅವನ ಗಮನಕ್ಕೆ ನಡಿಗೆಯೆಂದು ಹೇಳುವುದು ತಾನೆ ಹೇಗೆ? ಯಾಕೆಂದರೆ?—ಹತ್ತಿ, ಇಳಿದು, ಹಾರಿ, ಜಾರಿ ದೂರಸಾಗಬೇಕಾಗಿತ್ತು. ಅಲ್ಲೊಂದು ಮಾರು ದೂರದಲ್ಲಿ ಎರಡುವರೆ ಮಾರು ಉದ್ದದ ಹೆಬ್ಬಾವಿತ್ತು. ಮರದ ಕೊಂಬೆಗೆ ಬಾಲ ಸುತ್ತಿಕೊಂಡು ನೇತಾಡುತ್ತಲಿತ್ತು. ಒಂದೊಂದು ಬಾರಿ ವಲದಾಡಿ ಬಾಯಿ ಕಳೆಯುವುದು. ನಾಲಿಗೆ ಸುಗಿಯುವುದು. ರಾಣೋಜಿಯು ನಿಂತನು, ನೋಡಿದನು, ಹೊಂಚು ಹಾಕಿದನು. ತೊಡೆಯ ಗಾತ್ರಕ್ಕಿತ್ತು. ಮೈಮೇಲೆ ಹಳದಿ ಬಣ್ಣ. ಬೆನ್ನ ಮೇಲೆ ನೀಲಿಯ ಪದ್ಮಗಳು. ಆ ಪದ್ಮದಳಗಳನ್ನು ಕೂಡಿಕೊಂಡು ಹಬ್ಬಿರುವ ಬಂಗಾರದ ಸರಿಗೆಯ ಬಳ್ಳಿ. ನೋಡಿ ಹಲವು ಬಗೆಯ ಆನಂದದ ಯೋಚನೆಗಳು ಅಂಕುರಿಸಿದವು. ಹತ್ತಿರದ ಮರಕ್ಕೆ ಒರಗಿದನು. ಕೋವಿಯನ್ನು ಹಿಡಿದೆತ್ತಿ ಗುರಿಯಿಟ್ಟನು. ತಲೆಹಿಂಭಾಗಕ್ಕೆ ಗಂಟಲ ಬಳಿಗೆ ಹೊಡೆದುಬಿಟ್ಟನು. ಆ ಶಬ್ದವು ನೂರು ಬಾರಿ ಪ್ರತಿಧ್ವನಿತವಾಗಿ ಕಾಡೆಲ್ಲ ನಡುಗಿಸಿತು. ಇತ್ತ ಸರ್ಪವು ಸುರುಳಿಸುರುಳಿಯಾಗಿ, ಮುರಳಿ ಮುರಳಿಯಾಗಿ, ತಿರುವಿ ತಿರುವಿ, ಏರಿ ಇಳಿದು ಕೆಳಗೆ ಬಿದ್ದಿತು. "ಹೆಂಡತಿಯ ಭಯ ಬಿಡಿಸಲು ಇದು ಸಹಕಾರಿಯಾಗಬಹುದು. ಆಳುಗಳಿಗೆ ಭಯ ಹೆಚ್ಚಿಸಲು ಮನೆಯಲ್ಲಿ ಇಡಬಹುದು. ಕಡೆಗೆ ಬೇಕಾದರೆ ಚರ್ಮವನ್ನು ಮಾರಬಹುದು. ಅಥವಾ ಇಂಡಿಯದಲ್ಲಿರುವ ಸ್ನೇಹಿತರಿಗೆ ಕಾಣಿಕೆಯಾಗಿ ಕಳುಹಬಹುದು." ಹೀಗೆಂದು ಭಾವಿಸುವಷ್ಟರಲ್ಲಿ ಒರಗಿದ್ದ ಮರವು ಪಕ್ಕಕ್ಕೆ ಸರಿದ ಹಾಗಾಯಿತು. ತಿರುಗಿ ನೋಡಿ ಗಾಬರಿಯಾದನು. ಆ ಮರಕ್ಕೆ ಸುತ್ತಿ

ಕೊಂಡಿದ್ದ ಇನ್ನೊಂದು ಹೆಬ್ಬಾವಿನ ಮೇಲೆ ಭಾರ ಬಿಟ್ಟು ಒರಗಿ ನಿಂತಿದ್ದನು. ಹಿಂದೆ ಮುಂದೆ ತಿರುಗಿ ನೋಡಿದನು. ಸರ್ಪವು ಯಾವುದೋ ಪ್ರಾಣಿಯನ್ನು ನುಂಗಿ ಮರಕ್ಕೆ ಸುತ್ತಿಕೊಂಡಿದ್ದಿತು. ನಿದ್ದೆಯೋ ಏನೋ ಪಾಪ! ಭೋಜನಾನಂತರ! ಕಣ್ಣು ಮುಚ್ಚಿತ್ತು.

ಸೂರ್ಯನೇನೊ ನಡು ನೆತ್ತಿಯಲ್ಲಿ ನಿಂತಿದ್ದನು. ರಾಣೋಜಿಗೆ ಮನೆಯ ನೆನಪಾಯಿತು. ಸತ್ತ ಹಾವಿನ ಬಾಲವನ್ನು ಕೈಗೆ ಸುತ್ತಿಕೊಂಡು ಹೊರಟನು. ಮತ್ತೆ ನಿಂತನು. ನೆಲದ ಮೇಲೆ ಎಳೆದು ತಲೆಯು ಕೆಟ್ಟುಹೋಗುವುದೆಂದು ಅದರ ಸುತ್ತ ಸೊಪ್ಪು ಸುತ್ತಿದನು—ಮತ್ತೆ ಹೊರಟನು. ಮನೆ ಸೇರುವ ಹೊತ್ತಿಗೆ ಹೊರಗೆ ಯಾರೂ ಇರಲಿಲ್ಲ. ಕಿಟಕಿಯ ಬಳಿಗೆ ಹೋದನು. ಹಾವಿನ ತಲೆಯನ್ನೆತ್ತಿ ಒಳಗೆಸೆದನು. ಕೋಣೆಯೊಳಕ್ಕೆ ಹೋಗಿ ಹಾವನ್ನು ಎಳೆದುಕೊಂಡನು. ಆ ಚಿಕ್ಕ ಕೋಣೆಯಲ್ಲಿ ಆ ಭಾರಿಯ ಘಟಸರ್ಪವು ಇಲ್ಲಿ ಹತ್ತಿ, ಅಲ್ಲಿಳಿದು, ಕೆಳಗೆ ಸುರುಳಿಯಾಗಿ, ಮೇಲೆ ಬಿಲ್ಲಾಗಿ ಸೋಫದ ಮೇಲೆ ಹೊಟ್ಟೆ ಇಟ್ಟು ಪುಟ್ಟ ಮೇಜಿನ ಮೇಲೆ ವಿವೇಕಾನಂದರ ಚಿತ್ರದ ಮುಂದೆ ಹಾಸಿ ಗಾಂಧಿಯವರ ಪ್ರತಿಮೆಯ ಹಿಂದಾಗಿ, ಪುಸ್ತಕ ಬೀರೂಬಳಿ ಬಂದು ಮೇಲೇರಿ ಕನ್ನಡ ಪುಸ್ತಕಗಳು ಇರುವ ಬಳಿ ಬಂದು **"ಯಮುನ ಸೋಲಿ"**ನ ಬಳಿ ಬಾಯಿ ತೆರೆದುಕೊಂಡಿತ್ತು. ಹೀಗೆಲ್ಲ ಅಲಂಕಾರಮಾಡಿ ಅಲ್ಲಿ ನಿಂತು ಇಲ್ಲಿ ನಿಂತು, ಕಿಟಕಿಯ ಪರದೆ ತುಸವಾಗಿ ಎಳೆದು--ಆನಂದದ ಚಿತ್ರವನ್ನು ನೋಡಿ ಹಿಗ್ಗಿ ಬಾಗಿಲೆಳೆದುಕೊಂಡು ಹೊರಟನು. ಇಂಥಾ ಸುಂದರವಾದ ಹಾವು ಎಲ್ಲಿಯೂ ಇದ್ದಿಲ್ಲ—ಮತ್ತೋ ಇದ್ದರೂ ಹೊಡೆದು ತರುವಂಥವರು ಯಾರಿದ್ದಾರೆ! ತಂದರೂ ಹೀಗೆಲ್ಲ ಅಲಂಕಾರವಾಗಿಟ್ಟು ತನ್ನ ಅರ್ಧಾಂಗಿಗೆ ತೋರಿಸು ನಲಿಯುವ ಭಾಗ್ಯ ಎಷ್ಟು ಮಂದಿಗೆ ಒದಗೀತು!

ಊಟವಾಯಿತು. ಮಾತುಕಥೆಯಲ್ಲಿ ಇಂಡಿಯ ಆಫ್ರಿಕಗಳು ಒಂದಕ್ಕೊಂದು ಹೆಣೆದುಕೊಂಡುಬಿಟ್ಟವು. ಮುಳ್ಳೈಯ್ಯನ ಗಿರಿ, ಕಿಲಿಮಾಂಜೀರೋ; ವಿಕ್ಟೋರಿಯಸರಸ್ಸು, ಅಯ್ಯನಕೆರೆ; ತಮ್ಮ ಜನ, ನೀಗ್ರೋ ಜನ ಮುಂತಾದ್ದೆಲ್ಲ ಬಂದು ನಿಂದು ಚಿತ್ರಿತವಾಗಿ, ಅಳಿಸಿಹೋದುವು. ಭೋಜನಸಮಯದ ಈ ಸಲ್ಲಾಪವು ನೀಗ್ರೋ ಚಂಚೂಗೆ ಕೊಂಚವೂ ಅರ್ಥವಾಗಲಿಲ್ಲ. ಹೊಟ್ಟೆ ತುಂಬಿಕೊಂಡರು ಇವರಿಬ್ಬರು ಎಂಬುದು ಮಾತ್ರ ಅರಿವಾಯಿತು.

ಪಂಜರದ ಮೃಗಪಕ್ಷಿಗಳ ಸಂಗಡ ಮಾತನಾಡಿದರು. ಉಷ್ಟ್ರಪಕ್ಷಿಯು ಬಂದು ಎಲ್ಲಮ್ಮನ ತುರುಬಿನ ಹೂವನ್ನು ಕಿತ್ತುಕಿತ್ತು ನುಂಗಿತು. ಕಾಡು ಮನುಷ್ಯ ಚಿಂಪಾಂಸೀ ಬಂದು ಹಕ್ಕಿಯನ್ನು ಓಡಿಸಿ ತಾನು ನಿಂತಿತು ಅವರಿಬ್ಬರ ನಡುವೆ. ಅವರಿಬ್ಬರ ಕೈಗಳನ್ನೂ ತೆಗೆದು ತನ್ನ ಒರಟು ಮುಖಕ್ಕೆ ಒತ್ತಿಕೊಂಡಿತು. ಅವರಿಬ್ಬರೂ ಕುರ್ಚಿಗಳ ಮೇಲೆ ಕುಳಿತುಕೊಂಡರು. ಕಾಡುಮನುಷ್ಯ ಸಡಗರದಿಂದ ಅತ್ತಿತ್ತ ಓಡಾಡಹತ್ತಿತು. ರಾಣೋಜಿಗೆ ಕೋಣೆಯ ನೆನಪು ಬಂತು. ಕಳಿಸಿ ನೋಡೋಣ ಹೆಂಡತಿಯನ್ನು ಆ ಬಳಿಗೆ ಎಂದುಕೊಂಡನು. "ಅದೇನು ಹೊಸ ಯೋಚನೆ" ಎಂದು ಇಂಗಿತವರಿತು ಆಕೆ ಕೇಳಿದಳು. "ಏನೂ ಇಲ್ಲ! ನಿನ್ನ ದನಿಯಲ್ಲಿ ಕನ್ನಡದ ಮೇಲಿನ ಆ ಹೊಸ ಹಾಡನ್ನು ಕೇಳಬೇಕೆನಿಸಹತ್ತಿದೆ—'ಮನವ ತಣಿಸುವ ಮೋಹನ'—ಹೇಳು, ಹೂ!" ಈ ಮಾತಿಗೆ ಎಲ್ಲಮ್ಮ "ನನಗೇನು ಅನ್ನಿಸಿದೆ ಬಲ್ಲಿರಾ? ನಿಮ್ಮ ನಾಲಿಗೆಯಲ್ಲಿ ಒಂದಿಷ್ಟು ಕನ್ನಡ ಓದಿಸಿ ಕೇಳಬೇಕೆಂದು." ರಾಣೋಜಿಗೆ ಅನುಕೂಲವಾಯಿತು—"ಆ ಮೇಲೆ ಹಾಡು ಹೇಳುವಿಯಂತೆ! ನಾನೇ ಮೊದಲು ಓದಿಬಿಡುತ್ತೇನೆ. ತೆಗೆದುಕೊಂಡು ಬಾ. ಹಾಗಾದರೆ ನಮ್ಮ ನಲವಿನ ಮಲೆನಾಡಿನಾತ ಬರೆದ ಪುಸ್ತಕ. ನಿನ್ನಂಥವಳು ಓದಬೇಕಾದ್ದು. ಹೊಸದಾಗಿ ಬಂದಿದೆ—**'ಯಮುನೆ ಸೋಲು'**—ನಾನೇ ಓದಿಹೇಳುವೆ."

"**ತಪಸ್ವಿನೀ!**-ಬೇಡವೋ!" ಎಂದುಕೊಂಡು ಎಲ್ಲಮ್ಮನು ಕೋಣೆಯ ಕಡೆ ನಡೆದಳು. ಜಡೆ ತೂಗಾಡಿತು. ಸೆರಗು ಹಾರಿಹಾರಿತು. ಕೈಬಳೆಗಳು ಥಳಥಳಿಸಿದವು. ಕಾಲುಂಗುರಗಳು ಮಾತಾಡಿದವು. ರಾಣೋಜಿಯು ಆತುರದಿಂದ ಆ ಕಡೆಯೇ ನೋಡುತ ಕುಳಿತನು. ಮರೆಯಾದಳು ಎಲ್ಲಮ್ಮ. ರಾಣೋಜಿಯು ಆಲೈಸುತ್ತ ಕುಳಿತ. ಬಾಗಿಲು ತೆರೆದ ಶಬ್ದ. ಇಷ್ಟು ಹೊತ್ತಿಗೆ ಒಳಕ್ಕೆ ಹೋಗಿರಬಹುದು. ಆಲೈಸಿದ ರಾಣೋಜಿ. ಇನ್ನೇನು ಕಿರುಚಿಕೊಳ್ಳುವಳು. ಆಗ ಕೂಗಿ ಹೇಳಬೇಕು—"ಸತ್ತ ಹಾವೆಂದು"—ಆ ಮೇಲೆ ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು!

ಇಷ್ಟುಹೊತ್ತಿಗೆ ಎಲ್ಲಮ್ಮ ಕಿರುಚಿಕೊಂಡಳು. ಕುಳಿತಲ್ಲಿಂದಲೇ ರಾಣೋಜಿ ಕೂಗಿದನು "ಸತ್ತ ಹಾವು ಕಣೇ ಅದು, ಹೆದರಬೇಡ. ಪುಸ್ತಕವನ್ನು ಬೇಗನೇ ತೆಗೆದುಕೊಂಡು ಬಂದುಬಿಡು." ಇನ್ನೊಮ್ಮೆ ಕೂಗು! ದನಿಯು ಕಠೋರ

ವಾಗಿತ್ತು. ನೆಲದ ಒಡಲಿಂದ ಬಂದಹಾಗಿತ್ತು. "ಸತ್ತ ಹಾವಿಗೆ ಹೆದರುವಿಯಾ! ಅಂಜುಬುರುಕಿ! ನಾನೇ ಬಂದೆ ಬಿಡು" ಹೀಗೆನ್ನುತ್ತ ಹೊರಟನು. ಮತ್ತೆ ಕೂಗು! ಈ ಬಾರಿ ಕುಗ್ಗಿದ ಕಂಠ.ಬಾಗಿಲ ಬಳಿ ಸೇರುವ ಹೊತ್ತಿಗೆ, ಇನ್ನೆರಡು ಮೂರು ಬಾರಿ ದೊಡ್ಡದಾಗಿ ನಿಟ್ಟುಸಿರು ಬಿಟ್ಟ ಶಬ್ದ! ಈ ದಿನ ಬಹಳ ಅಂಜಿ ಬಿಟ್ಟಳೆಂದು ಎರಡು ಬಾಗಿಲೂ ತೆಗೆದನು. ಕಿಟಕಿಗಳನ್ನೆಲ್ಲಾ ತೆರೆದನು. ಹೆಂಡತಿಯ ಸುಳಿವಿಲ್ಲ. ಚಿಂಪಾಂಸೀ ಒಳಗೆ ಬಂತು. ರಾಣೋಜಿಯು ಚಂಚೂ ಕರೆದನು. ಉಳಿದ ಆಳುಗಳೆಲ್ಲರೂ ಓಡಿಬಂದರು. ಮೇಜಿನ ವಸ್ತ್ರ, ಸಿಂಹದ ತೊಗಲು, ಕರಡಿ ಚರ್ಮಗಳೆಲ್ಲವೂ ಸುರುಳಿ ಸುಪ್ಪಟ್ಟೆಯಾಗಿದ್ದವು. ಅಲ್ಲಲ್ಲಿ ರಕ್ತ ಚುಮುಕಿಸಿದ ಹಾಗಿತ್ತು. ಎಲ್ಲಮ್ಮ ಹೊರಗೆ ಹೋಗಿಲ್ಲ! ಒಳಗಂತೂ ಕಾಣಲಿಲ್ಲ! ಕೂಗಿದನು. ಗಾಬರಿಯಾದನು. ಪುಸ್ತಕಗಳನ್ನೆಲ್ಲಾ ಕಿತ್ತಾಡಿದನು. ಬೀರುವನ್ನು ಉರುಡಿಸಿದನು ಬುಡದಲ್ಲೇನೋ ಇತ್ತು. ಒಮ್ಮೆಲೆ ಹಾರಿ ಎಳೆದು ತೆಗೆದನು........ಎಲ್ಲಮ್ಮನ ದೇಹ! ರಕ್ತ ಸಿಕ್ತವಾಗಿದ್ದಿತು. ತಲೆ ಯಾವುದೋ ಮುಖವಾವುದೋ ಕಾಣುವಂತಿರಲಿಲ್ಲ. ಗುರುತು ಕೂಡ ಅಳಿಸಿತ್ತು. ಅಂಥಾ ಅಂದವಾದ ಮೋರೆ ಅವಳದು. ಏನಾಗಿದ್ದೀತು!

* * * * * *

ಕಾಡುಮನುಷ್ಯ ಏನನ್ನೋ ಹಿಡಿದೆಳೆದುಕೊಂಡು ಬಂದಿತು. ಎಳೆಯ ಲಾರದು ಪಾಪ! ಚಂಚೂ ಸಹಾಯಕ್ಕೆ ಹೋದನು. ಬೆಳಕಲ್ಲಿ ನೋಡಿದರೆ— ಎರಡು ಹೆಬ್ಬಾವುಗಳು! ಒಂದಕ್ಕೊಂದು ಹೊಸೆದುಕೊಂಡಿವೆ! ಒಂದಕ್ಕೆ ಜೀವ ವಿದೆ, ಇನ್ನೊಂದಕ್ಕೆ ಜೀವವಿಲ್ಲ. ಜೀವದ ಹಾವು ಸತ್ತ ಹಾವಿನ ಬಾಯೊಳಗೆ ತನ್ನ ಬಾಯಿಟ್ಟುಕೊಂಡಿದೆ! ಕಿತ್ತೆಳೆದರೂ ತೆಗೆಯಲೊಲ್ಲದು. ಅದೇನು ಪ್ರಣಯ! ಹಾವುಗಳಲ್ಲಿ ಕೂಡ! ಕೊಂದ ಹಾವಿನ ಹೆಂಡತಿಯೆ ಅದು! ಪ್ರಕೃತಿ ವೈಚಿತ್ರ್ಯ ಹೇಗಿದೆಯೋ ಬಲ್ಲರಾರು! ಬಣ್ಣಿಸುವರಾರು! ಮನುಜರ ಪ್ರಣಯ ಬರಿಮಾತು. ಪಕ್ಷಿಪ್ರಾಣಿಗಳ ಪ್ರಣಯವೇ ಶ್ರೇಷ್ಠವೆನಿಸದೆ ನಿಮಗೆ!

ಈ ಕಥೆಯನ್ನು ಹೇಳಿದವನು ರಾಣೋಜಿರಾಯ! ನುಡಿನುಡಿಗಳನ್ನು ಕಣ್ಣೀರಲ್ಲಿ ನೆನೆನೆನೆಸಿ ನನ್ನ ಹೃದಯದಲ್ಲಿಟ್ಟನು. ಈಗ ನಮ್ಮ ನಾಡಿನಲ್ಲೇ ನೆಲೆಸಿರುವನು. ವಿದೇಶ ಗಮನ ದ್ರವ್ಯದಾಶೆಗೆ! ಮೃಗ ಚರ್ಮ ಸಂಪಾದನೆ ಭಯ ನಿವಾರಣೆಗೆ! ಅಫ್ರಿಕದಲ್ಲಿ! ಆಯಿತೆ ಭಯನಿವಾರಣೆ?

---



## ಶ್ರೀ ಬಿ. ಅಶ್ವತ್ಥನಾರಾಯಣರಾಯರು, ಬೆಂಗಳೂರು

ಇವರು ತಾತ್ವಿಕರು, ಮನಃಶಾಸ್ತ್ರಜ್ಞರು. ಕಥಾಲೇಖನದ ಮೋರೆಯನ್ನು ಅಳೆದವರು ಹಲ ಕೆಲವು ಚಿಕ್ಕ ಕಥೆಗಳನ್ನು ಬರೆದವರು. ಸಾಹಿತ್ಯದ ಎಲ್ಲಾ ವಿಭಾಗಗಳಲ್ಲಿಯೂ ತುಂಬಾ ಪರಿಶ್ರಮ ಮಾಡಿದವರು. ಜೀವನದ ಆಳವಾದ ಸುಖದುಃಖಗಳ ಚಿತ್ರಣವು ಇವರ ಕತೆಗಳಲ್ಲಿ ಕಂಡು ಬರುವುದು. ಇವರ ಕಥೆಗಳ ಪ್ರತಿಯೊಂದು ಶಬ್ದವೂ ಹೃದಯಕ್ಕೆ ನಾಟಿ ದುಃಖದ ತಂತಿಯನ್ನು ಮಿಡಿಯುವುದು. ಶೈಲಿಯು ಕವಿತಾ ಮಯವಾಗಿದೆ. ಈ ಕತೆಯು ಕೊನೆಯ ವರೆಗೂ ಸಮಸ್ಯೆಯಾಗಿಯೇ ನಿಂತು ಬಿಟ್ಟಿದೆ! ಕಥೆಯನ್ನು ಓದಿ ಮುಗಿಸಿದಮೇಲೆ ಕಥೆಯು ಹೀಗೆ ಮುಗಿದು ಬಿಟ್ಟಿತಲ್ಲ ಎಂದು ಆಶ್ಚರ್ಯವಾಗುವುದು. ಇವರ ಕಥೆಗಳು ಚಿರಕಾಲ ಬಾಳತಕ್ಕವುಗಳು.

# ಸಮಸ್ಯೆ

ಬಿ. ಅಶ್ವತ್ಥನಾರಾಯಣ ರಾಯರು

೧

ರೋಗಿಯ ಕಡೆ ದಿಟ್ಟಿಸಿ ನೋಡಿದೆ. ಸ್ವಲ್ಪ ಸಂದೇಹವಾಯಿತು. ಕೈಯನ್ನು ಮೆಲ್ಲನೆ ತೆಗೆದುಕೊಂಡು ನಾಡಿಯನ್ನು ಹಿಡಿದು ನೋಡಿದೆ. ಸಾವಧಾನವಾಗಿ ಹೊಡೆಯುತ್ತಿತ್ತು. ಆದರೂ ಬಹಳ ಹೊತ್ತಿನವರೆಗೆ ಬದುಕಿರುವ ಸಂಭವವಿರಲಿಲ್ಲ. ಕೈಯನ್ನು ಹಾಗೆಯೇ ಹೊದಿಕೆಯೊಳಗೆ ಸೇರಿಸಿ, ಮಂಚವನ್ನು ಬಿಟ್ಟು ಕಿಟಕಿಯ ಬಳಿ ಬಂದು ನಿಂತೆ.

ಮುಂದೆ ನೋಡಿದರೆ ಕೈದಿಗಳ ಕೊಠಡಿಗಳು, ಹಾಗೂ ಅದಕ್ಕೂ ಮುಂದೆ ತುರಂಗದ ಹೆಬ್ಬಾಗಿಲು. ಒಳಗೆ ಎಲ್ಲೆಡೆಯಲ್ಲಿಯೂ ಅಡಗಿದ ಗುಜುಗುಜು ಶಬ್ದ. ದುಡಿದು ದುಡಿದು ಆಯಾಸಗೊಂಡಿದ್ದ ಕೈದಿಗಳು ನಿದ್ರಿಸಲು ಯತ್ನಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಎಲ್ಲ ಕಟ್ಟಡಗಳನ್ನೂ ಆವರಿಸಿರುವ ಗೋಡೆಯು ನಾಲ್ಕು ಕಡೆಗಳಲ್ಲಿಯೂ ಎತ್ತರವಾಗಿ ಎದ್ದಿದ್ದಿತು. ಹೊರಗೆ ಬಹು ಸ್ವಲ್ಪ ದೂರದಲ್ಲಿ ವಿಸ್ತಾರವಾದ, ಅನಂತವಾದ ಗಭೀರ ಸಾಗರ. ಎಲ್ಲೆಯಿಲ್ಲದ ನೀಲ ಜಲರಾಶಿ. ವಾಯುವಿನೊಡನೆ ವಿಹರಿಸುತ್ತಿರುವ, ಶೃಂಖಲಾಬದ್ಧವಲ್ಲದ ಜಲಧಿ. ಒಳಗೆ ಸಮಾಜ ಬಾಹಿರರಾದ, ಬಂದಿಗಳಾದ ನಾವು.

ಪುನಃ ಮಂಚದ ಬಳಿ ಬಂದು ಕುಳಿತೆ. ಬೆಳಿಗ್ಗೆ ಜೇಲಿನ ಡಾಕ್ಟರು ಹೇಳಿದ್ದುದು ಜ್ಞಾಪಕಕ್ಕೆ ಬಂದಿತು. ಅವರು ಹೇಳಿದ್ದರು—ರೋಗಿಯು ರಾತ್ರಿಯ ವರೆಗೂ ಉಳಿಯುವುದಿಲ್ಲವೆಂದು. ಆತನ ಸದೃಢವಾದ ದೇಹದಲ್ಲಿ ಶಕ್ತಿಯಿದ್ದರೂ ರೋಗದಿಂದ ಹೊರಬಿದ್ದು ಆರೋಗ್ಯದಿಂದಿರಬೇಕೆಂಬ ಆಶೆಯು ಇರಲಿಲ್ಲವೆಂದು ಅವರ ಅಭಿಪ್ರಾಯ. ಅವರು ಅವರ ಶಕ್ತಿಮೀರಿ ಯತ್ನ ಮಾಡಿದ್ದರು. ಆದರೆ ಮನುಷ್ಯನು ಮನುಷ್ಯನಿಗೆ ತೋರುವ ಕಠೋರ ಭಾವವನ್ನು ಹೊರದೂಡಲು ಅವರ ವೈದ್ಯಕ್ಕೆ ಹೊರಗಾದುದು. ಆದರ ಪರಿಚಯವು ಅವರಿಗಿರಲಿಲ್ಲ.

ರೋಗಿಯ ಬಳಿ ಕುಳಿತಿದ್ದಂತೆ ಆತನು ಒಂದೆರೆಡು ದಿನಗಳ ಹಿಂದೆ ಹೇಳಿದ್ದುದು ನೆನಪಿಗೆ ಬಂದಿತು. ಆತನ ಜೀವಿತದ ಕಥಾನಕವು ನನ್ನ ಚಿತ್ತದ

ಮುಂದೆ ಮೆರವಣಿಗೆಯಂತೆ ಹಾಯತೊಡಗಿತು. ಆತನ ಮಾತುಕತೆಗಳು ಒಂದೊಂದಾಗಿ ನೆನಪಿಗೆ ಬಂದವು.

೨

"—ರಾಯರೇ, ಅನೇಕ ಜನರು ಜೀವನಸಮಸ್ಯೆಗೆ ಅರ್ಥವಿದೆಯೆಂದು, ವೃತ್ತಿಯುಂಟೆಂದು ಹೇಳುತ್ತಾರೆ. ಸರಿ, ಅವರ ದೃಷ್ಟಿಯಲ್ಲಿ, ಸಂಕುಚಿತ ನೋಟದಲ್ಲಿ ಇದು ಯೋಗ್ಯವಾದುದು. ನೀವು ರಾಜಕೀಯ ಕೈದಿಗಳು, ಆದರೆ ನಾನು—ಸಮಾಜದಿಂದ ಶಿಕ್ಷೆಗೆ ಗುರಿಮಾಡಲ್ಪಟ್ಟವನು. ನಾನು ಹೊರಗಿದ್ದರೆ ಸಮಾಜಕ್ಕೆ ಕೇಡಾಗಬಹುದೆಂದು ಅದರ ಭಾವನೆ; ನಂಬುಗೆ.

ಪಿಯರ್ಸ್‌ನು ಒಂದೆಡೆಯಲ್ಲಿ ಹೀಗೆ ಹೇಳುತ್ತಾನೆ—An idea which is not a guide to some action, which does not make a difference to the ultimate behaviour of things or persons is, strictly speaking, meaningless" (ಕ್ರಿಯೆಗೆ ದಾರಿ ತೋರದೆಯೂ, ಜನರ ಅಥವಾ ವಸ್ತುಗಳ ಅಂತಿಮ ನಡತೆಗೆ ವಿಭೇದವನ್ನು ತೋರದೆಯೂ ಇರುವ ಭಾವವು ಅರ್ಥರಹಿತವಾದುದು.) ಇದನ್ನು ಅವಲಂಬಿಸಿಯೇ ಡಿವೆ, ಜೇಮ್ಸ್, ರಾಯಿಸ್ ಮೊದಲಾದ ವಿದ್ವಾಂಸರು ತಮ್ಮ ಉದ್ಗ್ರಂಥಗಳನ್ನು ಬರೆದಿರುವರು. ಆದರೆ ಅದೇ ಪಿಯರ್ಸ್‌ನು ಹೇಳುತ್ತಿದ್ದನು—The chance aspects of life, its haphazardness and unpredictability are what we must accept as brute ultimate fact; the orderly and necessary aspects are what we must explain. (ಜೀವನದ ಅನಿರೀಕ್ಷಿತ ಸಂಘಟನೆಗಳು, ಅವುಗಳ ಅವ್ಯವಸ್ಥೆಗಳನ್ನು ಅಂತಿಮ ವಿಷಯಗಳೆಂದು ನಾವು ಒಪ್ಪಲೇಬೇಕಾಗುತ್ತದೆ. ಆದರೆ ವ್ಯವಸ್ಥಿತ ಮತ್ತು ಆವಶ್ಯಕ ಸಂಘಟನೆಗಳನ್ನು ನಾವು ವಿಚಾರದೃಷ್ಟಿಯಿಂದ ವಿವರಿಸಬೇಕಾಗುತ್ತದೆ.)

ಇದರಲ್ಲಿ ಅವನು ಎರಡನೆಯದನ್ನು ಒಪ್ಪಿಕೊಂಡ. ಮೊದಲನೆಯದು ಅವನಿಗೆ ಸರಿಯಾಗಿ ಅರ್ಥವಾಗಿಲ್ಲ. ಸರಣಿಯಂತೆ ಜೋಡಣೆಯಲ್ಲಿ ಬರುವ ಸಂಘಟನೆಗಳು, ಹಠಾತ್ತಾಗಿ ಆಗಿಹೋಗುವ ಕಾರ್ಯಗಳು, ಅರ್ಥವನ್ನು ಊಹಿಸಲಾಗದ ಕೆಲಸಗಳು—ಇವುಗಳೆಲ್ಲದರ ಹೊಂದಣಿಯೇ ಮಾನವನ

ಜೀವಿತದ ದಿನಗಳು. ಇದನ್ನು ಮರೆಯಲಾಗುವುದಿಲ್ಲ. ನಿಮ್ಮ ಜೀವಿತವನ್ನು ಪರೀಕ್ಷಿಸಿ ನೋಡಿ. ನನ್ನ ಜೀವಿತವನ್ನೂ ನೋಡಿ. ಇದರ ಪರಿಚಯವಾಗುವುದು. ಸಂಗಡಲೇ ಜೇಮ್ಸನ "ಇನ್ನೂ ಪರಿಪಕ್ವವಾಗುತ್ತಿರುವ ಜಗತ್ತೆ"ಂಬ ತತ್ವದ ಅರ್ಥವಾಗುವುದು. ಬಹು ಮಟ್ಟಿಗೆ ಭೂತಕಾಲವು ವರ್ತಮಾನದಲ್ಲಿ ಏನು ಆಗಬಹುದೆಂದು ಊಹಿಸುತ್ತದೆ. ಹೀಗೆಯೇ ಆಗುವುದೆಂದು ನಿಶ್ಚಿತ ಮಾಡಿ ಹೇಳಲಾಗುವುದಿಲ್ಲ. ಅದರಿಂದಲೆ ದಾರ್ಶನಿಕರು ಮಾನವನಿಗೆ ಕರ್ತವ್ಯದ, ಕರ್ಮದ ಸ್ವಾತಂತ್ರ್ಯವುಂಟೆಂದು ಹೇಳುವರು.

ಆದರೆ ಇಷ್ಟೆಲ್ಲ ನಮ್ಮ ಸಮಾಜಕ್ಕೆ ತಿಳಿಯದು. ಅದರ ಕಟ್ಟಳೆಗಳನ್ನು ಬರೆಯುವವರಿಗೆ ಮೊದಲೇ ತಿಳಿಯದು. ಜೀವಿತದ ಉತ್ಕಂಠಿತವಾದ ದಾಹದ ಅನುಭವವು ಅವರಿಗಿಲ್ಲ. ಇವುಗಳೆಲ್ಲದರ ಪರಿಣಾಮವೇ ನಮ್ಮ ಕುಸಿದು ಬಿದ್ದಿರುವ ಇಂದಿನ ಜೀವನ.

ನೀವು ಅಚ್ಚರಿಪಡಬಹುದು—ಕೈದಿಗೆ ಇಷ್ಟೊಂದು ತತ್ವಗಳ, ಶಾಸ್ತ್ರಗಳ ಅರ್ಥವು, ದರ್ಶನಗಳ ತಳಹದಿಯು ಹೇಗೆ ತಿಳಿದಿದೆಯೆಂದು. ನಾನು ಹಾರ್ವರ್ಡ್ ವಿಶ್ವವಿದ್ಯಾಲಯದ "ಡಾಕ್ಟರೇಟ್" (Doctorate) ಪಡೆದವನು.

ನಮ್ಮ ತಂದೆ ತಾಯಿಗಳು ಊರು ಬಿಟ್ಟು ನನ್ನ ವಿದ್ಯಾಭ್ಯಾಸಕ್ಕೆಂದು ಧಾರವಾಡದಲ್ಲಿ ಬಂದು ನೆಲೆಸಿದರು. ನಮ್ಮ ಮನೆ....ಕಡೆಯಲ್ಲಿ. ಆಗ ನನಗೆ ಸುಮಾರು ಹನ್ನೆರಡು ವರ್ಷ ವಯಸ್ಸು.

ನಮ್ಮ ಮಗ್ಗಲ ಮನೆಯಲ್ಲಿ ಯಾರೋ ಒಬ್ಬರು ಸಾರಸ್ವತರಿದ್ದರು. ಅವರಿಗೆ ಒಬ್ಬ ಮಗಳಿದ್ದಳು. ಅವಳ ಹೆಸರು ಶಾರದೆಯೆಂದು.

ಶಾರದೆಯೂ ನಾನೂ ಕೂಡಿ ಆಡಿ ಬಳೆದೆವು: ಆಗ ನಮಗೆ ಪ್ರಪಂಚದ ಜ್ಞಾನವಿರಲಿಲ್ಲ. ಜೀವನದ ಉದ್ದೇಶಗಳಾದರೂ ಎರಡೇ—ಶಾಲೆಗೆ ಹೋಗುವುದು; ಮನೆಗೆ ಬಂದು ಆಡುವುದು.

ದಿನಗಳು ಕಳೆದು ನನಗೆ ಹದಿನೆಂಟು ವರ್ಷಗಳು ತುಂಬಿದವು. ಶಾರದೆಗೆ ಸುಮಾರು ಹನ್ನೆರಡು ಹದಿಮೂರು ಆಗಿರಬಹುದು. ಸ್ವಭಾವಕ್ಕೆ ಅನುಸರಿಸಿ ನಮ್ಮ ಜೀವನದಲ್ಲಿ ಬದಲಾವಣೆಯಾಗುತ್ತ ಬಂದಿತು. ಮೊದಲಿನ ವರ್ತನೆಯಲ್ಲಿ ರುಚಿ ಬಾರದೆ ನಮ್ಮ ನಡೆವಳಿಕೆಯಲ್ಲಿ ಬರಬರುತ್ತ ಬದಲಾವಣೆಯಾಗುತ್ತ ಬಂದಿತು. ಈ ವ್ಯತ್ಯಾಸವು ಸಹಜವಾಗಿ ನಮ್ಮಿಬ್ಬರಿಗೂ

ಗೋಚರವಾಯಿತು. ಮೊದಮೊದಲು ನಮ್ಮ ಮನೆಯುವರುಗಳಿಗೆ ಇದು ತಿಳಿಯಬರಲಿಲ್ಲ.

ಇದೇ ರೀತಿಯಲ್ಲಿ ಇನ್ನೂ ನಾಲ್ಕು ವರ್ಷಗಳು ಕಳೆದುಹೋದವು. ಆಗ ನಾನು ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದೆ. ನನ್ನ ಮುಂದಿನ ಮಾರ್ಗ ವನ್ನು ಆರಿಸಬೇಕಾಗಿತ್ತು. ಆಗ ಶಾರದೆಗೆ ಏರಿಕೆಯ ವಯಸ್ಸು. ನಮ್ಮ ಪ್ರೇಮದ ಎಲ್ಲೆಯನ್ನು ನಾವೇ ತಿಳಿಯದವರಾಗಿದ್ದೆವು.

ನನ್ನ ಮುಂದಿನ ಮಾರ್ಗವು ನಮ್ಮ ತಂದೆಯವರಿಂದ ನಿಶ್ಚಿತವಾಯಿತು. ಅಮೇರಿಕಾಕ್ಕೆ ಹೋಗಿ ದರ್ಶನಶಾಸ್ತ್ರಗಳನ್ನು ವ್ಯಾಸಂಗ ಮಾಡಬೇಕೆಂದು ಗೊತ್ತಾಯಿತು. ಆಗ ನನ್ನ ಮನಸ್ಸಿನಲ್ಲಿ ಎರಡು ವಿಧವಾದ ಆಶೆಗಳು— ಹೊರಗೆ ಹೋಗಿ ವಿದ್ಯೆಯನ್ನು ಕಲಿತುಬಂದು ಗಣ್ಯನಾಗಬೇಕು; ಶಾರದೆಯಲ್ಲಿ ಬಲವಾದ ಅನುರಾಗ.

ಇವೆರಡನ್ನೂ ಹೇಗೆ ಒಟ್ಟುಗೂಡಿಸುವುದೆಂದು ತಿಳಿಯದೇ ಶಾರದೆ ಯನ್ನೇ ಕೇಳಿದೆ. ಅವಳು ಹೋಗಿ ಬಾರೆಂದು ಸಲಹೆಗೊಟ್ಟಳು. ನನಗಾಗಿ ಅವಿವಾಹಿತಳಾಗಿ ಕಾದಿರುವೆನೆಂದು ವಚನಗೊಟ್ಟಳು. ಈ ವಾಗ್ದಾನದಲ್ಲಿ ನಾನು ಭರವಸೆಯನ್ನಿಟ್ಟೆ. ಅವರಲ್ಲಿ ಕೆಲವು ವೇಳೆಗಳಲ್ಲಿ ಪ್ರೌಢವಿವಾಹವಾಗು ತ್ತಿದ್ದುದು ನನಗೆ ತಿಳಿದಿತ್ತು. ನಾನು ಎಲ್ಲರ ಅಪ್ಪಣೆಯನ್ನು ಪಡೆದು, ಅವಳ ಅನುಮತಿಯನ್ನು ಹೊಂದಿ ಪ್ರಯಾಣವನ್ನು ಬೆಳೆಸಿದೆ.

* * * * * *

ಮೂರು ವರ್ಷಗಳನ್ನು ಅಮೇರಿಕೆಯಲ್ಲಿ ಕಳೆದು ಪುನಃ ಸ್ವದೇಶಕ್ಕೆ ಮರಳಿ ಬಂದೆ. ಆಗ ನನಗೆ ಹಿಡಿಸಲಾರದಷ್ಟು ಆನಂದ. ಎರಡು ವಿಶ್ವ ವಿದ್ಯಾಲಯದವರು ನನ್ನ ಪಾಂಡಿತ್ಯಕ್ಕೆ ಮೆಚ್ಚಿ ಪದವಿಗಳನ್ನು ಪಾಲಿಸಿದ್ದರು. ಸರಕಾರದವರು ಕೆಲಸವನ್ನು ಕೊಡುತ್ತೇವೆಂದು ಬರೆದಿದ್ದರು. ಜೀವನವು ಕವಿಯ ಕನಸಿನಂತೆ ಮೃದು ಮಧುರ ಸ್ವಪ್ನವಾಗಿತ್ತು. ಯಾವುದಕ್ಕೂ ನನಗೆ ಕೊರತೆಯಿರಲಿಲ್ಲ. ನನ್ನ ಬಯಕೆಗಳೆಲ್ಲವೂ ನನ್ನ ಕೈಗೂಡಿದವೆಂದು ನನ್ನ ಬಲವತ್ತರವಾದ ಆಶೆ.

ಊರಿಗೆ ಬಂದವನು ಎಲ್ಲರನ್ನೂ ಹೋಗಿ ನೋಡಿದೆ. ಕೊನೆಗೆ ಸಂಜೆಯ ವೇಳೆಯಲ್ಲಿ ಶಾರದೆಯನ್ನು ನೋಡಬೇಕೆಂದು ಅವರ ಮನೆಗೆ ಹೋದೆ.

ಮನೆಯಲ್ಲಿ ಅವರ ತಾಯಿಯಿದ್ದಳು. ಕುಶಲವಾರ್ತೆಯನ್ನು ಕೇಳಿದಳು. ಸ್ವಲ್ಪ ಕಾಲ ಕಳೆಯಿತು. ಶಾರದೆಯ ತಂದೆಯೂ ಮನೆಗೆ ಬಂದನು. ಆದರೆ ಶಾರದೆಯ ಸುಳಿವಿಲ್ಲ. ಕೊನೆಗೆ ಬಾಯಿ ಬಿಟ್ಟು ಕೇಳಿದೆ. ಬಂದ ಉತ್ತರ ದಿಂದ ನನ್ನ ತಲೆಯ ಮೇಲೆ ಸಿಡಿಲು ಬಿದ್ದಂತೆ ಆಯಿತು.

ಶಾರದೆಗೆ ನಮ್ಮ ನೆರೆಯವನಾದ ಮಾಧವನೊಂದಿಗೆ ಮದುವೆಯಾಯಿ ತೆಂದೂ ಈಗವಳು ಕಾ....ದಲ್ಲಿ ಗಂಡನೊಂದಿಗೆ ಇದ್ದಾಳೆಂದೂ ತಿಳಿದುಬಂದಿತು.

ಆ ಮೇಲೆ ಸ್ವಲ್ಪ ಹೊತ್ತು ಅಲ್ಲಿಯೇ ಇದ್ದೆ. ಏನು ಮಾತನಾಡಿದೆನೊ ಅದು ನನಗೆ ನೆನಪಿಲ್ಲ. ಮನೆಗೆ ಬಂದು ಯೋಚನೆಮಾಡ ತೊಡಗಿದೆ. ರಾತ್ರಿ ಸುಮಾರು ಹತ್ತು ಗಂಟೆಗೆ ನಮ್ಮ ತಾಯಿಯು ನನ್ನ ಕೊಠಡಿಯೊಳಕ್ಕೆ ಬಂದರು.

ಅವರಿಂದ ಎಲ್ಲವೂ ತಿಳಿಯಿತು. ಅವರಿಗೆ ನಮ್ಮ ಪ್ರೇಮ ಕತೆಯ ಪರಿಚಯವಿತ್ತೆಂದು ಅರಿವಾಯಿತು. ಜಾತಿಯ ವ್ಯತ್ಯಾಸದಿಂದ ಮದುವೆಯ ಪ್ರಸ್ತಾಪವು ಸಾಧ್ಯವಾಗಲಿಲ್ಲವೆಂದು ಹೇಳಿದರು. ನಾವು ಬ್ರಾಹ್ಮಣರು; ಅದರಲ್ಲಿಯೂ ವೀರ ವೈಷ್ಣವರು.

ನಾನು ಏನೂ ಮಾತನಾಡಲಿಲ್ಲ. ಸುಮ್ಮನೆ ಎಲ್ಲವನ್ನೂ ಕೇಳಿದೆ. ಆದರೆ ಹೃದಯದಲ್ಲಿ ದಾರುಣವಾದ, ಸಹಿಸಲಾರದ ನೋವು.

ರಾತ್ರಿ ನಿದ್ದೆ ಬರಲಿಲ್ಲ. ಮನಸ್ಸಿನಲ್ಲಿ ಗೊಂದಲ. ನಾನು, ಸಮಾಜ ಮತ್ತು ಶಾರದೆ. ಈ ಮೂವರ ಪರಸ್ಪರ ಸಂಬಂಧದ ಬಗ್ಗೆ ವಿಚಾರಮಾಡಿದೆ. ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಜೀವನ ಸಮಸ್ಯೆಯ ಕೋನದಿಂದ ವಿಚಾರಮಾಡಿದೆ. ಸರಿಯಾದ ಮಾರ್ಗವು ಗೋಚರವಾಗಲಿಲ್ಲ. ದಾರ್ಶನಿಕರು ಹೇಳುವಂತೆ ವ್ಯಕ್ತಿ ಸ್ವಾತ್ರಂತ್ರ್ಯವು ಇದ್ದರೆ, ಸಮಾಜವು ನಮ್ಮಿಬ್ಬರ ನಡುವೆ ಏಕೆ ತಲೆ ಹಾಕಬೇಕು? ಅದಕ್ಕೆ ಹಕ್ಕು ಇರಲಿಲ್ಲ. ಆದರೂ ನಡುವೆ ಬಂದು ನಮ್ಮ ಜೀವನವನ್ನು ಹಾಳುಮಾಡಿತ್ತು. ಭಾವನೆಯ ಅರ್ಥವು ಸಮಾಜದ ತಳಹದಿಯೆಂದು ನಂಬುವರು! ಎಲ್ಲವೂ ಸುಳ್ಳು. ಮಾನವನ ಮೂರ್ಖ ಪದ್ಧತಿಯ ಸರಳ ರೇಖೆಯು ನಮ್ಮೆಲ್ಲರ ಮೈಮೇಲೆ ಹಾದು ನಮ್ಮನ್ನು ಕರ್ಮಠರನ್ನಾಗಿ ಮಾಡುವುದು.

ಒಂದು ವಾರವನ್ನು ಹಾಗೂ ಹೀಗೂ ಕಳೆದೆ. ಮನಸ್ಸಿನಲ್ಲಿ ಶಾರದೆ ಯನ್ನು ಒಂದು ಬಾರಿ ಕಂಡು, ಎಲ್ಲವನ್ನೂ ವಿಚಾರಿಸಬೇಕೆಂದು ಉದ್ದೇಶ.

ಆದರೆ ಅವಳು ಈಗ ಪರಸ್ತ್ರೀ. ನನ್ನವಳೆಂದು, ಸತತ ನನ್ನವಳೆಂದು ವಚನ ಕೊಟ್ಟಿದ್ದವಳು ಇಂದು ಸಮಾಜದ ಸುಧಾರಿಸಿದ ನೀತಿಯಂತೆ ನನಗೇ ಪರಸ್ತ್ರೀ.

ನನ್ನ ಉದ್ದೇಶವನ್ನು ದಮನ ಮಾಡಿಕೊಂಡು ಏಳು ದಿನಗಳನ್ನು ಕಳೆದೆ. ಕೊನೆಗೆ ಅದು ದುರ್ದಮನೀಯವಾಯಿತು.

ಮನೆಯಲ್ಲಿ ಹೇಳದೆ ಕಾ....ಕ್ಕೆ ಹೋಗಿ ಸೇರಿದೆ. ಅಲ್ಲಿ ವಿಚಾರಿಸಿಕೊಂಡು ಶಾರದೆಯ ಮನೆಯನ್ನು ಪತ್ತೆಮಾಡಿದೆ. ಸಂಜೆ ಸುಮಾರು ನಾಲ್ಕರ ಸಮಯ. ಬಾಗಿಲನ್ನು ತಟ್ಟಿದೆ. ಶಾರದೆಯೇ ಬಂದು ಬಾಗಿಲನ್ನು ತೆರೆದಳು. ನನ್ನನ್ನು ನೋಡಿ ಅಪ್ರತಿಭಳಾಗಿ ಅವಾಕ್ಕಾದಳು.

ನಾನೇ ಅವಳನ್ನು ಮೆಲ್ಲಗೆ ಒಳಕ್ಕೆ ಕರೆದುಕೊಂಡು ಹೋದೆ. ಕುಳಿತು ಕೊಂಡು ಎಲ್ಲವನ್ನೂ ಮಾತನಾಡಿದೆವು.

ಅವಳ ತಂದೆ ತಾಯಿಗಳೂ, ನನ್ನ ತಂದೆ ತಾಯಿಗಳೂ ಇಬ್ಬರೂ ಸೇರಿ ಅವಳನ್ನು–ನನ್ನಿಂದ ದೂರವಿಡಬೇಕೆಂಬ ಉದ್ದೇಶದಿಂದ ಮಾಧವನಿಗೆ ಮದುವೆ ಮಾಡಿದ ಸಂಗತಿಯನ್ನು ಹೇಳಿದಳು. ಅವಳ ಗಂಡನ ವೃತ್ತಾಂತವನ್ನು ಬಿನ್ನವಿಸಿದಳು. ಆಗ ನಾನು ಅವಳನ್ನು ಕರೆದುಕೊಂಡು ಎಲ್ಲಿಯಾದರೂ ಹೋಗಿ ವಾಸಮಾಡಬೇಕೆಂದು ಗೊತ್ತುಮಾಡಿಕೊಂಡೆ. ಮಾತಿನಲ್ಲಿ ಮಗ್ನರಾಗಿದ್ದ ನಮಗೆ ಕಾಲವು ಕಳೆದುಹೋದುದು ತಿಳಿಯುಬರಲಿಲ್ಲ. ಮಾಧವನು ಆಫೀಸಿನಿಂದ ಬಂದವನು ನಮ್ಮಿಬ್ಬರನ್ನೂ ನೋಡಿದನು. ಸಂತಾಪಗೊಂಡು ಕೆರಳಿ ಕೆಂಪಾದನು.

ಸಿಟ್ಟಿನಲ್ಲಿ ನಮ್ಮಿಬ್ಬರನ್ನೂ ಬಾಯಿಗೆ ಬಂದಂತೆ ಬೈದನು. ನಾನು ಉತ್ತರಗೊಡಲಿಲ್ಲ. ಶಾರದೆಯೂ ಉತ್ತರಗೊಡಲಿಲ್ಲ. ಕೊನೆಗೆ ಶಾರದೆಯನ್ನು ಅಮಂಗಳವಾದ, ಅವಾಚ್ಯವಾದ ಶಬ್ದಗಳಿಂದ ನಿಂದಿಸಲಾರಂಭಿಸಿದನು. ಆಗ ನನಗೆ ಸಿಟ್ಟುಬಂದು ಒಂದೆರಡು ಶಬ್ದಗಳನ್ನಾಡಿದೆ. ಕೊನೆಗೆ ಇಬ್ಬರಿಗೂ ಹೊಡೆದಾಟವಾಯಿತು. ಅವನು ಪೆಟ್ಟುತಿಂದು ನೆಲಕ್ಕೆ ಉರುಳಿದ. ನಾನು ಶಾರದೆಯನ್ನು ಕರೆದುಕೊಂಡು ಬಂದುಬಿಟ್ಟೆ.

ಆ ದಿನದ ಘಟನೆಗಳನ್ನು ಕುರಿತು ವಿಚಾರಮಾಡಿದರೆ ಇಂದೂ ಸಹ ಸಮರ್ಪಕವಾದ ಉತ್ತರವು ದೊರೆಯುವುದಿಲ್ಲ. ಮನೋವೃತ್ತಿಗಳನ್ನು, ಕಾರ್ಯಪರಂಪರೆಗಳನ್ನು, ವಿಭಜಿಸಿ ಅರ್ಥಮಾಡುವುದರಲ್ಲಿ ನಾನು ನಿಷ್ಣಾತ

ನೆಂದು ಹೆಸರು. ಆದರೆ ಅಂದಿನ ಕಾರ್ಯಕ್ರಮದರ್ಥವು ನನಗೆ ಇಂದಿಗೂ ಆಗಿಲ್ಲ. ಸಿಡ್ನಿಹುಕ್-ನ ವಾಕ್ಯವು ನಿಶ್ಚಯವೆಂದು ನನಗೆ ತೋರುತ್ತದೆ. ನೀವೇ ನೋಡಿ—"Natural experience is a mixture of necessary and chance elements" (ನಿಸರ್ಗಾನುಭವವು ಆವಶ್ಯಕ ವಾದ ಮತ್ತು ಅನಿರೀಕ್ಷಿತವಾದ ವಿಷಯಗಳ ಸಂಯೋಗವಾಗಿದೆ.) ಈ ವಾಕ್ಯದಲ್ಲಿ ಬರುವ "ಅನುಭವ"ದ ಸುಯೋಗ್ಯವಾದ ಅನುಭವವು ಅವನಿಗೂ ಆಗಿಲ್ಲ. ನನ್ನ ಜ್ಞಾನದ ವಿಸ್ತರವಂತೂ ಅಲ್ಲಿಂದ ಮುಂದೆ ಹಾಯಲಿಲ್ಲ.

* * * * * *

ಕ್ರಮವಾಗಿ ನನ್ನ ಮೇಲೆ "ಕೇಸು" ಆಯಿತು. ಯಾವ ಕಾರಣ ದಿಂದಲೋ ನಾನರಿಯೆ ಅದರಲ್ಲಿ ಶಾರದೆಯ ಹೆಸರು ಬರಲಿಲ್ಲ. ನನ್ನ ಮೇಲೆ ಎರಡು ಮೂರು ತಪ್ಪುಗಳನ್ನು ಹೊರೆಸಿದರು. "ಪ್ರಾಸಿಕ್ಯೂಷನ್" ಕಡೆಯ ವರು ದೊಡ್ಡ ಭಾಷಣವನ್ನು ಮಾಡಿ ನನ್ನನ್ನು ನೀತಿಬಾಹಿರನೆಂದೂ, ಸಮಾ ಜದ, ಸರಕಾರದ ಕಟ್ಟಳೆಗಳನ್ನು ಅತಿಕ್ರಮಿಸಿದವನೆಂದೂ ತೋರಿಸಿಕೊಟ್ಟರು. ನಾನು ನನ್ನ ಕೆಲಸ ಕಾರ್ಯಗಳನ್ನು ವಿಶದಮಾಡಿ ಹೇಳಿ, ಶಾರದೆಯನ್ನೂ ಸಾಕ್ಷಿ ಕರೆಯಬೇಕೆಂದು ಕೇಳಿದೆ. ಕೋರ್ಟಿನವರು ಒಪ್ಪಲಿಲ್ಲ. ಕೊನೆಗೆ ನನ್ನನ್ನು ತಪ್ಪಿತಸ್ಥನೆಂದು ತೀರ್ಮಾನಿಸಿ ಮೂರು ವರ್ಷ ಶಿಕ್ಷೆ ವಿಧಿಸಿದರು.

ನೀವು ನ್ಯಾಯಾಧೀಶನ ಮೂರ್ಖತನದ ಪರಮಾವಧಿಯ ರೂಪಾದ ತೀರ್ಪನ್ನು ಕೇಳಬೇಕಾಗಿತ್ತು. ಹಾಗಿಲ್ಲದಿದ್ದರೆ ಸಮಾಜದಲ್ಲಿ ಅವನ ಉದರ ಭರಣವು ಹೇಗೆ ನಡೆಯಬೇಕು? ಸಮಾಜ ಮತ್ತು ಸಮಾಜದ ನೀತಿ, ವರ್ತನೆ. ಪರಮಾಣುಗಳಾದ ಜೀವಿಗಳಾದ ನಾವು, ನೀವು.

* * * * * *

ಜೇಲಿನಲ್ಲಿ ಒಂದು ವರ್ಷ ಕಳೆಯಿತು—ತುರಂಗದ ಅನುಭವವು, ಅದರ ನ್ಯಾಯಪರತೆಯ ಪರಿಚಯವು ನಿಮಗೂ ಇದೆ. ಇಲ್ಲಿಯೇ ನನಗೆ ಒಂದು ಸಮಾಚಾರವು ಮುಟ್ಟಿತು. ಶಾರದೆಯು ಗಂಡನ ಕೈಯಲ್ಲಿ ಬದುಕಲಾರದೆ ಆತ್ಮಹತ್ಯೆಯನ್ನು ಮಾಡಿಕೊಂಡಳೆಂದು ಸುದ್ದಿಯು ಮುಟ್ಟಿತು.

ಅಂದು—ನನ್ನ ಜೀವಿತದ ಬಂಧನಗಳು ಹರಿದು ಚದರಿಹೋದವು. ನಾನು ಸಮಾಜಕ್ಕೆ ಹೊರಗಾದವನು. ಮಾಧವನು ಸಮಾಜದಲ್ಲಿ ಗಣ್ಯನಾದ

ಸದ್ಗೃಹಸ್ಥನು. ನಮ್ಮ ತಂದೆ ತಾಯಿಗಳೂ ಗಣ್ಯರು. ಸಮಾಜವು ನೀತಿ ಯುಕ್ತವಾದ, ನ್ಯಾಯ ಬದ್ಧವಾದ ಸಂಘ. ಅಲ್ಲಿ........ನಾವು.

ಅಲ್ಲಿ ನಾವು ಯಾರು? ಸಮಾಜವು ಹಿರಿಯದು. ನಾವು ಜೇಡನ ಬಲೆ ಯಲ್ಲಿ ಸಿಕ್ಕಿದ ಎರಡು ಸಣ್ಣ ಪ್ರಾಣಿಗಳು. ಪ್ರಚಂಡ ಸಾಗರದಲ್ಲಿ ಪ್ರವಾಹಕ್ಕೆ ಸಿಕ್ಕಿಹೋದ ದೋಣಿಗಳು. ಬಲೆಗಾರನ ಬಲೆಯಲ್ಲಿ ಸೇರಿಹೋದ ಮೀನುಗಳು. ಸಮಾಜದ ಸ್ತಂಭಗಳು.—ಮಾನವ ಸಮಾಜದ ಆಧಾರಗಳು."

೩

ರೋಗಿಯು ನನಗೆ ಹೇಳಿದ್ದ ಇತಿಹಾಸದಲ್ಲಿ, ಕಥಾನಕದಲ್ಲಿ ಉತ್ಪ್ರೇಕ್ಷೆ ಯಿರಲಿಲ್ಲ. ಸೊಬಗಿರಲಿಲ್ಲ. ಸ್ಥಿರ ಪ್ರಜ್ಞನಂತೆ ಆತನಿಗೆ ತನ್ನ ಜೀವಿತದ ವೃತ್ತಾಂತವೇ ಬಾಹ್ಯದ ವಿಚಾರವಾಗಿತ್ತು. ಶಾಸ್ತ್ರದಲ್ಲಿ ನಿಷ್ಕಾಮ ರೀತಿಯಲ್ಲಿ ವಿಚಾರಮಾಡುವವನಂತೆ ಎಲ್ಲವನ್ನೂ ಹೇಳಿದ್ದನು.

ಅಹುದು. ನಿಜ. ಎಲ್ಲವೂ ಒಂದು ಮಾರ್ಗವನ್ನು ಹಿಡಿದು ನಡೆಯಬೇಕು. ನಾನು. ರೋಗಿ. ಶಾರದೆ. ಮಾಧವ. ಸಮಾಜ. ಸರಕಾರ, ಪರಸ್ಪರ ಸಂಬಂಧ ವುಂಟೇ? ಅಥವಾ ಇಲ್ಲವೇ? ಸಂಬಂಧವುಂಟು. ಆದರೆ ನಮ್ಮ ಉಪಯೋಗಕ್ಕಲ್ಲ. ಆದರಿಂದಲೇ ಜೇಮ್ಸನು "A world still in the making" ಎಂದು ಹೇಳಿದುದು. ಇದನ್ನು ಕುರಿತು ವಿಚಾರಮಾಡತೊಡಗಿದೆ. ಇದ್ದಕ್ಕಿದ್ದ ಹಾಗೆ ಶಬ್ದವಾಯಿತು. ಯೋಚನೆಯು ಭಂಗವಾಯಿತು. ಯಾವನೋ ಒಬ್ಬ ರೋಗಿಯು ಮೂಲಗುತ್ತಿದ್ದ.

ಸ್ವಾಭಾವಿಕವಾಗಿ ಕೈಯು ನನ್ನ ರೋಗಿಯ ಕೈಕಡೆಗೆ ಹೊರಳಿತು. ಹಿಡಿದು ನಾಡಿಯನ್ನು ನೋಡಿದೆ. ನಿಂತು ಹೋಗಿತ್ತು. ಹೃದಯದ ಮೇಲೆ ಕೈಯಿಟ್ಟು ನೋಡಿದೆ; ಹೊಡೆಯುತ್ತಿರಲಿಲ್ಲ. ಕೊನೆಗೆ ಕಣ್ಣಾಲೆಯನ್ನು ಮುಟ್ಟಿ ನೋಡಿದೆ; ಚಲನವಾಗಲಿಲ್ಲ. ಮೆಲ್ಲನೆ ದುಪ್ಪಟಿಯನ್ನು ಎಳೆದು ಶವವನ್ನು ಮುಚ್ಚಿದೆ. ಪಹರೆಯುವನನ್ನು ಕೂಗಲು ಮುಂದೆ ಬಂದೆ. ರೋಗಿಯು ಜೀವಿಸಿರಲು ಕಾರಣವಿರಲಿಲ್ಲ. ಸಮಸ್ಯೆಗೆ ಉತ್ತರವು ದೊರೆತಿತ್ತು.

ನನ್ನ ಬಿಡುಗಡೆಗೆ ಇನ್ನೂ ಆರು ತಿಂಗಳು ಇಪ್ಪತ್ತು ದಿನ ಬಾಕಿ. ಸ್ವಲ್ಪ ತಾಳಿ. ಮೆಹತಾಬ್ ಬೇಗಂ ಚೆನ್ನಾಗಿ ಪಾತ್ರ ವಹಿಸುತ್ತಾಳಂತೆ.

ನೀವು ನೋಡಿರುವಿರಾ?

---



## ಶ್ರೀಮತಿ ಪಡುಕೋಣ ವಸಂತಿ ಬಾಯಿಯವರು

ಇವರು ದಕ್ಷಿಣ ಕನ್ನಡಿತಿ. ಈಗ ಮಾತ್ರ ಕಲ್ಕತೆಯಲ್ಲಿದ್ದಾರೆ. 'ರಾಷ್ಟ್ರಬಂಧು'ವಿನ ಸಾಹಿತ್ಯ ಸಂಚಿಕೆಗಳಲ್ಲಿಯೂ, 'ಜಯಕರ್ನಾಟಕ'ದಲ್ಲಿಯೂ ಇವರ ಹಲವು ಕತೆಗಳು ಪ್ರಕಟವಾಗಿವೆ. ಕನ್ನಡದಲ್ಲಿ ಮಾತ್ರವಲ್ಲದೆ ಹಿಂದಿಯಲ್ಲಿಯೂ ಇವರು ಬರೆಯುತ್ತಾರೆ. ಹಿಂದಿಯ ಪರಿಣಾಮವು ಇವರ ಕನ್ನಡದ ಮೇಲೆಯೂ ಆಗದೆ ಇಲ್ಲ. ಸಾಮಾನ್ಯವಾದ ವಿಷಯಗಳನ್ನು ಎತ್ತಿಕೊಂಡು ಸಾಮಾಜಿಕ ಕತೆಗಳನ್ನು ಬರೆಯುತ್ತಾರೆ. ದೀರ್ಘಕಾಲ ಮನಸ್ಸಿನ ಮೇಲೆ ಅಚ್ಚೊತ್ತಿರಿದು ಉಳಿಯುವಂತಹ ಭಾವನೆಗಳು ಇವರ ಕತೆಗಳಿಂದ ಉಂಟಾಗುವುದು ಕಡಿಮೆಯಾದರೂ ಹೇಳುವ ಸೊಗಸಾದ ರೀತಿಯು ಮನಸ್ಸನ್ನು ಸೆಳೆಯುತ್ತದೆ. ಈ ವರೆಗೆ ಇವರ ಕಲೆಯು ಸಂಪೂರ್ಣವಾಗಿ ಬೆಳೆದಿಲ್ಲವಾದರೂ ಮುಂದೆ ವ್ಯವಸಾಯವಾದಂತೆ ಇವರು ಉತ್ತಮ ಕತೆಗಳನ್ನು ಬರೆಯಬಹುದೆಂದು ಈಗಿನ ಕತೆಗಳ ಪೂರ್ವಚಿನ್ಹವು ಸೂಚಿಸುತ್ತದೆ.

# ಕನಸಿನ ನನಸು

ಪಿ. ವಸಂತಿಬಾಯಿಯವರು

ನನಗೆ ಮದುವೆಯಾಗಿ ಆರು ವರ್ಷವಾಯಿತು. ಆಗ ನನಗೆ ೨೨ ವರುಷ; ಮಾಲತಿಗೆ ೧೬. ಅವಳು ಪತಿಯೆಂಬ ವಸ್ತುವು ಏನೆಂಬುದನ್ನು ಪುಸ್ತಕಗಳಿಂದಲೂ, 'ನೋವೆಲ್'ಗಳಿಂದಲೂ ಅರಿತವಳು. ನಾನೂ ಅಷ್ಟೇ. "ಲವ್ ಸ್ಟೋರಿಸ್" "ಲವ್ ಲೆಟರ್ಸ್" ಎಲ್ಲಾ ಪಠನಮಾಡಿ ಲಗ್ನಮಾಡಿಕೊಂಡು ಪತ್ನಿಯನ್ನು ಯಾವ ರೀತಿಯಿಂದ ನೋಡಬೇಕು, ಹೇಗೆ ಆಕೆಯ ಮನಸ್ಸನ್ನು ಆನಂದಗೊಳಿಸಬೇಕು ಎಂಬುದನ್ನೆಲ್ಲಾ ತಿಳಿದಿದ್ದೆನು. ನಾನು ಮದುವೆಯ ಮುಂಚೆ ಮಾಲತಿಯನ್ನು ನೋಡಿರಲಿಲ್ಲ. ಆಕೆಯನ್ನು ನೋಡಬೇಕೆಂತ ನನ್ನಲ್ಲಿ ಬಹಳ ಆಶೆ ಇತ್ತು. ಆದರೆ, ಬಾಯಿಬಿಟ್ಟು ತಂದೆ ತಾಯಿಯರೊಡನೆ ಹೇಳಲು ಸಂಕೋಚ, ನಾಚಿಕೆ. ನನ್ನ ತಾಯಿಯವರಿಗೆ ಹುಡುಗಿ ಒಪ್ಪಿದ್ದಳು. ನನ್ನ ಅಕ್ಕ ಸೌಂದರ್ಯದ ಉಪಾಸಕಿ. ಅವಳಿಗೆ ತನಗೆ ದೊರಕುವ ಅತ್ತಿಗೆಯ ವಿಷಯ ಬಹಳ ಗರ್ವ ಇತ್ತು. ಅವರ ಮುಂದೆ ನನ್ನ ಪಾಡೇನು? ನನಗೆ ತಕ್ಕವಳನ್ನೇ ಅವರು ಒಪ್ಪುವರೆಂಬ ಧೈರ್ಯ ನನಗೆ. ಹಾಗಾಗಿ ಅವರೆಲ್ಲರ ಒಪ್ಪಿಗೆ ಸಿಕ್ಕಿದ ನಂತರ ನನ್ನ ವಿಷಯ ಅಲ್ಲೇ ನಿಂತಿತು.

ಲಗ್ನವಾದ ದಿನ. ಪತಿಪತ್ನಿಯರು ಒಬ್ಬರನ್ನೊಬ್ಬರು ಅಗಲದೆ ಸರಿಯಾದ ಮಾರ್ಗದಲ್ಲಿ ಹೋಗಲು ಇಬ್ಬರನ್ನೂ ಪ್ರೇಮ ಶೃಂಖಲೆಯಿಂದ ಕಟ್ಟಿ ಎಂದೆಂದಿಗೂ ಬಿಚ್ಚಿ ಹೋಗದಂತೆ ಗಂಟುಹಾಕಿದ ದಿನವದು. ಜೀವನದ ಕೊನೆಯ ತನಕ ಸುಖ ದುಃಖವೆಂಬ ಪರಮೇಶ್ವರನ ಲೀಲೆಗಳನ್ನು ಇಬ್ಬರೂ ಏಕಮನಸ್ಸಿನಿಂದ, ಏಕ ಹೃದಯದಿಂದ ಅನುಭವಿಸಲು ಸಿದ್ಧರಾಗಿರುವೆವೆಂದು ವಚನಬದ್ಧರಾದ ದಿನವದು. ನಮ್ಮ ಮದುವೆಯು ಮುಂಚಿನಂತೆ ೮ ದಿನಗಳ ತನಕ ನಡೆಯಿತು. ಲಗ್ನ ಸಾಯಂಕಾಲ ೬ ಘಂಟೆ ೧೦ ನಿಮಿಷಕ್ಕೆ ಇತ್ತು. ಅಂತರಪಟದಿಂದ ಇಣಿಕಿ, ಬಗ್ಗಿದ ಮಾಲತಿಯ ಮುಖವನ್ನು ನಾನು ಒಂದೆರಡು ಸಲ ನೋಡಿದೆನು. ಸರಿಯಾಗಿ ಕಾಣಲಿಲ್ಲ. ಬೆರಳಿಗೆ ಸುತ್ತುಂಗುರ ಹಾಕುವಾಗ ಹೋಮದ ಸುತ್ತು ಇಬ್ಬರೂ ಕೈಗೆ ಕೈ ಕೊಟ್ಟು ನಡೆಯುವದಿದೆಯಷ್ಟೇ–ಆಗ ನಾನು ಮಾಲತಿಯ ಕೈಯನ್ನು ಅಲ್ಲ, ಕೈಬೆರಳನ್ನು ಒತ್ತಿಹಿಡಿದೆ. ಆಕೆ ಹಿಂದೆ

ಸರಿದು ಕೈಬೆರಳು ಎಳಕೊಂಡಳು. ತಿರುಗಿ ನನ್ನ ಭಾವ ಆಕೆಯ ಕೈಯನ್ನು ನನ್ನ ಕೈಯಲ್ಲಿ ಕೊಟ್ಟರು. ನನ್ನ ಮನಸ್ಸಿನಲ್ಲಿ ಈಕೆಗೆ ನನ್ನ ಮೇಲೆ ಅನುರಾಗ ವಿಲ್ಲ; ನಾನು ಆಕೆಗೆ ಒಪ್ಪಲಿಲ್ಲವೆಂತ ನೆನಸಿದೆ. ಅಂತು ಇದರ ನಿಷ್ಕರ್ಷೆ ರಾತ್ರೆ ಮಾಡಬೇಕೆಂತ ಮನಸ್ಸು ಗಟ್ಟಿಮಾಡಿದೆ. ಈ ಲಗ್ನಸಮಾರಂಭ ಎಂದಿಗೆ ಮುಗಿಯುವುದೋ ಎಂತ ಆ ಗೊಣಗುಟ್ಟುವ ಪುರೋಹಿತರ ಮಂತ್ರಗಳನ್ನು ಕೇಳಿ ಸಿಟ್ಟುಬಂತು ನನಗೆ. ಮಧ್ಯೆ ನನ್ನ ಅಕ್ಕ-ತಂಗಿಯರ ಹುಡುಗಾಟ ಬೇರೆ. ಅಂತು ಹೊತ್ತು ಮುಳುಗಿತು. ಲಗ್ನಸಮಾರಂಭವು ಕೊನೆಗೊಂಡಿತು. ಊಟ ಎಲ್ಲಾ ಮುಗಿದು ನಮ್ಮನ್ನು ಶಯ್ಯಾಗೃಹಕ್ಕೆ ಕಳುಹಿದ್ದಾಯಿತು. ನನ್ನ ಹೃದಯವು ಆನಂದದಿಂದ ಉಕ್ಕುತ್ತಿತ್ತು. ನನ್ನ ಪ್ರೇಯಸಿಯು ಮಾತನಾಡು ವಳೋ, ಇಲ್ಲವೋ, ನಾಚುವಳೋ, ಹೇಗೆ ಮಾತಿಗೆ ಪ್ರಾರಂಭಮಾಡಲಿ? ಯಾರಾದರೂ ಹೊರಗಿನಿಂದ ಕೇಳಿದರೆ........ಎಂತ ದಿಗಿಲು ಬೇರೆ. ಒಂದು ಅರ್ಧ ಘಂಟೆಯ ತನಕ ನಾನು ಮಾತನಾಡಲಿಲ್ಲ. ನನ್ನಾಕೆಯು ಮಂಚದ ಬದೀ....ಗೆ ಹೋಗಿ ತಲೆ ತನಕ ಹೊದ್ದುಕೊಂಡು ಗೋಡೆಯ ದಿಕ್ಕಿಗೆ ಮುಖ ಮಾಡಿ ಮಲಗಿದ್ದಳು. ಇಂಗ್ಲಿಷಿನಲ್ಲಿ 8 ಎಂತ ಅಂಕೆ ಬರೆಯುವಂತೆ ಅವಳು ಮಲಗಿದ್ದು ನೋಡಿ ನನಗೆ ನಗು ಬಂತು. ಅವಳಿಗೂ ನಿದ್ದೆ ಹತ್ತಿರಲಿಲ್ಲ. ನನ್ನ ಹೃದಯದಲ್ಲಿ 'ಧುಪ್, ಧುಪ್' ಎಂತ ಶಬ್ದ ಆಗುತ್ತಿತ್ತು. ಪರೀಕ್ಷೆ ಹೊತ್ತಿನಲ್ಲಿ ನನಗೆ ಇಷ್ಟು ದಿಗಿಲಾಗಿರಲಿಲ್ಲ. ಗಟ್ಟಿ ಮನಸ್ಸು ಮಾಡಿ ಅವಳ ಬಳಿಯಲ್ಲಿ ಕೂತುಕೊಂಡೆ. ಅವಳು ಇನ್ನಷ್ಟು ಗೋಡೆಯ ಕಡೆ ಸರಿದಳು ನಾನೂ ಅವಳ ಕಡೆ ಸರಿದೆನು. ಅವಳ ಒಂದು ಕೈಯನ್ನು ನನ್ನ ಕೈಯಲ್ಲಿಟ್ಟುಕೊಂಡೆನು. ಕೈಯನ್ನು ಬಿಡಿಸಿಕೊಂಡಳು. ನಾನು ಎಂತಹ ಹಟವಾರಿ—ಅವಳ ಎರಡೂ ಕೈಗಳನ್ನು ನನ್ನ ಕೈಯಲ್ಲಿಟ್ಟುಕೊಂಡೆನು. ಆಕೆ ಎದ್ದಳು ಎದ್ದು ಮಂಚದ ಬದಿಗೆ ಹೋಗಿ ನನ್ನ ಕೈಯಿಂದ ತನ್ನ ಕೈ ಬಿಡಿಸಿಕೊಂಡು ದೂರ ಕೂತಳು. ನಾನೂ ಅವಳ ಹತ್ತಿರ ಹೋದೆನು ಅಲ್ಲಿಂದಲೂ ಎದ್ದಳು ಆಗ ನಾನು ಬಿಡಲಿಲ್ಲ. ಅವಳನ್ನು ಬಲವಂತದಿಂದ ಕೈ ಹಿಡಿದೆಳೆದು ನನ್ನ ತೊಡೆಯ ಮೇಲೆ ಕುಳ್ಳಿರಿಸಿ ಎಡಗೈಯಿಂದ ಗಟ್ಟಿಯಾಗಿ ಹಿಡಕೊಂಡು ಬಲಗೈಯಿಂದ ಅವಳ ಮುಖವನ್ನು ಮೇಲಕ್ಕೆತ್ತಿದೆನು. ಅವಳಾದರೊ ನನ್ನ ಕೈಯನ್ನು ಬಿಡಿಸುವ ಪ್ರಯತ್ನದಲ್ಲೇ ಇದ್ದಳು. ನಾನು ಅವಳ ಮುಖವನ್ನು ನನ್ನ ಮುಖದ ಕಡೆ ಎಳೆದು ಒಂದೇ

ಒಂದು ಸಾರಿ ಅವಳ ಚೆಂದುಟಿಗಳ ಲಾಭ ಕಿತ್ತುಕೊಂಡೆನು. ಅವಳು ನಕ್ಕಳು. ಹೀಗೆಯೇ ಸ್ವಲ್ಪ ಹೊತ್ತು ಕಳೆದ ನಂತರ ನಾನು "ನಿನ್ನ ಹೆಸರೇನು?" ಎಂದು ಕೇಳಿದೆ. ನೀರವ. ಮತ್ತೊಮ್ಮೆ ಕೇಳಿದೆ. ಮಾತಿಲ್ಲ. ಕಡೆಗೆ ಮಾತ್ರ "ಮಾಲತಿ" ಎಂದಳು. "ನಿನಗೆ ನಾನು ಒಪ್ಪಿರುವೆನೇ?" ಎಂದೆ. ನಕ್ಕಳು. "ನನ್ನೊಡನೆ ನಮ್ಮೂರಿಗೆ ಬರುವೆಯಾ?" ಎಂದೆ. "ಹೂಂ" ಎಂದಳು.

ಅಂಧಿನ ರಾತ್ರೆ ಇದಕ್ಕಿಂತ ಹೆಚ್ಚಿನ ಮಾತಿಲ್ಲ; ಕತೆಯಿಲ್ಲ. ಅನಂತರ ಮಾತ್ರ ನಮ್ಮಿಬ್ಬರಿಗೂ ಬಹಳ ದೋಸ್ತಿಯಾಯಿತು............

ಒಂದು ದಿನ ಬೆಳಿಗ್ಗೆ ನನ್ನ ಅಕ್ಕ ಮತ್ತು ತಂಗಿ ಇಬ್ಬರೂ—"ಇದೇನು, ಕೃಷ್ಣಾ! ನಿನ್ನೆ ರಾತ್ರೆ ೩ ಘಂಟೆಯಾದರೂ ನಿಮಗೆ ನಿದ್ದೆ ಬರಲಿಲ್ಲವೇ? ಪಿಸಿಪಿಸಿ ಮಾತನಾಡುವದು ಕೇಳುತ್ತಿತ್ತು" ಎಂದು ಕೇಳಿದರು. ನಾನು ನಾಚಿ ನಕ್ಕೆನು.

ನಾವು ಹೊರಡುವ ಮುಂಚಿನ ರಾತ್ರೆ ಮಾಲತಿಯು ತಾನೂ ನನ್ನೊಡನೆ ಬರುತ್ತೇನೆಂತ ಹಟ ಮಾಡಿದಳು. ನನಗೂ ಕರಕೊಂಡು ಹೋಗಬೇಕೆಂತ ಮನಸ್ಸಿತ್ತು. ಆದರೆ, ಕೇಳುವವರು ಏನಾದರೂ ಅಂದರೆ? ಆದುದರಿಂದ ಮಾಲತಿಗೆ ೫–೬ ತಿಂಗಳೊಳಗೆ ಅವಳನ್ನು ಕರಕೊಂಡು ಹೋಗುತ್ತೇನೆಂತ ವಚನ ಕೊಟ್ಟೆ.

ನಾವು ಊರಿಗೆ ಬಂದೆವು. ಬಂದ ರಾತ್ರೆಯೇ ನಾನು ಮಾಲತಿಗೆ ಪತ್ರ ಬರೆದೆ. ಮನೆಯ ವಿಳಾಸಕ್ಕೆ ಬರೆದರೆ ಹಿರಿಯರು ಏನಾದರೂ ಅಂದುಕೊಂಡಾರೆಂತ ಆಫೀಸಿನ ಅಡ್ರೆಸು ಕೊಟ್ಟೆ. ದಿನಾಲೂ ನಾನು ಮಾಲತಿಗೆ ಪತ್ರ ಬರೆಯುತ್ತಿದ್ದೆ. ಅವಳೂ ನನಗೆ ಬರೆಯುತ್ತಿದ್ದಳು. ಹೀಗೆಯೇ ೨ ತಿಂಗಳಾಯಿತು. ಈಗ ಮಾಲತಿಯನ್ನು ಯಾವ ನೆವನದಿಂದ ನಾನಿದ್ದಲ್ಲಿಗೆ ಕರೆತರಿಸೋಣ ಎಂತ ಯೋಚನೆ ಮಾಡುತ್ತಿದ್ದೆ. ನನಗೆ ಹೊಳೆಯಲ್ಲಿ ಸ್ನಾನ ಮಾಡಿದರೆ ಮುಂಚಿನಿಂದಲೂ ಆಗುವುದಿಲ್ಲ. ನೆಗಡಿ, ಕೆಮ್ಮು, ಜ್ವರ ಬರುತ್ತಿತ್ತು. ಒಂದು ದಿನ ಹೋಗಿ ಯಾರಿಗೂ ತಿಳಿಯದಂತೆ ಹೊಳೆಯಲ್ಲಿ ಸ್ನಾನ ಮಾಡಿಕೊಂಡು ಬಂದೆ. ಮನೆಗೆ ಬಂದೊಡನೆ ನೆಗಡಿ, ಕೆಮ್ಮಿಗೆ ಪ್ರಾರಂಭವಾಯಿತು. ಬೇಕೆಂತ ಅಪಥ್ಯ ಮಾಡಿದೆ. ಜ್ವರ ಬಂದುಬಿಟ್ಟಿತು. ಹತ್ತು ದಿನ ತನಕ ಇಳಿಯುಲಿಲ್ಲ. ಆಗ ಉಪಾಯವಿಲ್ಲ. ಮಾಲತಿಯು ಅಲ್ಲಿಂದ ಓಡಿಬಂದಳು. ನಾನು ನನ್ನ ಜ್ವರ ಅಷ್ಟು ದಿನ ತನಕ ಬಂದೀತೆಂತ ನೆನಸಿರಲಿಲ್ಲ.

ಮಾಲತಿಯನ್ನು ಕರೆತರಲು ಉಪಾಯ ಮಾತ್ರ ಮಾಡಿದ್ದೆ. ಕಡೆಗೆ ೧೫ ದಿನಗಳ ನಂತರ ಅಸ್ವಸ್ಥದಿಂದ ಎದ್ದೆ. ನಾನು ಅಸ್ವಸ್ಥನಾಗಿರುವಾಗ ಮಾಲತಿಯು ನನ್ನ ತಾಯಿಯ, ತಂಗಿಯ ಕಣ್ಣು ತಪ್ಪಿಸಿಕೊಂಡು ನನ್ನ ಹತ್ತಿರ ಬಂದು ಕೂತುಕೊಳ್ಳುತ್ತಿದ್ದಳು. ಒಂದೆರಡು ಸಲ ನಮ್ಮ ತಾಯಿಯವರು ಇದನ್ನು ನೋಡಿದರು. ನನ್ನೆದುರಿಗೆ ಏನೂ ಹೇಳಲಿಲ್ಲ. ಹಿಂದೆ ಮಾಲತಿಗೆ ತುಂಬ ಮಾತನಾಡಿದರಂತೆ. "ಈಗಿನ ಕಾಲದ ಹುಡುಗಿಯರು, ಗಂಡನಿಗೆ ಮೈ ಚೆನ್ನಾಗಿಲ್ಲದಿದ್ದರೆ ಸಹಾ ಅವರ ಆರೋಗ್ಯದ ವಿಷಯ ಚಿಂತಿಸುವುದಿಲ್ಲ. ಹಿರಿಯರು ಮನೆಯಲ್ಲಿದ್ದಾಗ ಕೂಡಾ ಹಗಲೂ ರಾತ್ರಿ ಗಂಡನೊಡನೆ ಮಾತ ನಾಡುವದೇನು! ನಗುವದೇನು! ಅಯ್ಯೋ! ನಮ್ಮ ಕಾಲದಲ್ಲಿ ಇಂಥಾದ್ದೆಲ್ಲಾ ನಡೆಯುತ್ತಿರಲಿಲ್ಲವಪ್ಪಾ" ಎಂದರಂತೆ.

ನಮ್ಮ ಶಯ್ಯಾಗೃಹವೂ ಒಂದೇ ಆಗಬೇಕೆಂತ ನನ್ನ ಮನಸ್ಸಿನಲ್ಲಿತ್ತು. ಆದರೆ ಬಾಯಿ ಬಿಟ್ಟು ಹೇಗೆ ಹೇಳಲಿ? ಯಾವ ಉಪಾಯವೂ ತಲೆಗೆ ಹತ್ತ ಲಿಲ್ಲ. ಆದರೆ, ದೈವವಶಾತ್ ನನ್ನ ಅಕ್ಕನಿಗೆ ಕಾಹಿಲೆ ಎಂತ ತಂತಿ ಬಂತು. ಅವರ ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವವರು ಯಾರೂ ಇರಲಿಲ್ಲ. ಹಾಗಾಗಿ ನಮ್ಮ ತಾಯಿ ನನ್ನ ತಂಗಿಯೊಡನೆ ನನ್ನ ಅಕ್ಕನವರು ಇರುವ ಊರಿಗೆ ಹೋಗಲು ಹೊರಟರು. ಈಗ ಮನೆಯಲ್ಲಿ ನಮ್ಮನ್ನು 'ಹಾಂ ಹೂಂ' ಎನ್ನುವವರಿಲ್ಲ. ನಮ್ಮ ತಂದೆಯವರಿಗೆ ನಾವು ಒಟ್ಟಿಗೆ ಮಾತನಾಡುತ್ತಿರು ವದು, ಒಂದೇ ಕಡೆಯಲ್ಲಿ ಮಲಗುವದು ಎಲ್ಲಾ ಒಪ್ಪುತ್ತಿತ್ತು. ಅವರು ಆಫೀಸಿಗೆ ಹೋಗುವದು ಬೆಳಿಗ್ಗೆ ೮ ಘಂಟೆಗೆ; ಬರುವದು ಸಾಯಂಕಾಲ ೭ಕ್ಕೆ. ಅವರು ತಮ್ಮ ಪಾಡಿಗೇ ಇರುತ್ತಿದ್ದರು. ನನ್ನ ಮನಸ್ಸು ತೃಪ್ತಿಯಾಯಿತು. ಮೂರು ತಿಂಗಳು ಮಾತ್ರ. ತಿರುಗಿ ನನ್ನ ಅತ್ತೆಯವರಿಗೆ ಕಠಿಣ ಕಾಹಿಲೆಯೆಂತ ತಂಗಿಯನ್ನು ಕರಕೊಂಡುಹೋಗಲು ನನ್ನ ಭಾವ ಬಂದರು. 'ವಿಘ್ನೇಶ್ವರನ ಲಗ್ನಕ್ಕೆ ಸಾವಿರಾರು ವಿಘ್ನಗಳಂತೆ'-ಹಾಗೆ. ೧೫ ದಿನಗಳಲ್ಲಿ ಹಿಂತಿರುಗಿ ಬರು ತ್ತೇನೆಂತ ವಚನಕೊಟ್ಟು ಮಾಲತಿಯು ಹೊರಟಳು. ನಾನು ಮೊದಲು ಅವಳನ್ನು ಕಳುಹಿಸಲು ಒಪ್ಪಲಿಲ್ಲ. ಆದರೆ, ಪಾಪ! ತಾಯಿಗೆ ಅಸ್ವಸ್ಥವಿರು ವಾಗ ಅವಳಿಗೆ ಹೇಗೆ ತಾನೇ ಇಲ್ಲಿ ಇರಲು ಮನಸ್ಸು ಒಪ್ಪೀತು? ಅವಳು ಹೊರ ಟಳೆಂತ ನಾನು ಎಷ್ಟೋ ಅವಳನ್ನು ದೂಷಿಸಿದೆ. ಹೆಂಗಸರ ಜನ್ಮ. ಈಚೆ

ಪತಿಯ ಮಾತು ಕೇಳಬೇಕು. ಆಚೆ ಹಿರಿಯರ ಮಾತು ಕೇಳಬೇಕು. ಜನ ರೂಢಿಗೂ ಹೆದರಬೇಕು. ನನ್ನ ತಂದೆಯವರಿಗೆ ನನ್ನ ವರ್ತನವೂ ಸರಿ ಬೀಳ ಲಿಲ್ಲ. ನನ್ನನ್ನು ದೂಷಿಸಿದರು. ಮಾಲತಿಯು ಹೊರಟುಹೋದಳು. ನನ್ನ ಗ್ರಹಚಾರ—೧೦ ದಿನಗಳೊಳಗೆ ನನಗೆ ಪಂಜಾಬಿಗೆ ವರ್ಗವಾಯಿತು. ಮಾವ ನವರ ಮನೆಗೆ ಹೋಗಿ ಬರಲಿಕ್ಕೆ ಸಹಾ ಸಮಯವಿಲ್ಲ. ಸಂಬಳವೇನೋ ಹೆಚ್ಚಿಗೆ ಆಗಿ ಕೆಲಸವಾಯಿತು. ಆದರೆ ೬ ತಿಂಗಳು ತನಕ ಸರ್ಕಿಟನ ಮೇಲೆ ಹೋಗುವ ಕೆಲಸ. ೨ ದಿನ ಒಂದು ಕಡೆಯಲ್ಲಿ ಇರುವಂತಿಲ್ಲ. ನನಗೆ ತುಂಬ ದುಃಖವಾಯಿತು.

ಮದುವೆಯಾದ ನಂತರ ನಾನು ನನ್ನ ಪತ್ನಿಯನ್ನು ಒಂದು ದಿನ ಸಹ ಅಗಲಿರಲಾರೆನೆಂತ ನೆನಸಿದ್ದೆ. ಸಿಟ್ಟಿನಿಂದ ೨೦೦ ರೂಪಾಯಿಯ ಕೆಲಸ ಬಿಡಲು ಉದ್ಯುಕ್ತನಾದೆ. ಆದರೆ, ಈಗಿನ ಕಾಲದಲ್ಲಿ ಕೆಲಸ ಸಿಕ್ಕುವದೇ ಕಷ್ಟ. ಇದ್ದು ದನ್ನೇ ಬಿಟ್ಟರೆ ದೇವರೇ ಗತಿ ಎಂತ ಧೈರ್ಯದಿಂದ ಮುಂದಾದರೂ ಮಾಲತಿ ಯನ್ನು ನನ್ನ ಬಳಿಯಲ್ಲಿಯೇ ಇಟ್ಟುಕೊಳ್ಳುವೆನೆಂತ ನಿಶ್ಚಯಮಾಡಿಕೊಂಡೆ. ದೇವರ ದಯೆಯಿಂದ ಒಂದು ವರ್ಷದ ತನಕ ನನಗೆ ಅಲ್ಲಿ ಬಿಡಾರ ಮಾಡಲು ಅನುಕೂಲವಾಗಲಿಲ್ಲ. ಮಾಲತಿಯು ನನ್ನ ಬಳಿಗೆ ಬರುವದು ಮುಂದರಿ ಯಿತು. ನನಗೂ ಮಾಲತಿಗೂ ಬಹಳ ದುಃಖವಾಗುತ್ತಿತ್ತು. ಆದರೇನು ಮಾಡುವದು? ಕಡೆಗೆ ವರ್ಷದ ನಂತರ ನನಗೆ ಕಾಯಂ ಕೆಲಸ ಆಯಿತು. ನಾನು ಚಿಕ್ಕದಾದ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಮಾಲತಿಗೆ ಬರ ಲಿಕ್ಕೆ ಬರೆದೆ. ಆಕೆಯು ಒಬ್ಬಳೇ ಬರುವಳೆಂತ ಮನಸ್ಸಿನಲ್ಲಿ ಹಿಗ್ಗುತ್ತಿದ್ದೆ. ಸ್ಟೇಶನಿನಲ್ಲಿ ನೋಡಿದರೆ, ಒಬ್ಬ ವಯಸ್ಕಳಾದ ವಿಧವೆ ಜತೆಯಲ್ಲಿ! ನಾನು ಮಾಲತಿಯ ಮೇಲೆ ಸಿಟ್ಟುಮಾಡಿದೆ. ಅಂದು, ರಾತ್ರಿಯ ತನಕ ಅವಳೊಡನೆ ಮಾತನಾಡಲಿಲ್ಲ. ರಾತ್ರಿ ಅವಳು ನನ್ನ ಕಾಲುಗಳನ್ನು ಹಿಡಿದು ಅತ್ತಳು. ಅವಳ ತಪ್ಪು ಅವಳಿಗೆ ತಿಳಿದಿತ್ತು. "ನಾನೇನು ಮಾಡಲಿ? ನನ್ನ ತಾಯಿತಂದೆ- ಒಬ್ಬಳೇ ಅಷ್ಟು ದೂರ ದೇಶದಲ್ಲಿ ಏನು ಮಾಡುವಿ? ಮನೆಗೆಲಸ ಸಹ ಬರುವ ದಿಲ್ಲ-ಎಂತ ಹೇಳಿದರು. ನಾನು ಹೇಗೆ ಒಬ್ಬಳೇ ಹೋಗುತ್ತೇನೆ ಎನ್ನಲಿ?" ಎಂತ ಮೊರೆ ಇಟ್ಟಳು. ನಿಜ. ಅವಳು ತಂದೆ ತಾಯಿಯವರೊಡನೆ ಇರು ವಾಗ ಅವರ ಮಾತು ಕೇಳದಿದ್ದರೆ ಆಗುತ್ತದೆಯೇ? ಅಂತು ೫-೬ ತಿಂಗಳು

ನಮಗೆ ಮನಸ್ಸು ಬಂದಂತೆ ತಿರುಗಾಡಲಿಕ್ಕೆ, ಆಟವಾಡಲಿಕ್ಕೆ ಸಾಧ್ಯವಿಲ್ಲ. ಅವರೊಬ್ಬರನ್ನು ಬಿಟ್ಟು ಎಲ್ಲಾದರೂ ಸ್ವೇಚ್ಛೆಯಿಂದ ತಿರುಗಾಡಲಿಕ್ಕೆ ಹೋಗಲಿಕ್ಕೂ ಸರಿಯಾಗುವದಿಲ್ಲ. ಮೂವರೂ ಹೋದರೆ ಅಲ್ಲಿ ಏನು ಬಂತು ಸಂತೋಷ? ನಮ್ಮ ಪಕ್ಕದಲ್ಲಿ ಆಗ ತಾನೇ ಮದುವೆಯಾಗಿ ಬಂದ ಪಂಜಾಬಿ ದಂಪತಿಗಳನ್ನು ನೋಡಿ ನನಗೆ ಬಾಯಲ್ಲಿ ನೀರು ಬರುತ್ತಿತ್ತು. ಅನಂತರ ಆರು ತಿಂಗಳು ಆಕೆ ಮಾಲತಿಯ ಸೋದರತ್ತೆ ತನಗೆ ಇಲ್ಲಿ ಬೇಜಾರವಾಗುತ್ತದೆಂತ ಒಂದು ನೆವನಮಾಡಿ ಹೊರಟುಹೋದರು. ನಾವು ನಿಶ್ಚಿಂತರಾದೆವು. ಅದೇ ತಿಂಗಳಲ್ಲಿ ನಾನು "ಬೇಬಿ ಮೋಟಾರು ಗಾಡಿ" ತೆಗೆದುಕೊಂಡೆ. ನನಗೆ ಮುಂಚೆಯೇ ಮೋಟಾರು ನಡಿಸಲು ಬರುತ್ತಿತ್ತು. ಮಾಲತಿಯು ನನ್ನೊಡನೆ ಕಲಿತುಕೊಂಡಳು. ಬೆಳಗ್ಗಿನ ಝಾವಕ್ಕೆ ನಾವು ಏಳುವದು. ಒಮ್ಮೊಮ್ಮೆ ತಿರುಗಾಡಲಿಕ್ಕೆ ಹೋಗುವದು. ಕೆಲವು ವೇಳೆ 'ಬೇಡಮಿಂಟನ್' ಆಡಲಿಕ್ಕೆ ಹೋಗುವದು. ನಮ್ಮ ಕ್ಲಬ್ ಒಂದಿತ್ತು. ೭ ಘಂಟೆಗೆ ಮನೆಗೆ ಬರುವದು. ಮಾಲತಿಗೆ ಅಡಿಗೆ ಏನೂ ಬರುತ್ತಿರಲಿಲ್ಲ. ನನಗೆ ಅದರ ಮುಂಚೆಯೇ. ಹೇಗಾದರೂ ಇಬ್ಬರೂ ಸೇರಿ, ಕಾಫಿ ಮಾಡಲಿಕ್ಕೆ ಕಲಿತೆವು. ಅನ್ನ ಒಂದೊಂದು ದಿನ ಗಂಜಿಯೇ. ಒಂದೊಂದು ದಿನ ಮುದ್ದೆ ಪಲ್ಯ. ಅಂತೂ ಕೇಳಬೇಡಿ. ಒಗ್ಗರಣೆ ಇಲ್ಲವೇ ಹುರಿಯುತ್ತಿರಲೇ ಇರಲಿಲ್ಲ; ಇಲ್ಲದಿದ್ದರೆ ಹುರಿದು ಕಪ್ಪು ಮಸಿಯಾಗುವದು. ಒಗ್ಗರಣೆ ಜಿನಸು ಯಾವದೆಂತ ಗೊತ್ತಾಗುತ್ತಿರಲಿಲ್ಲ. ಅಂತು, ನಮ್ಮಿಬ್ಬರಿಗೂ ಆ ವಿಷಯದಲ್ಲಿ ದುಃಖವಾಗುತ್ತಿರಲಿಲ್ಲ. ೧೧ ಘಂಟೆಗೆ ನನಗೆ ಕಚೇರಿ. ನಾವಿಬ್ಬರೂ ಒಟ್ಟಿಗೆ ಊಟಮಾಡುತ್ತಿದ್ದೆವು. ನಾನು ಆಫೀಸಿಗೆ ಹೊರಟಾಕ್ಷಣ ಮಾಲತಿಯು ಅಳುವದು. ಎಷ್ಟೋ ಸಾರಿ ಸುಳ್ಳು ಹೇಳಿ ನಾನು ರಜೆ ತೆಗೆದುಕೊಂಡು ಮನೆಯಲ್ಲಿ ಕುಳಿತುದುಂಟು. ಮಧ್ಯಾಹ್ನ ನನಗೆ ಮನೆಗೆ ಬರಲು ಸಾಧ್ಯವಿರಲಿಲ್ಲ. ಸಾಯಂಕಾಲ ೫ ಘಂಟೆಗೆ ನಾನು ಮನೆಗೆ ಬರುವಾಗ ಮಾಲತಿಯು ಕೆಲಸವೆಲ್ಲಾ ತೀರಿಸಿ ತಿರುಗಾಡಲಿಕ್ಕೆ ಹೋಗಲು ಸಿದ್ಧಳಾಗಿ ಬಾಗಿಲಲ್ಲಿ ನಿಲ್ಲುವಳು. ಹೀಗೆಯೇ ನಾಲ್ಕು ತಿಂಗಳು ನಾವು ಸ್ವರ್ಗಸುಖ ಸಹಾ ತುಚ್ಛವೆಂದಿದ್ದೆವು. ದಿನಗಳು ಹೇಗೆ ಕಳೆದು ಹೋಗುತ್ತವೆಯೋ ಬಲ್ಲವರಾರು? ನಮ್ಮ ಸಮಾನ ಸುಖಿಗಳು ಯಾರೂ ಇಲ್ಲ, ಇನ್ನು ಈ ಸಂಸಾರದ ರಾಟೆಯು ಹೀಗೆಯೇ ಸರಾಗವಾಗಿ ನಡೆಯುವದೆಂತ

ನಾವು ಹಿಗ್ಗುತ್ತಿದ್ದೆವು. ನಮ್ಮ ಸುಖೋಪಭೋಗದಲ್ಲಿ ವಿಘ್ನ ಬಂತು. ಮಾಲತಿಗೆ ವಾಂತಿ, ತಲೆನೋವು, ಪ್ರತಿಯೊಂದರ ವಾಸನೆ ಬರಲಾರಂಭ ವಾಯಿತು. ಅವಳು ನನ್ನ ಮನಸ್ಸನ್ನು ನೋಯಿಸಬಾರದೆಂತ ಎಷ್ಟೋ ಪ್ರಯತ್ನ ಮಾಡುತ್ತಿದ್ದಳು; ಸಹನ ಮಾಡುತ್ತಿದ್ದಳು. ಕಡೆಗೆ ಮೂರು ತಿಂಗಳಾದ ನಂತರ ನಮಗೆ ಸಂಶಯ ಬಂತು. ಡಾಕ್ಟರರಿಗೆ ತೋರಿಸಿದೆವು. ಡಾಕ್ಟರರು ರೋಗವೇನೂ ಇಲ್ಲವೆಂತ ನಕ್ಕರು. ನನಗೆ ಮಾಲತಿಯನ್ನು ಊರಿಗೆ ಕಳುಹಿಸುವ ಮನಸ್ಸಿರಲಿಲ್ಲ. ಆದರೆ, ಅವಳು ದಿನೇದಿನೇ ಕ್ಷೀಣ ವಾಗುತ್ತಾ ಬಂದಳು. ಪರ ಊರು. ಒಂದು ವೇಳೆ ಊರಿಂದ ಯಾರಾದರೂ ಬಾಣಂತಿತನಕ್ಕೆ ಬಂದರೂ ಪರಿಚಯವಿಲ್ಲದ ಊರಿನಲ್ಲಿ ಏನು ಮಾಡುವುದು? ಹಾಗಾಗಿ ಅವಳ ತಂದೆ ಬಂದು ಮಾಲತಿಯನ್ನು ಕರಕೊಂಡುಹೋದರು. ಹಾಗೂ ಹೀಗೂ ಮಾಲತಿಯು ಹೊರಟುಹೋದಳು. ಅವಳು ಹೋದ ನಂತರ ನನಗೆ ಮನೆಯು ಸ್ಮಶಾನದಂತೆ ತೋರುತ್ತಿತ್ತು. ೫-೬ ತಿಂಗಳ ನಂತರ ಮಾಲತಿಯು ಪ್ರಸವಿಸಿ ಗಂಡು ಶಿಶುವೆಂತ ತಂತಿ ಬಂತು. ಆಕೆಯು ಗಂಡು ಮಗು ಹೆತ್ತಳೆಂತ ಆನಂದವಾಯಿತು. ಆದಕ್ಕಿಂತ ಹೆಚ್ಚು ಬೇಗನೇ ನನ್ನ ಮಾಲತಿಯು ಮನೆಗೆ ಬರುವಳೆಂತ ಆನಂದವಾಯಿತು. ಮಗುವಿಗೆ ೪ ತಿಂಗಳಾ ಯಿತು, ೫ ಆಯಿತು, ೬ ಆಯಿತು. ಇನ್ನೂ ನಮ್ಮ ಮಾವನವರಿಗೆ ಮಗಳನ್ನು ಕಳುಹಿಸುವ ಮನಸ್ಸಿಲ್ಲ. ಕಡೆಗೆ, ಎಷ್ಟೆಂತ ಮನುಷ್ಯನು ತಾಳುವದು? ನಾನು ನನಗೆ ಮೈ ಸರಿಯಿಲ್ಲವೆಂತ ತಂತಿ ಕೊಟ್ಟೆ. ಮಾಲತಿಗೆ ಸುಮ್ಮನೇ ಗಾಬರಿ ಮಾಡಿದೆ ಎಂತ ಆ ಮೇಲೆ ನೊಂದುಕೊಂಡೆ. ಆದರೆ ಮಗಳನ್ನು ಹೀಗೆ ಒಂದಿಲ್ಲದಿದ್ದರೊಂದು ನೆವನದಿಂದ ಇಟ್ಟುಕೊಳ್ಳುವುದಾದರೆ ಮದುವೆ ಏತಕ್ಕೆ ಮಾಡಬೇಕಾಗಿತ್ತು?

ಕಡೆಗಂತೂ ಮಾಲತಿಯು ಹೊರಟ ತಂತಿ ಬಂತು. ನಾನು ಮನೆಯೆಲ್ಲಾ ಸ್ವಚ್ಛಮಾಡಿದೆ. ಅವಳು ಬರುವ ಮುಂಚಿನ ರಾತ್ರಿಯಂತೂ ನನಗೆ ನಿದ್ದೆ ಸಹಾ ಇಲ್ಲ. ಬೆಳಿಗ್ಗೆ ಯಾವಾಗಲೂ ೭॥ ಘಂಟೆಗೆ ಏಳುವವನು ಅಂದು ೫ ಘಂಟೆಗೆ ಎದ್ದು ಮುಖಮಾರ್ಜನೆ ಮಾಡಿ, ಮಾಲತಿಯ ಅಚ್ಚುಮೆಚ್ಚಿನ 'ಸೂಟ್' ಹಾಕಿಕೊಂಡೆ. ಮೋಟಾರು ತೊಳೆದು ಹೊರಟೆ. ಮನೆಯಲ್ಲಿ ಅಷ್ಟೇ ಎಲ್ಲಾ ವ್ಯವಸ್ಥಿತವಾಗಿತ್ತು. ನಾವು ಮಲಗುವ ಕೋಣೆಯನ್ನಂತೂ ಆಗ ತಾನೇ

ಮದುವೆಯಾದ ದಂಪತಿಗಳಿಗೆ ಮಲಗಲಿಕ್ಕೆ ಶೃಂಗರಿಸುವಂತೆ, ಹೂಗಳು, ಅಗಸರ ಬಿಳಿಬಟ್ಟೆಗಳು ಇವುಗಳಿಂದ ಎಲ್ಲಾ ಸಜ್ಜುಗೊಳಿಸಿದೆ. ೬ ಘಂಟೆಗೆ ಸ್ಟೇಶನಿಗೆ ಹೋದೆ. ಗಾಡಿಯು ಸರಿಯಾದ ವೇಳೆಯಲ್ಲಿ ಬಂತು. ನನ್ನ ಹೃದಯವೂ ಆನಂದದಿಂದ ಉಕ್ಕುತ್ತಿತ್ತು. ಆದರೇನು? ನನ್ನ ಪತ್ನಿಯ ಜತೆಯಲ್ಲಿ ನನ್ನ ಅತ್ತೆಯವರು, ನನ್ನ ಮಾಲತಿಯ ತಂಗಿ ನಿರುಪಮಾ!........

ಹೇಗಾದರೂ ಮನೆಗೆ ಬಂದೆವು. ಬಂದಾಕ್ಷಣ ನಮ್ಮ ರೂಮಿನಲ್ಲಿ ಹೋಗಿ ನಾನು ಸಜ್ಜುಗೊಳಿಸಿದ ರೂಮನ್ನು ನೋಡಿ ಮಾಲತಿಯು ಶಿಫಾರಸು ಮಾಡಬೇಕು, ಒಂದು ಮು....ತ್ತಾದರೂ ಕೊಡಬೇಕು ಎಂತ ನಾನು ಪ್ರಯತ್ನ ಮಾಡಿದೆ. ರಾತ್ರಿಯ ತನಕ ಆಗಲೇ ಇಲ್ಲ. ನಿರುಪಮೆಯು ಅವಳನ್ನು ಅಗಲುತ್ತಲೇ ಇರಲಿಲ್ಲ. ರಾತ್ರಿಯೂ ತಾನು ಅಕ್ಕನೊಡನೆ ಮಲಗುತ್ತೇನೆಂತ ಹಟ ಹಿಡಿದಳು. ಆದರೆ, ಆಗ ಮಾತ್ರ ನಾನು ಮಾಲತಿಯನ್ನು ಮುಂದು ಹಾಕಿದೆ. ಅವಳು ಏನು ಹೇಳಿದಳೋ, ಅಂತು ಆ ರಾತ್ರಿ ನಿರುಪಮೆ ನಮ್ಮೊಡನೆ ಮಲಗಲಿಲ್ಲ. ಮಧ್ಯದಲ್ಲಿ ನಮ್ಮ ಯುವರಾಯನು ಮಾತ್ರ ಘಳಿಗೆಗೆ ಹತ್ತು ಸಾರಿ ಎದ್ದು ತೊಂದರೆ ಮಾಡಿದನು.

ಈಗ ಮುಂಚಿನಂತೆ ಮಾಲತಿಗೆ ಬಿಡುವೇ ಇಲ್ಲವಾಯಿತು. ಎಲ್ಲಾದರೂ ನಾವಿಬ್ಬರೂ ಮಾತನಾಡುತ್ತಾ ಕೂತಿದ್ದರೆ ಸುರೇಶನ ಅಳು. ಅತ್ತೆಯವರು ಮಾಲತಿಯನ್ನು ಕೂಗೋಣ. ನಿರುಪಮೆ ಬೇರೆ ನಮ್ಮ ಏಕಾಂತದಲ್ಲಿ ಬಂದು ಅಡ್ಡಿ ಮಾಡೋಣ........

ನಾನು ಎಲ್ಲಾದರೂ ಏನಾದರೂ ಮಕ್ಕಳಂತೆ ಮಾಡಲಿಕ್ಕೆ ಹೋದರೆ ಮಾಲತಿ "ಇದೇನಿದು, ಮೂರು ಮಕ್ಕಳ ತಂದೆಯಾಗಿ ಮಕ್ಕಳ ಎದುರಿಗೆಲ್ಲ?" ಎಂತ ಅವಳ ದೊಡ್ಡವಾದ ಕಣ್ಣುಗಳನ್ನು ಮುಗುಳುನಗೆ ನಗುತ್ತ ನನ್ನ ಮೇಲೆ ಬಿಡುತ್ತಾಳೆ.

---



## ಶ್ರೀ ಜಿ. ಬಿ. ಜೋಶಿಯವರು, ಧಾರವಾಡ

ಇವರು 'ಜಡಭರತ' ಎಂಬ ಗುಪ್ತನಾಮದಿಂದ ಪ್ರಸಿದ್ಧರಾಗಿದ್ದಾರೆ. ಈಗ ಧಾರವಾಡದ ಮನೋಹರ ಗ್ರಂಥಮಾಲೆಯ ಸಂಪಾದಕರಾಗಿದ್ದಾರೆ. ಅನೇಕ ಚಿಕ್ಕ ಕತೆಗಳನ್ನೂ ಹರಟಿಗಳನ್ನೂ ಅಲ್ಲಲ್ಲಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಇವರ 'ಧರ್ಮಸೆರೆ' ಎಂಬ ಒಳ್ಳೆಯ ಕಾದಂಬರಿಯು ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟವಾಗಿದೆ. ಹೆಚ್ಚಾಗಿ ಹಾಸ್ಯರಸದ ಕತೆಗಳನ್ನೇ ಬರೆಯುತ್ತಾರೆ. ಮತ್ತು ಅವುಗಳಲ್ಲಿ ಅವರಿಗೆ ಹೆಚ್ಚು ಸಾಫಲ್ಯವು ದೊರಕಿದೆ. ಶೈಲಿಯು ಸರಳವಾಗಿ ಮೃದುವಾಗಿದೆ. ಅಲಂಕಾರಗಳು ಕಡಿಮೆ; ಇದ್ದರೂ ವ್ಯಂಗ, ವಿಡಂಬನಾತ್ಮಕ. ಈ ಕತೆಯು ಒಂದು ಹರಟೆಯಂತೆ ಇದೆ. ಇವರ ಕತೆಗಾರಿಕೆಗಿಂತಲೂ ಹರಟೆಗಾರಿಕೆಯು ಉತ್ತಮವಾಗಿದೆ.

# ಇದ್ದದ್ದು ಇದ್ದ ಹಾಗೆ

'ಜಡಭರತ'ರು

ನಾನೊಮ್ಮೆ ಒಂದು ಕನಸು ಕಂಡೆ. ಅದ್ಭುತರಮ್ಯವಾದ ಕನಸು! ಒಂದು ಮುಂಜಾನೆ, ನಾನು ನನ್ನ ಕೋಣೆಯಲ್ಲಿ ಕುಳಿತುಕೊಂಡಾಗ, ನಾನು ಕಂಡ ಆ ಕನಸಿನ ನೆನಪು ನನ್ನಲ್ಲಿ ಎಂದಿನಿಂದಲೂ ಹುದುಗಿಕೊಂಡಿದ್ದ ಒಂದು ಆಶೆಯನ್ನು ಕೆಣಕಿ ಎಚ್ಚರಿಸಿತು. 'ನಾನು ಕೀರ್ತಿಯನ್ನು ಗಳಿಸಬೇಕು; ದೊಡ್ಡವನಾಗ ಬೇಕು; ಎಲ್ಲರ ಬಾಯಲ್ಲಿಯೂ ನನ್ನ ಹೆಸರು ಉಳಿಯಬೇಕು' ಎಂಬುದೇ ನನ್ನ ಒಳಗೆ ಹುದುಗಿದ್ದ ಆಶೆ. ನನಗೇನೋ ಕೀರ್ತಿಯ ಆಶೆ ಹುಟ್ಟಿತು. ಆದರೆ 'ಏನು ಮಾಡಿದರೆ ಕೀರ್ತಿಬರಬಹುದು?' ಎಂದು ನನ್ನನ್ನು ನಾನೇ ಕೇಳಿ ಕೊಂಡೆ. ಯುದ್ಧದಲ್ಲಿ ವೀರಮರಣವನ್ನು ಹೊಂದಿ ಕೀರ್ತಿಯನ್ನು ಸಂಪಾದಿಸ ಬೇಕೆಂದರೆ, ಇದು ಯುದ್ಧಕಾಲವಲ್ಲ! ಅಲ್ಲದೆ 'ಸಾವು' ಎಂದರೆ ನನಗೆ ಅಂಜಿಕೆ. ಒಳ್ಳೇ ನನ್ನ ಅಚ್ಚುಮೆಚ್ಚಿನ ಹೆಂಡತಿ ಸತ್ತರೇ, ನಾನು ಸಾಯುವ ಗೋಜಿಗೆ ಹೋಗಲಿಲ್ಲ. ಇನ್ನು ಈ ಕೀರ್ತಿಗಾಗಿ ಸಾಯುವೆನೇ?! ಉಹೂಂ. ಸತ್ತಮೇಲೆ ಕೀರ್ತಿ ಬಂದರೇನು, ಬಿಟ್ಟರೇನು? ಇದ್ದಾಗಲೆ ಕೀರ್ತಿಯನ್ನು ಗಳಿಸಬೇಕು. ಹಾಗಾದರೆ 'ಉಪವಾಸ' ಮಾಡಬೇಕು; ತಪಸ್ಸು ಮಾಡಬೇಕು. ಇದು ತಪಸ್ಸಿಗೂ ಕೀರ್ತಿ ಕಟ್ಟುವ ಕಾಲವಲ್ಲ. ನನ್ನನ್ನು 'ಹುಚ್ಚ' ಎಂದು ಬಿಟ್ಟಾರು! ಹಾಗಾದರೆ ಏನು ಮಾಡಬೇಕು? ನಾನು ಸತ್ತಿರಬಾರದು; ಕೀರ್ತಿಮಾತ್ರ ಬಂದಿರ ಬೇಕು. ಇದಕ್ಕೆ ಯಾವ ಉಪಾಯವನ್ನು ಹುಡುಕಬೇಕು ಎಂದು ಹೀಗೆ ಸುತ್ತಾಡುತ್ತಿರುವಾಗ ನನ್ನ ಕನಸಿನ ನೆನಪಾಯಿತು. ಕಷ್ಟಪಡದೆ ಕೀರ್ತಿಯನ್ನು ಗಳಿಸ ಬೇಕಾದರೆ ನನ್ನ ಈ ಕನಸೇ ಉಪಯೋಗಕ್ಕೆ ಬೀಳಬಹುದೆಂದೆನಿಸಿತು. ಯಾಕಂದರೆ ಈಗಿನ ಕಾಲದಲ್ಲಿ ಸಾಹಿತ್ಯಕ್ಷೇತ್ರದಲ್ಲಿ, ಕೀರ್ತಿಯನ್ನು ಗಳಿಸು ವುದು ತೀರ ಅಗ್ಗದ ಮಾತೆಂದು, ಈಗಿನ ಬರಹಗಾರರ ಅಟ್ಟಹಾಸವನ್ನು ನೋಡಿ ನನ್ನ ನಂಬಿಕೆಯಾಗಿದೆ. ದುಡಿಯದೆ, ದುಃಖಪಡದೆ ನನಗೆ ಕೀರ್ತಿ ಬರುತ್ತದಲ್ಲಾ ಎಂದು ನನಗೆ ಹಿಗ್ಗು. 'ಇದೊಂದು ಅಪೂರ್ವವಾದ ಕನಸು! ಇದಕ್ಕೆ ಸರಿಯಾದ ರೂಪ-ಬಣ್ಣ ಕೊಟ್ಟು ಮುದ್ರಿಸಿದರೆ ಜನರಿಗೂ ರುಚಿರುಚಿ ಯಾಗಿ ಆನಂದವಾಗಬಹುದು. ನನಗೂ ಕೀರ್ತಿಬಂದು ನನ್ನೊಳಗಿನ ಆಶೆ

ಹಿಂಗಬಹುದು' ಎಂದು ನನ್ನ ಮನಸು ಕೀರ್ತಿಯು ಹುಟ್ಟಿಸಿದ ಆಶೆಯ ಬೆನ್ನು ಹತ್ತಿ ಒಳ್ಳೇ ಭರದಿಂದ ಸಾಗಿತು.

ಕೋಣೆಯ ಬಾಗಿಲಿಕ್ಕಿ ಬಂದು ಕುರ್ಚಿಯ ಮೇಲೆ ಕುಳಿತು, ಬಿಳಿಕಾಗದ ಗಳನ್ನು ಎದುರಿಗೆ ಇಟ್ಟುಕೊಂಡು, ಕೈಯಲ್ಲಿ 'ಫೌಂಟನ್ ಪೆನ್' ತೆಗೆದು ಕೊಂಡು ವಿಚಾರಮಾಡುತ್ತಾ ಕುಳಿತುಕೊಂಡೆ. 'ನನ್ನ ಕನಸನ್ನು ಯಾವ ರೂಪದಲ್ಲಿ ಬರೆಯಬೇಕು? ಕಾವ್ಯದಲ್ಲಿ ಬರೆದು ಬಿಡೋಣ ಅಂದರೆ 'ಕವಿ ಸಾರ್ವಭೌಮ'ನಾಗ ಬಹುದು' ಎಂದು ಕಾಗದದ ಮೇಲೆ ಕೈಯಿಡಲು, ತಲೆಯಲ್ಲಿಯ ವಿಚಾರದ ಶೆಲೆಯೇ ಬತ್ತಿಹೋಯಿತು. ಅಕ್ಷರಗಳೇ ಮೂಡಲಿಲ್ಲ. ಸ್ಫೂರ್ತಿ ಮರೆಯಾಯಿತು. ಹಿಂದಿನ ಜನ್ಮದ ವೈರ ಇದ್ದಿರಬೇಕು. ಬುದ್ಧಿ ಒಮ್ಮೆ ಅದನ್ನು ಹೀಯಾಳಿಸಿತ್ತು. ಅಂತೇ ಈಗ ಅದು ತಪ್ಪಿಸಿಬಿಟ್ಟಿತು. ಆಯಿತು, ಬುದ್ಧಿಗಾದರೂ ಮೊರೆಹೋಗೋಣ ಎಂದರೆ ಅದೂ ವೇಳೆಗೆ ಬರಲಿಲ್ಲ. ಮನಸು ಮುಂಗಾಣದೆ ಸುಮ್ಮನೆ ಕುಳಿತಿತು............'ಹಾಗಾದರೆ,ಇದ್ದ ಕ್ಕಿದ್ದಂತೆ ಗದ್ಯದಲ್ಲಿ ಬರೆದುಬಿಡಲೇ?...........ಛೇ, ಅಸ್ಥಿಪಂಜರದಂತೆ ಆಗುತ್ತದೆ. ಜನರು ನೋಡಿ ಅಂಜಬಹುದು! ಸತ್ಯವಿದ್ದರೂ ಪ್ರಿಯವಿರಬೇಕು—ಹಾಗಾದರೆ ಗದ್ಯದಲ್ಲಿ ಯಾವ ರೂಪ ಕೊಡಬೇಕು? ಚಿಕ್ಕ ಕತೆ ಮಾಡಿ ಹೇಳಿದರೆ........? ಹಾಂ! ಆದರೆ ಆ ಕನಸಿನ ಸನ್ನಿವೇಶಕ್ಕೆ ಕತೆಯ ರೂಪ ಒಪ್ಪುವದಿಲ್ಲ. ಏನೇ ಆಗಲಿ—ನಾಟಕ ರೂಪದಲ್ಲಿ ಬರೆದು ಬಿಡೋಣ' ಎಂದು ನನ್ನ ಮನಸು ಎತ್ತೆತ್ತೋ ಸುತ್ತಾಡಿ ಈ ನಿರ್ಣಯಕ್ಕೆ ಬಂದು ಮುಟ್ಟಿತು.

ಕೂಡಲೆ ಕಾಗದಗಳನ್ನು ಸರಿಮಾಡಿಟ್ಟುಕೊಂಡೆ. ಬರೆಯುವ ಹುರುಪಿನಿಂದ ಸಜ್ಜಾಗಿ ಕುಳಿತುಕೊಂಡೆ. ಒಳಗೆ 'ದೇವರಾಜ ಬಹದ್ದೂರ ಪಾರಿತೋಷಕ ನನ್ನ ಕೈಗೇ ಬರುತ್ತದೆ!....ಒಂದು ವೇಳೆ 'ನೋಬೆಲ್'....ಹೂಂ' ಎಂದು ಮನಸು ಕುಲುಕುಲು ನಗುತ್ತಿತ್ತು. ಮನಸು ಗಾಳಿ ತುಂಬಿದಂತಾಗಿ ಒಳ್ಳೇ ವೇಗದಿಂದ ಓಡಹತ್ತಿತು. ಸನ್ನಿವೇಶವೆಲ್ಲ ಮೊದಲೇ ಸಿದ್ಧವಿತ್ತು. ಸಾವಕಾಶವಾಗಿ ಮೊದಲನೆಯ ಪುಟದ ಮೇಲೆ "ಸ್ವಯಂವರ" ಎಂದು ನಾಟಕದ ಹೆಸರನ್ನು ಮೊದಲು ಚೊಕ್ಕಟಾಗಿ ಬರೆದೆ. ಅದರ ಕೆಳಕ್ಕೆ ಒಂದೆರಡು ಸುಳಿಗಳನ್ನು ತೆಗೆದು ತಲೆಕಟ್ಟು ಅಂದವಾಗಿ ಕಾಣುವಂತೆ ಮಾಡಿದೆ. ಆ ಸುಳಿಗಳ ಮಧ್ಯದಲ್ಲಿ, ಜಿನುಗಾಗಿದ್ದರೂ, ಎದ್ದು ಕಾಣುವಂತೆ ನನ್ನ ಹೆಸರು

ಹಾಕಿದೆ. ಅಲ್ಲಿಂದ ಅದರ ಕೆಳಗೆ "ಒಂದಂಕಿನ ನಾಟಕ" ಎಂದೂ ಬರೆದೆ. ಆ "ಒಂದಂಕಿನ" ಹಿಂದೆ 'ಆವಿದ್ಧೋ—ಸುಕುಮಾರೋ,' 'ರುದ್ರೋ—ಭದ್ರೋ,' 'ಮುದಗೊನೇನೋ—ಹದಗೊನೇನೋ,' 'ವಿಷಾದಾಂತೋ—ಸುಖಾಂತೋ' 'ದುಃಖಜನ್ಯೋ—ಸುಖಜನ್ಯೋ,' ಏನಾದರೊಂದು ಜೋಡಿಸಬೇಕೆಂದೆ. ಆದರೆ ನನ್ನ ನಾಟಕದ ಅಂತವೇ ನನಗೆ ಗೊತ್ತಿರಲಿಲ್ಲ; ಅಲ್ಲದೆ ನಾಟಕಕ್ಕೆ ಅಂತವೇನು ಕಾರಣವಿಲ್ಲ. ಬೇಕಾದರೆ 'ಅಂತವಿಲ್ಲದ ಒಂದಂಕಿನ ನಾಟಕ' ಎಂದು ಬರೆಯುಬಹುದಾಗಿತ್ತು. ಆದರೆ ಜನರು ಓದಲಿಕ್ಕಿಲ್ಲೆಂಬ ಭಯದಿಂದ 'ಒಂದಂಕಿನ' ಎಂದಿಷ್ಟೇ ಇಟ್ಟುಬಿಟ್ಟೆ. ಹೊಸತೇನಾದರೂ ನನ್ನ ನಾಟಕದಲ್ಲಿರ ಬೇಕೆಂದು ಪಾತ್ರಗಳ ಪರಿವಿಡಿ, ನಾಂದೀ ಪದ್ಯ ಇವುಗಳನ್ನು ಹಾರಿಸಿ ಒಮ್ಮೆಲೆ "ದೃಶ್ಯ ೧" ಎಂದು ಬರೆದು ನಾಟಕದ ಸನ್ನಿವೇಶವನ್ನೇ ಸುರುವುಮಾಡಿದೆ:

[ಬೆಳದಿಂಗಳ ಮಧ್ಯರಾತ್ರಿ. ಮೋಡಗಳಿಲ್ಲದ ಆಕಾಶ. ಒಂದು ದೊಡ್ಡ ಪರ್ವತದ ಮಗ್ಗುಲಲ್ಲಿ ಒಂದು ಚಿಕ್ಕ ಪ್ರವಾಹವು ಗಂಭೀರವಾಗಿ ಹರಿಯುತ್ತಿದೆ. ಪ್ರವಾಹದ ಈಚೆಯ ಮಗ್ಗುಲು ನಿಬಿಡವಾದ ಅರಣ್ಯ. ತುಣುಕು ಮಿಣುಕಾದ ಬೆಳ ದಿಂಗಳು ಅಲ್ಲಲ್ಲಿ ಬಿದ್ದಿದೆ; ಕತ್ತಲೆಯೇ ಹೆಚ್ಚು. ನಿಶ್ಶಬ್ದವೆಂದರೂ ಆಗಾಗ್ಗೆ ಸುಳಿ ಗಾಳಿಗೆ ಉದುರುತ್ತಿದ್ದ ತರಗೆಲೆಗಳ 'ಚಟ್—ಪಟ್' ಶಬ್ದವು ಕೇಳಬರುತ್ತಿದೆ. ಪ್ರವಾಹದ ಧ್ವನಿಯು ಒಂದೇ ಸಮನೆ ಬೀಸುವ ಧ್ವನಿಯಂತೆ ಕೇಳಬರುತ್ತಿದೆ.]

ಈ ರೀತಿಯಾಗಿ ಸನ್ನಿವೇಶ ವರ್ಣನೆಯನ್ನು ಮಾಡಿ ಪಾತ್ರಪರಿಚಯಕ್ಕೆ ಆರಂಭಮಾಡಿದೆ:

[ಒಬ್ಬ ತರುಣನು ನಿತ್ರಾಣನಾಗಿ ಗಾಬರಿಗೊಂಡವನಂತೆ ನಿಂತಿದ್ದಾನೆ. ಬರಿಮೈ. ಹರಕು ಚಿಂದಿಯೊಂದನ್ನು ಉಟ್ಟುಕೊಂಡಿದ್ದಾನೆ. ಅದರದೇ ಕೆಲಭಾಗವನ್ನು ಹೆಗಲ ಮೇಲೆ ಹೊದ್ದುಕೊಂಡಿದ್ದಾನೆ ಸುತ್ತು ಮುತ್ತಲೂ ನೋಡುತ್ತಾ ಆಲಸ್ಯದ ಸಡಿಗೆ ಯಿಂದ, ಅಲ್ಲಿಯೇ ಒಂದು ಬಂಡೆಯ ಮೇಲೆ ಹೋಗಿ ಕುಳಿತುಕೊಂಡು, ಎರಡೂ ಕೈಗಳಲ್ಲಿ ಮುಖವನ್ನು ಮುಚ್ಚಿಕೊಂಡು ಕುಳಿತನು. ಅಲ್ಲಿಂದ ಒಂದೆರಡು ನಿಮಿಷ ಗಳಾದ ಮೇಲೆ ಒಂದು ಸಿಂಹಗರ್ಜನೆಯು ತೀರಾ ಸಮೀಪದಲ್ಲಿಯೆ ಕೇಳ ಬರುತ್ತದೆ. ಆಗ್ಗೆ ...........]

ಮುಂದೇನು? ಮಾತುಗಳೇ ಹೊರಡಲೊಲ್ಲವು. ಆ ತರುಣನನ್ನು ಇಂತಹದೊಂದು ಭಯಂಕರ ಪರಿಸ್ಥಿತಿಯಲ್ಲಿ ತಂದು ಧೈರ್ಯದ ಒಂದೆರಡು ಮಾತುಗಳನ್ನು ಆತನಿಂದ ಆಡಿಸಬೇಕೆಂದು ನಾನು ಮೊದಲು ಮಾಡಿ

ಕೊಂಡಿದ್ದೆ. ಆದರೆ ಸಿಂಹಗರ್ಜನೆಯು ನನಗೇ ಕೇಳಿಸಿದಂತಾಗಿ ನನ್ನ ಮಾತುಗಳೇ ಹೋದುವು. ಅಂದ ಮೇಲೆ ಆ ತರುಣನು ಮಾತಾಡುವುದು ಹೇಗೆ? ಮತ್ತೊಮ್ಮೆ ಬರೆದದ್ದನ್ನು ಮೊದಲಿನಿಂದಲೂ ಓದಿಕೊಂಡೆ. ಮೈಯಲ್ಲಿ ನಡುಗು ಹುಟ್ಟಿತು ಭಯದಿಂದ. ಮುಸುಗರಿದೆ, ಹರಿದಾಡಿದೆ. ಮಾತು ಗಳೇನು ಬರಲಿಲ್ಲ. ನಾನು ಪುಕ್ಕನಿದ್ದರೂ ಧೈರ್ಯಶಾಲಿಯಾದ ಒಂದು ಪಾತ್ರವನ್ನಾದರೂ ನಿರ್ಮಾಣ ಮಾಡಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದೆ. ಆದರೆ ಒಂದು ಹೋಗಿ ಒಂದಾಗುವ ಹೊತ್ತು ಬಂತು. ನನ್ನ ಕನಸಿನ ಸನ್ನಿವೇಶಕ್ಕೆ ಆ ತರುಣನು ಧೈರ್ಯಶಾಲಿಯಾಗದಿದ್ದರೆ ಗತ್ಯಂತರವಿರಲಿಲ್ಲ. ಅಂಜಿಕೆಯ ಮಾತುಗಳನ್ನಾಡಿದರೆ ಇಡೀ ನಾಟಕವೇ ಹದಗೆಡುತ್ತಿತ್ತು. ಬಹಳ ಚಡಪಡಿಸಿದೆ. ಧೈರ್ಯವನ್ನು ತಂದುಕೊಳ್ಳಬೇಕೆಂದು ಬೇಕಾದಷ್ಟು ಪ್ರಯತ್ನ ಮಾಡಿದೆ. ತಲೆ ಕೆರೆದುಕೊಂಡೆ; ಕಣ್ಣು ಸೊಟ್ಟಮಾಡಿದೆ; ಮೂಗು ಮುರಿದೆ; ಬಾಯಲ್ಲಿ ಬೊಟ್ಟಿಟ್ಟೆ; ತುಟಿಗಳನ್ನು ಹಿಂಡಿದೆ; ಹುಬ್ಬುಗಳನ್ನು ಗಂಟುಹಾಕಿದೆ; ಆಕಾಶದ ಕಡೆಗೆ ದಿಟ್ಟಿಸಿ ನೋಡಿದೆ;—ಎಲೆ ಅಡಕೆ ಹಾಕಿಕೊಂಡೆ; ತಂಬಾಕ ಹಾಕಿ ಬಹಳ ಹೊತ್ತು ಬಾಯಲ್ಲಿ ಹಿಡಿದೆ; ಸಿಗರೇಟು ಸೇದಿದೆ; ನಸ್ಯಪುಡಿ ಏರಿಸಿದೆ; ನೀಲಗಿರಿ ಎಣ್ಣೆ ಮೂಸಿದೆ; ಏನಾದರೂ ಧೈರ್ಯ ಬರಲಿಲ್ಲ; ಮಾತು ಹೊರಡಲಿಲ್ಲ. ಏನು ಮಾಡಬೇಕು? ಇದು ನನ್ನ ನಾಟಕ! ತರುಣನು ಅಂಜಿ ದರೆ ಏನು ಬಾಧೆ?....ಅಯ್ಯೋ, ನಾಟಕದ ನಾಯಕನು ಧೀರೋದಾತ್ತನಾಗಿರ ದಿದ್ದರೆ 'ದೇವರಾಜ ಬಹದ್ದೂರ ಪದಕ' ಹೋಗುತ್ತದಲ್ಲ! ಅದು ಹೋದ ಮೇಲೆ ನನಗೆ ಕೀರ್ತಿ ಎಲ್ಲಿಂದ ಬರಬೇಕು? ಏನು ಮಾಡಲಿ? ಬಹಳ ವ್ಯಥೆ ಯಾಯಿತು. ಕೊನೆಗೆ ಮುಂದೆ ನಾಟಕವನ್ನು ಸಾಗಿಸಿಯಾದರೂ ನೋಡೋಣ ಎಂದು ಸಾಗಿಸಿದೆ:

ತರುಣ—(ಬೆದರಿಬಿದ್ದು) ಅವ್ವಾ........! ಅವ್ವಾ........! (ಅಲ್ಲಿಂದ ಕೆಲ ಹೊತ್ತಿನ ಮೇಲೆ ಧೈರ್ಯದಿಂದ ಎದ್ದು ನಿಂತು) ರಾಜ ಮಂದಿರದಲ್ಲಿ ಹುಟ್ಟ ಬಾರದಾಗಿತ್ತು. ನಾನೊಬ್ಬ ತಿರುಕನಾಗಿದ್ದರೆ....? ಈ ಗತಿಯೆಲ್ಲಿ ಬರುತ್ತಿತ್ತು? (ಮತ್ತೊಮ್ಮೆ ಸಿಂಹಗರ್ಜನೆಯಾಯಿತು.)

**ತರುಣನು ಚಿಟ್ಟನೆ ಚೀರಿ ಮೂರ್ಛೆಹೋದನು.**

ಆಯಿತು. ನನ್ನ ನಾಟಕವೇ ಮುಗಿದಂತಾಯಿತು. ವಿಶ್ವಪ್ರಯತ್ನ ಪಟ್ಟೆ. ತರುಣನು ತಿರುಗಿ ಏಳಲೇ ಇಲ್ಲ. ನಿರಾಶೆಯಿಂದ ಬರೆದ ಕಾಗದಗಳ ಮೇಲೆಯೇ ಹಣೆಯನ್ನಿಟ್ಟು ಉಸುರ್ಗರೆದೆ. ಕಣ್ಣೀರು ಹಾಕಿದೆ. ಏನೂ ಉಪಯೋಗವಾಗಲಿಲ್ಲ. ನಾನು ಹೀಗೆ ಕುಳಿತಿರುವಾಗ ನನ್ನ ಗೆಳೆಯರು ಬಾಗಿಲು ದಬ್ಬಿ ಒಳಗೆ ಬಂದು ನನ್ನನ್ನು ನೋಡಿ 'ಏನಾಗಿದೆ?' ಎಂದು ಕೇಳಿದರು. ಮಾತಾಡಲಿಕ್ಕೆ ಮುಖವಿಲ್ಲದೆ ಸುಮ್ಮನೆ ಕುಳಿತೆ. ನನ್ನ ಗೆಳೆಯರು ಬಹಳ ಒತ್ತಾಯ ಪಡಿಸಹತ್ತಿದರು. ನಿರ್ವಾಹವಿಲ್ಲದೆ ನನ್ನ ಈ ಕತೆಯನ್ನು ಅವರಿಗೆ ಹೇಳಿದೆ. ಅವರಲ್ಲಿ ಒಬ್ಬ ಗೆಳೆಯನೆಂದ:

"ಆ ಕನಸಾದರೂ ಏನಿದೆ ಹೇಳಿಬಿಡು ನೋಡೋಣ?"

ಉಳಿದ ಗೆಳೆಯರೂ ಅದೇ ಮಾತನ್ನೇ ಎತ್ತಿ ಹಿಡಿದರು.

ಆಗಲಿ ಎಂದು ಇದ್ದಕ್ಕಿದ್ದಂತೆ ನನ್ನ ಕನಸನ್ನು ಅವರಿಗೆ ಹೇಳಿದೆ:

"ನಾನು ಒಂದು ಅರಣ್ಯದಲ್ಲಿ ಏನೋ ವಿಚಾರಮಾಡುತ್ತ ಹೊರಟಿದ್ದೆ. ಆಗ ನಾನು ಮುಳುಗಿಹೋದ ಒಂದು ದೊಡ್ಡ ರಾಜ್ಯದ ರಾಜನ ಮಗನಾಗಿದ್ದೆ. ಯುದ್ಧದಲ್ಲಿ ನಮ್ಮವರೆಲ್ಲರೂ ಮಡಿದಿದ್ದರು. ನಾನೊಬ್ಬನೇ ಜಾರಿಬಿದ್ದ ತುತ್ತಿನಂತೆ ಯಮನ ದವಡೆಯೊಳಗಿಂದ ಪಾರಾಗಿದ್ದೆ. ಅರಣ್ಯದೊಳಗಿನ ಹಣ್ಣು ಕಾಯಿಗಳನ್ನು ತಿಂದು ಬದುಕುವುದು ನನ್ನ ಪಾಲಿಗೆ ಬಂದಿತ್ತು. ಮೈಮೇಲೆ ಬಟ್ಟೆಗಳಿದ್ದಿಲ್ಲ. ಮುಖದ ಮೇಲೆ ಕಳೆಯಿದ್ದಿಲ್ಲ. ಅರಣ್ಯದಲ್ಲಿ ತಿರುಗುತ್ತ ತಿರುಗುತ್ತ ಸಾಗಿದಾಗ್ಗೆ ದೂರದಲ್ಲಿ ಒಂದು ಪಟ್ಟಣವು ಕಾಣಿಸಿಕೊಂಡಿತು. ಧಾವಿಸಿ ಅತ್ತ ಕಡೆ ನಡೆದೆ. ಮಹಾದ್ವಾರಕ್ಕೆ ದ್ವಾರಪಾಲಕರನ್ನು 'ಇಂದೇನಿದೆ?' ಎಂದು ಕೇಳಿದೆ. 'ಸ್ವಯಂವರವಿದೆ' ಎಂದು ಉತ್ತರ ಕೊಟ್ಟರು. ನಾನೂ ಒಳಗೆ ಹೋಗಬೇಕೆಂದು ಆಶೆ ಹುಟ್ಟಿತು. ಹೊರಟೆ. ದ್ವಾರಪಾಲಕರು ತಡೆದರು. 'ಯಾಕೆ?' ಎಂದು ಕೇಳಿದೆ. 'ಮಹಾರಾಜರ ಅಪ್ಪಣೆಯಾಗಿದೆ' ಎಂದು ಕೈ ಮುಗಿದು ಹೇಳಿದರು. 'ಏನೆಂದು?' ಮತ್ತೆ ನಾನು ಕೇಳಿದೆ. "ವೃದ್ಧ ಜನರನ್ನು, ತರುಣ ರಾಜರನ್ನು ಇಷ್ಟೆ ಒಳಗೆ ಬಿಡಬೇಕೆಂದು ಅಪ್ಪಣೆಯಾಗಿದೆ. ಹೂಂ, ರಾಜರು ಬಂದರು, ದಯಮಾಡಿ ಈ ಜಾಗ ಬಿಡಿರಿ" ಎಂದು ಕೈಯಲ್ಲಿಯ ಕೋಲುಗಳಿಂದ ಹಿಂದಕ್ಕೆ ದಬ್ಬಿದರು. ಅಪಮಾನವಾದಂತಾಯಿತು. ಏನಾದರೂ ಮಾಡಿ ಒಳಗೆ ಹೋಗಿಯೇ ತೀರಬೇಕೆಂದು ನಿಶ್ಚಯಿಸಿ ಊರೊಳಗೆ

ಹೊರಟೆ. ಬೀದಿ ಬೀದಿ ತಿರುಗಿದೆ. ಯಾವ ಸಣ್ಣ ಸಂದಿಯೂ ಉಳಿಯಲಿಲ್ಲ. ಕೈಕಾಲುಗಳು ಸೋತಿದ್ದವು. ಗಂಟಲಾರಿತ್ತು. ಎಲ್ಲಿಯಾದರೂ ನೀರು ಕೇಳಿ ಕುಡಿಯಬೇಕೆಂದರೆ ಗಂಡಸರೊಬ್ಬರೂ ಕಾಣಲಿಲ್ಲ. ಮನೆಮನೆಗೂ ಹಣಿಕಿ ಹಾಕಿ ನೋಡಿದೆ. ಸುಳಿವು ಹತ್ತಲಿಲ್ಲ. ಕೊನೆಗೆ ಊರ ಹೊರಗೆ ದೂರ ಒಂದು ಸಂದಿಯಲ್ಲಿ ಹೋಗುವಾಗ್ಗೆ ಒಂದು ಸಣ್ಣ ಮನೆಯ ಕಡೆಗೆ ನನ್ನ ಲಕ್ಷ್ಯ ಹೋಯಿತು. ಒಳಗೆ ನೋಡಿದೆ. ಒಬ್ಬ ಮುಪ್ಪಿನ ಮುದುಕ ಕೆಲಸ ಮಾಡಿ ಮಾಡಿ ದಣಿದು ಗೋಡೆಗೆ ಒರಗಿಕೊಂಡು ಕುಳಿತಿದ್ದ. ನೀರು ಕೇಳಬೇಕೆಂದು ಒಳಗೆ ಹೊಕ್ಕೆ. ಮುದುಕನು ನಿದ್ದೆ ಮಾಡುತ್ತಿದ್ದಂತೆ ಕಂಡಿತು. ನಾನು ಬಂದದ್ದು ಅವನಿಗೆ ಗೊತ್ತೇ ಇರಲಿಲ್ಲ. "ಅಜ್ಜಪ್ಪಾ ನೀನು ಯಾಕೆ ಮಂಟಪಕ್ಕೆ ಹೋಗಿಲ್ಲ?" ಎಂದು ನಾನೇ ಕೇಳಿದೆ. ಮುದುಕನು ಗಾಬರಿಯಿಂದ ಎದ್ದು ನನ್ನನ್ನು ದಿಟ್ಟಿಸಿನೋಡಿ "ಬರ್ರಿ, ಬರ್ರಿ, ಯಪ್ಪಾ, ಕಣ್ಣು ಕಾಣಲಿಲ್ಲ" ಎಂದು ತನ್ನ ಗೊಂಗಡಿಯನ್ನು ಹಾಸಿದ. ಅದರ ಮೇಲೆ ಕುಳಿತುಕೊಂಡೆ. "ಅಲ್ಲಿಗೆ ಹೋಗಿ ಏನು ಮಾಡೋದೈತಿ? ಹೋಗವರು ಹೋಗ್ಯಾರ ಆತು" ಎಂದು ಮುದುಕನು ನಾನು ಮೊದಲು ಕೇಳಿದ್ದಕ್ಕೆ ಉತ್ತರಕೊಟ್ಟ. ಅಲ್ಲಿಂದ ನಾನು ನೀರು ಕೇಳಿದೆ. ಮುದುಕ ಒಳಗೆ ಹೋದ ನೀರು ತರಲಿಕ್ಕೆ. ನಾನು ಆತನು ಬರುವ ವರೆಗೆ ಸುತ್ತುಮುತ್ತಲೂ ನೋಡುತ್ತಾ ಕುಳಿತುಕೊಂಡೆ. ಬಣ್ಣ—ಕುಂಚು—ವಿಾಸೆ—ಗಡ್ಡ—ಇವನ್ನೆಲ್ಲ ನೋಡಿ ಬಣ್ಣಗಾರ ಮನಿ ಇರಬಹುದೆಂದು ತಿಳಕೊಂಡೆ. ಮುದುಕ ನೀರು ತಂದುಕೊಟ್ಟ. 'ಅಜ್ಜಪ್ಪಾ-ನೀವು ಯಾವ ಸೋಗು ಬರೀತೀರಿ?' ಎಂದು ನೀರು ಕುಡಿದು ಕೇಳಿದೆ. "ಯಪ್ಪಾ, ಇದು ಬ್ಯಾರೆ ಸೋಗು. ಹೇಳಿದರ ನಗೀ ಬರೋ ಮಾತು" ಎಂದು ಉತ್ತರಕೊಟ್ಟನು. "ಏನದು ಹೇಳು ಅಜ್ಜಪ್ಪಾ" ಎಂದು ಕುತೂಹಲದಿಂದ ಕೇಳಿದೆ. ಅಜ್ಜಪ್ಪ ಹೇಳಿದ: "ಏನ ಹೇಳ್ಲೀ ತಮ್ಮಾ, ಕಾಲಾ ಬದಲಾಗಿ ಹೋಗೇತಿ. ಗೋರಿಗೆ ಹೋಗೊ ಮುದುಕರಿಗೆ ಬಣ್ಣ ಬಡಿದೂ ಬಡಿದೂ ಬ್ಯಾಸರತ್ತು ಹೋಗೀನಿ. ನಮ್ಮ ರಾಜರ ಮಗಳ ದೈವಾ ನೋಡಬೇಕು, ಏನಾಗುತ್ತೋ?"

ನನಗೊಂದು ಯುಕ್ತಿ ಹೊಳೆಯಿತು. ಮುದುಕನನ್ನು ಕೇಳಿದೆ: "ಅಜ್ಜಪ್ಪಾ, ನನಗೂ ಮಂಟಪದಾಗ ಹೋಗಬೇಕೂ ಅಂತ ಆಶೆ ಹುಟ್ಟೈದೆ, ಏನು ಮಾಡಲಿ?" ಮುದುಕನು ನಗುತ್ತಾ ಹೇಳಿದ: "ಅದಾಕ್ರೀ ಯಪ್ಪಾ,

ಬಣ್ಣ ಬಡಕೊಂಡು ಹೋಗ್ರಿ, ಯಾರೇನ ಮಾಡ್ತಾರ." "ಹಾಗಾದರೆ ನನಗೆ ಬಣ್ಣಹಚ್ಚು" ಎಂದೆ. ಮುದುಕನು ಬಣ್ಣ ಹಚ್ಚಿದ. ಗಡ್ಡ ಮೀಸೆ ಕಟ್ಟಿದ. ಮಂಟಪಕ್ಕೆ ಹೊರಟೆ. ದ್ವಾರಪಾಲಕರು ಗುರುತಿಸದೆ ಒಳಗೆ ಬಿಟ್ಟರು. ಮುದಕನನ್ನು ಮನಸ್ಸಿನಲ್ಲಿಯೇ ಹೊಗಳಿದೆ. ಹೋದೊಡನೆ ಎದುರಿಗೆ ಒಂದು ದೊಡ್ಡ ಪಟಾಂಗಣವಿತ್ತು. ಅದರ ಸುತ್ತಲೂ ಎರಡಾಳೆತ್ತರ ಗೋಡೆ. ಆ ಗೋಡೆಗೆ ಹೊಂದಿಯೇ ಕಾಲುವೆ. ಕಾಲುವೆಯ ದಂಡೆಗುಂಟ ಗುಲಾಬೀಗಿಡ ಗಳು. ಅಲ್ಲಲ್ಲಿಗೆ ಚಾಕು ಹಸಿರು ಮಡಿಗಳು. ಮಂಟಪಕ್ಕೆ ಮೇಲೆ ಛತ್ತು ಹೊಡೆದಿದ್ದರು. ಮಂಟಪದ ಮಧ್ಯದಲ್ಲಿ ಎತ್ತರದ ಮೇಲೆ ಮಹಾರಾಜರ ವ್ಯಾಘ್ರಾಸನವಿತ್ತು. ಅದರ ಎಡಕ್ಕೆ ಅಷ್ಟೇ ಎತ್ತರದ ಮೇಲೆ ಮತ್ತೊಂದು ಆಸನವಿತ್ತು. ಅದು ಮಹಾರಾಣಿಯವರಿಗೆ. ವ್ಯಾಘ್ರಾಸನದ ಬಲಕ್ಕೆ ಸಿಂಹಾಸನವೊಂದಿತ್ತು. ಅದು ರಾಜಕುಮಾರಿಗೆ. ಈ ಆಸನಗಳ ಎದುರಿಗೆ ಕನ್ಯಾಪೇಕ್ಷಿಗಳಾಗಿ ಬಂದ ರಾಜರ ಸಲುವಾಗಿ ಆಸನಗಳನ್ನು ಸಾಲುಸಾಲಾಗಿ ರಿಸಿದ್ದರು. ಹಾಗೇ ಪ್ರೇಕ್ಷಕರ ಸಲುವಾಗಿ ಬೇರೆ ವ್ಯವಸ್ಥೆಯನ್ನು ಮಾಡಿದ್ದರು. ನಾನು ಎಲ್ಲಿಯೂ ಹೋಗದೆ, ಎಲ್ಲರ ಕಣ್ಣು ತಪ್ಪಿಸಿ, ಕಾಲುವೆಯ ದಂಡೆಯ ಮೇಲಿನ ಗುಲಾಬೀಗಿಡಗಳಲ್ಲಿ ಹೋಗಿ ನಿಂತುಕೊಂಡಿದ್ದೆ. ಮಂಟಪವು ರಾಜ ರಿಂದ, ಜನರಿಂದ ತುಂಬಿತು. ಕಹಳೆಯಾಯಿತು. ಮಹಾರಾಜರು ತಮ್ಮ ಪರಿವಾರದೊಡನೆ ಬಂದು ತಮ್ಮ ತಮ್ಮ ಆಸನಗಳನ್ನಲಂಕರಿಸಿದರು. ಅಲ್ಲಿಂದ ಒಬ್ಬ ಮುಪ್ಪಿನ ಮುದುಕ ಬ್ರಾಹ್ಮಣನು ರಾಜಕುಮಾರಿಯನ್ನು ಕೈಹಿಡಿದು ಕರೆದುಕೊಂಡು ಬಂದು ಮಹಾರಾಣಿಯವರ ಆಸನದ ಹತ್ತಿರ ನಿಲ್ಲಿಸಿದನು. ಮಹಾರಾಜರು ಎದ್ದು ನಿಂತು ತಮಗೆ ಹೇಳಬೇಕಾದದ್ದನ್ನೆಲ್ಲ ಹೇಳಿ ರಾಜ ಕುಮಾರಿಯ ಕೈಯಲ್ಲಿ ಮಲ್ಲಿಗೆ-ಗುಲಾಬಿಹೂಗಳ ಮಾಲೆಯೊಂದನ್ನು ಕೊಟ್ಟು ಕಳುಹಿದರು. ರಾಜಕುಮಾರಿಯು ನಿಂತಲ್ಲಿಂದಲೇ ಒಮ್ಮೆ ಎಲ್ಲ ಕಡೆಗೂ ನೋಡಿದಳು. ಆಗ ನನ್ನನ್ನೂ ನೋಡಿದಳು. ನಾನು ಗುಲಾಬೀಹೂ ವೊಂದನ್ನು ಮೆಲ್ಲಗೆ ಮೂಸಿ ನೋಡಿದೆ. ರಾಜಕುಮಾರಿಯು ಕೆಳಗಿಳಿದು ಹೊರಟಳು. ಕನ್ಯಾರ್ಥಿಯಾಗಿ ಬಂದ ಆ ರಾಜರ ಸ್ಥಿತಿಯನ್ನು ದೇವರೇ ಬಲ್ಲ! ಕುಮಾರಿಯು ಹತ್ತಿರ ಬಂದೊಡನೆ ತಮಗೆ ತಿಳಿಯದೇ ಎಷ್ಟೋ ರಾಜರು ಗೋಣು ಬಾಗಿಸಿದರು. ಕುಮಾರಿಯು ಇದಾವುದನ್ನೂ ನೋಡದೆ ಎಲ್ಲ

ಕಡೆಗೂ ಸುತ್ತಾಡಿ ನಾನಿದ್ದಲ್ಲಿಗೆ ಬಂದು ಕೈಯಲ್ಲಿಯ ಮಾಲೆಯನ್ನು ನನ್ನ ಕೊರಳಿಗೆ ಹಾಕಿದಳು. ಕೂಡಲೆ ಗೊಂದಲವೆದ್ದಿತು. ಮುದುಕನಿಗೆ ಮಾಲೆ ಹಾಕಿದಳೆಂದು ಮಹಾರಾಣಿಯವರು ಖಿನ್ನರಾದರು. ಯುದ್ಧದ ವರೆಗೆ ಬಂದಿದ್ದ ಪರಿಸ್ಥಿತಿಯು ಅದು ಹೇಗೋ ಶಾಂತವಾಯಿತು. ಮಹಾರಾಜರು ನನ್ನನ್ನು ಪಟ್ಟದ ಮೇಲೆ ಕುಳ್ಳಿರಿಸಿದರು. ಅದೆಷ್ಟೋ ವರ್ಷ ರಾಜ್ಯವಾಳಿದೆ. ಆದರೆ ನನ್ನ ವೇಷ ಕುಮಾರಿಯನ್ನು ಬಿಟ್ಟು ಯಾರಿಗೂ ಗೊತ್ತಾಗಲಿಲ್ಲ. ಆಗ ನನ್ನ ಹೆಸರು ಮುದಕಪ್ಪರಾಜನೆಂದಾಯಿತು."

ನನ್ನ ಗೆಳೆಯರೆಲ್ಲರೂ ನಕ್ಕರು. ಒಬ್ಬನೆಂದ:

"ನಾಟಕ ಬರೆದಿದ್ದರೆ '**ಮುದಗೊನೆ**' ಮಾಡಬೇಕಾಗುತ್ತಿತ್ತು?"

ಇನ್ನೊಬ್ಬ—"ಇದ್ದ ಕಿದ್ದಾಂಗ ಬರೆದು ಬಿಡೋ."

ಮತ್ತೊಬ್ಬ—"ಹೌದು. ಇಲ್ಲದಿದ್ದರೆ ಒಂದು ಹೋಗಿ ಒಂದಾದೀತು! ನಮ್ಮೂರ ಕಮ್ಮಾರ ಕಲ್ಲಪ್ಪನ ಗಣಪತಿ ಆದಾಂಗ ಆಯಿತು ಮತ್ತೆ."

ನಾನು—"ಇದ್ದದ್ದು ಇದ್ದ ಹಾಗೆಯೇ ಇಟ್ಟರೆ!" ಕೀರ್ತಿ? ಕೀರ್ತಿ?!? ಕೀರ್ತಿ???????





**ಶ್ರೀ ಬಿ. ವಿ. ರಮಣ ಅವರು,** ಬಿ.ಎ.,ಎಲ್.ಟಿ. **ಕೊಡಗು**

'ರಂಗನಾಥ' ಎಂಬ ಗುಪ್ತನಾಮದಿಂದ ಇವರು ದಕ್ಷಿಣ ಕನ್ನಡದ ಮತ್ತು ಕೊಡಗಿನ ಪತ್ರಿಕೆಗಳಲ್ಲಿ ಅನೇಕ ಚಿಕ್ಕ ಕವಿತೆಗಳನ್ನೂ ಲೇಖನಗಳನ್ನೂ ಕತೆಗಳನ್ನೂ ಪ್ರಕಟಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಾಲೆಗಳ ಇನ್ಸ್‌ಪೆಕ್ಟರರಾಗಿದ್ದಾರೆ. ಇವರು ಹೆಚ್ಚಾಗಿ ವಿಡಂಬನಾತ್ಮಕ ಕತೆಗಳನ್ನು ಬರೆಯುತ್ತಾರೆ. ಯಾರನ್ನೂ ಮನ ನೋಯಿಸದ ಹಾಸ್ಯ ಇವರದು. ಸಾಮಾನ್ಯ ವಿಷಯಗಳನ್ನು ಎತ್ತಿಕೊಂಡು ಕತೆಗಳನ್ನು ಬರೆಯುತ್ತಾರೆ. ವಿಡಂಬನ ಸಾಹಿತ್ಯದಲ್ಲಿ ಇವರಿಂದ ಹೆಚ್ಚನ್ನು ನಿರೀಕ್ಷಿಸಬಹುದು.

# ಹಿಂದೀ ಗಾಳಿ

'ರಂಗನಾಥ'ರು

ನಮ್ಮ ಮನೆಯಲ್ಲಿಯೂ 'ಹಿಂದಿ'ಯ ಗಾಳಿಯು ಬಲವಾಗಿ ಬೀಸುತ್ತಿದೆ. ನಮ್ಮಾಕೆಗಂತೂ 'ಹಿಂದಿ'ಯ ಹುಚ್ಚೆ! ಅದಕ್ಕೆ ಮೂಲಕಾರಣ—ಆ ಪುಟ್ಟಮ್ಮನವರು. ಅವರಿಗೇನೂ ಕೆಲಸವಿಲ್ಲವೆಂದು ಹಿಂದಿಯ ಪ್ರಚಾರಕ್ಕೆ ಆರಂಭಿಸಿದ್ದಾರೆ. ಕೆಲವು ದಿವಸಗಳ ಹಿಂದೆ ನಾನು ಆಫೀಸಿನಿಂದ ಮನೆಗೆ ಬಂದು ನೋಡುತ್ತೇನೆ—ಸಾಧಾರಣ ಮಟ್ಟಿಗೆ ಒಂದು ಕುಂಟು ಸಭೆಯೇ ಸೇರಿತ್ತು ಮನೆಯಲ್ಲಿ! ಆ ಸಭೆಯು ಹೆಂಗುಸರದೇ. ನಾನು ಮನೆಗೆ ಕಾಲಿಟ್ಟ ಕೂಡಲೆ, ನಮ್ಮಾಕೆಯು ಅದೇನೋ ವಿಶೇಷ ವರ್ತಮಾನ ತಿಳಿದವಳಂತೆ ಓಡಿಬಂದು—'ಹಿಂದೀ ಬಹಳ ಒಳ್ಳೆಯ ಭಾಷೆಯಂತೆ; ಎಲ್ಲಾ ಹೆಂಗುಸರೂ ಕಲಿಯಬೇಕಂತೆ!' ಎಂದಳು. ನಾನು ಹಸಿವಿನಿಂದ ಬಂದುದು ಅವಳ ಮನಸ್ಸಿಗೆ ಹೋಗಲೇ ಇಲ್ಲ. 'ಹೂಂ; ಒಳ್ಳೆಯದೇ. ಅದಕ್ಕೇನಾಯಿತು?' ಎಂದು ಕೇಳಿದೆ. 'ನಾನೂ ಕಲಿಯಬೇಕೆಂದಿದ್ದೇನೆ' ಎಂದವಳ ಉತ್ತರ ಬಂತು. 'ಆಗಲಿ, ಒಳ್ಳೆಯದೆ' ಎಂದು ಬಿಟ್ಟೆ. ಈಗ ಇದರ ಪರಿಣಾಮವೇ?—

ಮೊನ್ನೆ ಓಡುತೋಡುತ ಬಂದೆ. ತಿಂಗಳ ಮೊದಲನೆಯ ದಿನ. ಈಗಿನ ಪ್ರೆಸಿಡೆಂಟರ ಉದಾರತ್ವದ ಪರಿಣಾಮವಾಗಿ ನಮ್ಮ ಸಂಬಳ ಮೊದಲನೆಯ ದಿನವೇ ಸಿಕ್ಕಿತ್ತು. ಜೇಬಿನಲ್ಲಿ ರೊಕ್ಕದ ಝಣಝಣ ಶಬ್ದ. ನನ್ನ ಹೃದಯವು ಆನಂದದಿಂದ ತುಂಬಿತ್ತು. 'ಇಂದು ನನ್ನಾಕೆಗೆ ಆಶ್ಚರ್ಯವನ್ನುಂಟುಮಾಡಿಬಿಡುತ್ತೇನೆ. ಅವಳ ಮುಂದೆ ಜಂಭದಿಂದ ಹಣವನ್ನು ಚೆಲ್ಲಿದರೆ ಖಂಡಿತವಾಗಿಯೂ ಅವಳಿಗೆ ಆಶ್ಚರ್ಯವಾಗುವುದು' ಎಂದೆಣಿಸಿ ಹಸಿದ ಹೊಟ್ಟೆಯಿಂದ ಓಡುತ್ತ ಬಂದೆ. ಬಂದು ಬೀದಿಯ ಬಾಗಿಲನ್ನು ತಟ್ಟಿದೆ. ಕೂಡಲೆ 'ಚಿಕ್ಕ' (ನಮ್ಮ ಆಳು) ಬಂದು ಬಾಗಿಲು ತೆರೆದ. ನಾನೆಣಿಸಿದ್ದೆ-ನಮ್ಮಾಕೆಯೇ ಬಾಗಿಲು ತೆರೆಯುವಳೆಂದು—ಇಲ್ಲ, ನಿರಾಶೆ. ಒಳಗೆ ಹೋದೆ, ಅಲ್ಲಿ ಇಲ್ಲಿ ನೋಡಿದೆ. ಆಕೆಯೆಲ್ಲಿಯೂ ಇಲ್ಲ. ಬಾಗಿಲ ಮೂಲೆಯನ್ನೂ ನೋಡಿದೆ—ತಮಾಷೆಗಾಗಿ ಅವಿತುಕೊಂಡಿರುವಳೋ ಏನೋ ಎಂದು—ಅಲ್ಲಿಯೂ ಇಲ್ಲ. ಮತ್ತೆ ಚಿಕ್ಕನನ್ನು ಕೇಳಿದೆ. ಅವನೆಂದ—'ಅಮ್ನೋರು ಪುಟ್ಟಮ್ನೋರ ಮನೆಗೆ

ಹಿಂದೀ ಕಲಿಯೋಕೆ ಹೋಗವ್ರೆ.' ಅವನ ಮಾತುಗಳನ್ನು ಕೇಳಿ ನನಗೆ ತಡೆಯ ಲಾರದಷ್ಟು ಸಿಟ್ಟು ಬಂತು. 'ಹಾಳಾಗಲಿ ಈ ಹಿಂದೀ. ಆ ಪುಟ್ಟವ್ನೋರೀಗೂ ಕೆಲಸಾನೆ ಇಲ್ಲ. ಈ ಜನ್ರಿಗೂ ಹುಚ್ಚೇ ಹಿಡಿದದೆ. ಏನಿದು ವಿಪರೀತಾವಸ್ಥೆ! ಗಂಡ ಮನೆಗೆ ಬರೋ ಹೊತ್ತಿಗೆ ಹೆಂಡ್ತಿ ಬಾಗಿಲಲ್ಲಿ ನಿಂತ್ಕೊಂಡು ಒಂದರೆ ನಗು ನಗ್ಬೇಗು. ತಿಂಡಿ ಫಲಾರನ ತಂದಿಡ್ಬೇಕು. ಈಗಿನ ಹೆಂಗ್ಸರ್ಗೆ ಗಂಡ್ನ ಮೇಲೆ ಭಕ್ತಿನೇ ಇಲ್ಲ. ಹೋಯ್ತಲ್ಲಾ ಶಾಸ್ತ್ರ! ನಮ್ಮಾಕೆಗೆ ಯಾವಾಗ್ಲೂ ಅಂತಿದ್ದೆ— ಗಂಡ ಬರೋ ಹೊತ್ತಿಗೆ ತಿಂಡಿ ಎಲ್ಲಾ 'ರೆಡೀ' ಆಗ್ಬೇಕು. ಬಂದ್ಕೂಡ್ಲೆ 'ಓ, ಶಾನೆ ಆಯಾಸವಾಯ್ತೆ? ಬನ್ನೀ. ನಿಮ್ಮಂಗೀನ ತೆಗಿತೀನಿ' ಎಂದಂದು ಅಂಗೀನ ತೆಗ್ದು ತಿಂಡೀನ ಎಲ್ಲಾ ಮುಂದಿಡ್ಬೇಕಂತ. ಅದೆಲ್ಲಾ ಹೋಯ್ತು.' ಎಂದು ಗೊಣಗುಟ್ಟಿಕೊಂಡು ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡೆ.

ಅಷ್ಟರಲ್ಲಿ ನಮ್ಮ ರಾಣಿಯ ಸವಾರಿ ಬಂತು. ಓ ಅದೇನು ವೇಗ! ಅದೇನು ಆತುರ! ಆದರೂ ಒಂದು ಮೆಲ್ನಗೆಯನ್ನು ತೋರಿಸಿ 'ಏನಿಷ್ಟು ಬೇಗ್ನೆ ಬಂದ್ಬಿಟ್ರಿ! ಆ ಪುಟ್ಟವ್ನೋರು ಕೊಂಚ ಹೆಚ್ಚು ಪಾಠಾನ ಹೇಳ್ಬಿಟ್ರು" ಎಂದಳು.

ಆ ನಗುವನ್ನೂ ಹೇಳಿದ ರೀತಿಯನ್ನೂ ನೋಡಿ ನನ್ನ ಮುಖದ ಕೆಂಪು ಇಳಿದೇ ಹೋಯಿತು.

'ಎಲ್ಲಿ ಕಾಫಿ?' ಎಂದೆ.

'ಈಗ್ತಾನೆ ಬರ್ತಿದ್ದೀನೆ; ಇನ್ನು ಮಾಡ್ಬೇಕು' ಎಂದಳು

ನನ್ನ ಸಿಟ್ಟು ನೆತ್ತಿಗೇರಿತು. 'ಹೋಗ್ಲಿ, ಇನ್ನು ಕಾಫಿನೇ ಬೇಡ. ನಾನು ಹೋಟ್ಲಿಗ್ಹೋಗಿ ತಕ್ಕೊಳ್ತೀನಿ' ಎಂದೆ.

'ಹುಂ ಹಂಗೆ ನನಗೂನೂ ರವಷ್ಟು ಕಳುಹಿಸಿಕೊಟ್ಟು ಬಿಡ್ರಿ' ಎಂದವ ಳನಬೇಕೆ?

ಏನಾ ಜಂಭ! ಈಗಿನ ಹುಡುಗಿಯರಿಗೆ ಮಹಾಜಂಭ! ಹೇಳಿದ ಮಾತಿಗೆ ಮರುಮಾತು. ಪ್ರಶ್ನೆಗೆ ತಕ್ಕ ಉತ್ತರ ಅವರಲ್ಲಿ ಇದ್ದೇ ಇದೆ. ಹಿಂದಿನ ಹೆಂಗುಸರ ಹಾಗೆ ಗಂಡ ಮಾತಾಡಿದರೂ ಬಾಯ್ಬಿಡದೆ ಎಲ್ಲವೂ ದೇವರ ಪ್ರಸಾದವೆಂದು ತಿಳಿದುಕೊಳ್ಳುವ ಹೆಂಗುಸರು ಇಲ್ಲವೇ ಇಲ್ಲ. ಈಗೆಲ್ಲಾ ವಿಪರೀತವಾಗಿದೆ.

'ಸಾಕು ಸಾಕು, ನಿನ್ನ ಹಿಂದಿ' ಎಂದೆ. ಅವಳು ನನ್ನ ಬಳಿಯಲ್ಲಿಯೇ ಒಂದು ಕುರ್ಚಿಯ ಮೇಲೆ ಕುಳಿತುಕೊಂಡು ಮೌನವ್ರತವನ್ನಾಚರಿಸಿದಳು. ನೋಡುವಾಗ ಒಳಗಿಂದ ಒಳಗೆ ನಗುತಿದ್ದಳು. ಹಿಂದೀ ಪುಸ್ತಕವು ಕೈಯಲ್ಲಿ ತೆರೆದಿತ್ತು. ಅಂತೂ ನನಗೆ ಪರಾಭವವೇ. ಆ ನನ್ನ ಹೊಟ್ಟೆಯ ಗಳಗಳ ತಡೆಯಲಾರದೆ ಇನ್ನೊಮ್ಮೆ ಬಾಯ್ತೆರೆದು—'ಸಾಕ್ಮುಚ್ಚು ನಿನ್ನ ಹಿಂದೀನ. ಇನ್ನಾದ್ರೂ ಒಂದಿಷ್ಟು ಕಾಫಿ ಮಾಡು' ಎಂದು ನುಡಿದೆ. ಅವಳು ಒಳಗೆ ಹೋದಳು. ಹೋಗುವಾಗ ನನ್ನ ಕೋಟನ್ನು ಒಳಗೆ ಎತ್ತಿಕೊಂಡು ನಡೆದಳು. ನಾನು ಕುರ್ಚಿಯ ಮೇಲೆ ಕುಳಿತು ಆ ದಿವಸದ ವರ್ತಮಾನ ಪತ್ರಿಕೆಯನ್ನು ಓದತೊಡಗಿದೆ. ಅರ್ಧ ತಾಸು ಕಳೆಯಿತು. ಆದರೂ ಸಾಯಂಕಾಲದ ಕಾಫಿ ಇಲ್ಲ. ಕಾರಣವೇನೆಂಬುದನ್ನರಿಯಲು ಒಳಗೆ ಹೋದೆ. ನನ್ನ ರಾಣಿ ಅಡಿಗೆ ಮನೆಯಲ್ಲಿ ಒಲೆಯ ಮುಂದೆ ಕುಳಿತು ಹಿಂದೀ ಪುಸ್ತಕ ವನ್ನು ಮಗುಚುತಿದ್ದಳು. ನಾನು ಮೆತ್ತಗೆ ನಡೆದು ಅವಳ ಬಳಿ ನಿಂತೆ. ನಾನು ಬಂದುದೇ ಅವಳಿಗೆ ಗೊತ್ತಾಗಲಿಲ್ಲ. ಒಲೆಯನ್ನು ನೋಡಿದೆ. ಒಲೆಯಲ್ಲಿನ್ನೂ ಬೆಂಕಿಯನ್ನೇ ಹಚ್ಚಿರಲಿಲ್ಲ. ನನಗೆ ಮತ್ತಷ್ಟು ರೇಗಿತು. 'ಸಾಕು ಸಾಕೆ ನಿನ್ನ ಹಿಂದೀ. ಆ ಪುಟ್ಟಮ್ನೋರು ನಿನಗೆ ಹುಚ್ಚು ಹಿಡಿಸಿದ್ದಾರೆ! ಎಲ್ಲಿ ಕಾಫಿ?' ಎಂದು ಒಮ್ಮೆಗೆ ನುಡಿದುಬಿಟ್ಟೆ. ಅವಳು ಮುಖವನ್ನೆತ್ತಿ ನೋಡಿ ದಳು—'ಹುಂ—ಹೌದು. ಆ ಚಿಕ್ಕ ಇಲ್ಲೆ ಬಿದ್ದಿದ್ದ' ಎಂದಳು. 'ಹೌದು. ನಿನ್ನಂಗೆ ಹಿಂದೀಗೆ ಹೋಗ್ಲಿಲ್ಲ' ಎಂದೆ. 'ಹೌದು. ಆ ಬೆಕ್ಕು ಬಂದಿದೂವೆ ಅವ್ನಿಗೆ ಗೊತ್ತಾಗಿಲ್ಲ, ಆ ಕತ್ತೆಗೆ' ಎಂದು ಗೊಣಗಿದಳು.

'ಹುಂ. ಆ ಬೆಕ್ಕಿಗೂ ಈ ಕಾಫಿಗೂ ಏನು ಸಂಬಂಧ?' ಎಂದು ಕೇಳಿದೆ. 'ಅದು....ನಾನು ಹಾಲ್ನಾ, ಎರಡೂವರೆ ಪಾವು ಮುಚ್ಚಿಟ್ಟು ಹೋಗಿದ್ದೆ. ಬೆಕ್ಕೆಲ್ಲಾ ಕುಡಿದೈತೆ' ಎಂದಳು. 'ಸಾಕು, ನಿನ್ನ ಹಿಂದೀ. ಈ ಹಿಂದೀಫಲ ಚೆನ್ನಾಗಿ ಬಂತು. ನೀನು ಹಿಂದೀ ಕಲೀತ್ಕೊಂಡು ಕೂತ್ಕೋ. ನಾನು ಹೋಟ್ಲಿಗ್ಹೋಗಿ ಊಟ ತೀರ್ಸಿ ಬರ್ತೀನಿ' ಎಂದು ದರ್ಪದಿಂದ ಹೊರಗೆ ಬಂದೆ.

'ಅಹುದು, ಈಹೊತ್ತು ಜೇಬೀಲಿ ದುಡ್ಡಿದೆ. ನನ್ಗೊತ್ತು' ಎಂದವಳು ಮೆಲ್ಲನೆ ಹೇಳಿದಳು. ನಾನು ನಡುಮನೆಗೆ ಬಂದು ನನ್ನ 'ಕೋಟ'ನ್ನು ಇಕ್ಕಿ, ನಡೆಗೋಲನ್ನು ಹಿಡಿದುಕೊಂಡು ಹೊರಟೆ. ಆದರೆ ನನ್ನದೊಂದು ಪದ್ಧತಿ.

ಎಲ್ಲಿಗಾದರೂ ಹೋಗುವುದಕ್ಕಿಂತ ಮುಂಚಿತವಾಗಿಯೇ ನನ್ನ ಕಿಸೆಗೆ ಕೈ ಹಾಕಿ 'ಎಲ್ಲಾ ಸರಿಯಿದೆಯೋ' ಎಂದು ನೋಡಿಕೊಳ್ಳುವುದು. ಆಗಲೂ ಅದೇ ಸ್ವಭಾವದಿಂದ ಕಿಸೆಗೆ ಕೈ ಹಾಕಿ ನೋಡುತ್ತೇನೆ—ನನ್ನ ಜೇಬು ಆಗಲೇ ಜಪ್ತಿಯಾಗಿ ಹೋಗಿತ್ತು! ಇನ್ನು ಪರಾಭವವೇ. ಮುಂದೆ ಹೋದರೇನು ಪ್ರಯೋಜನ? ಹಿಂದಿರುಗಿದೆ. ಜಗುಲಿಯಲ್ಲಿ ನಿಂತುಕೊಂಡು ಅವಳು ಹುಸಿ ನಗುತಿದ್ದಳು. ನನಗಾಗ ಸಿಟ್ಟಿನಿಂದ ಭೂಮಿ ಆಕಾಶವೆಲ್ಲಾ ಒಂದೇ ಆಯಿತು. ನನ್ನ ಕೋಟನ್ನು ಬಿಚ್ಚಿ ಮಾರುದ್ದ ದೂರ ಎಸೆದೆ. ಕೂಡಲೇ ಅವಳು ಅದನ್ನು ಎತ್ತಿಕೊಂಡು ಒಳಗೆ ಹೋದಳು. ನಾನು ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡು ಆಲೋಚಿಸಿದೆ—'ಅದು ನನ್ನ ಸಂಪಾದನೆ, ನನ್ನ ಹಣ. ಅವಳ ಕೈಯಿಂದ ಕಿತ್ತುಕೊಳ್ಳುವೆ' ಎಂದು. ಆದರೆ ಅವಳೆಲ್ಲಿ ಬಚ್ಚಿಟ್ಟಿದ್ದಳೆಂದು ಯಾರಿಗೆ ಗೊತ್ತು? ಅಲ್ಲದೆ ಹೆಂಡತಿಯನ್ನು ಕೇಳಬೇಕೆ ನನ್ನ ದುಡ್ಡಿಗೆ? ಆದ್ದರಿಂದ ಮೌನವ್ರತಧಾರಿಯಾಗಿ ಕುರ್ಚಿಯಲ್ಲಿ ಕುಳಿತು ಹಿಂದಿನ ನನ್ನ ಬ್ರಹ್ಮಚರ್ಯಕಾಲದ ಸ್ವಾತಂತ್ರ್ಯ, ಆಗಿನ ಮಹಿಳೆಯರ ನಮ್ರಭಾವ, ಈಗಿನ ತರುಣಿಯರ ಉದ್ಧಟತನ, ಲೋಕದ ಆಚರಣೆಗಳು ಇತ್ಯಾದಿ ವಿಷಯಗಳ ಕಡೆ ಮನಸ್ಸನ್ನು ಓಡಿಸಿದೆ. ಹಾಗೆಯೇ ಒಂದು ಗಂಟೆಯ ಕಾಲಕಳೆಯಿತು. ನಾನಂದು ಮಾತಾಡದೆಯೇ ಇರುವೆನೆಂದು ನಿರ್ಧರಿಸಿದೆ. ಅಷ್ಟರಲ್ಲಿ ನನ್ನ ಕಣ್ಣುಗಳಿಗೆ ಕೈಹಿಡಿದಂತಾಯಿತು. ಒಡನೆ—'ಬಿಡೆಲೆ, ಸಾಕು ನಿನ್ನ ಸದರ' ಎಂದು ಗದರಿಸಿದೆ. 'ಈಗ ಕಾಫಿ ಮಾಡಲೆ?' ಎಂಬ ವೈಯಾರದ ವಾಣಿಯು ಕೇಳಿಸಿತು. 'ನಿನ್ನ ಕಾಫಿನೂ ಬೇಡ, ನಿನ್ನ ತಿಂಡಿನೂ ಬೇಡ. ನಡಿ ನೀನಾಚೆ' ಎಂದು ಗಂಭೀರವಾಗಿ ನುಡಿದೆ. 'ಈಗ ಊಟಕ್ಕೆ ಸಿದ್ಧವಾಯಿತು, ಬಡಿಸಲೆ'? ಎಂದು ಪುನಃ ಮಾತು ಕೇಳಿಸಿತು. ಏನು ಮಾಡಲಿ? ಹಾಳು ಹೊಟ್ಟೆಯು ಕೇಳುತ್ತದೆಯೇ? ಹೇಗೂ ಊಟ ಮಾಡಿದ್ದಾಯಿತು.

ಮರು ದಿನ ಬೆಳಿಗ್ಗೆ ಆಫೀಸಿಗೆ ಹೋಗುವಾಗ ನಮ್ಮಾಕೆಗೆ ಮೊದಲೇ ಎಚ್ಚರಿಸಿದ್ದೆ—'ನಾನು ಬರೋ ಹೊತ್ತಿಗೆ ಕಾಫಿ ತಯಾರಿರ್ಬೇಕು; ಚೆಂದವಾದ ತುಪ್ಪದೋಸೆ, ಅನಾನಸು ಫೇಣಿ ಮಾಡ್ಬೇಕು' ಎಂದು.

ಸಾಯಂಕಾಲ ಸರಿಯಾದ ಹೊತ್ತಿಗೆ ಮನೆಗೆ ಬಂದೆ. ನಮ್ಮಾಕೆ ಮನೆಯಲ್ಲೇ ಇದ್ದಳು. ನನಗಾನಂದವಾಯಿತು. 'ತುಪ್ಪದೋಸೆ; ಅನಾನಸು ಫೇಣಿ'

ತಯಾರಿರಬೇಕೆಂದು ಮನಸ್ಸಿನ ಅಂಬೋಣ. ನಮ್ಮಾಕೆಯು ಕುರ್ಚಿಯಲ್ಲಿ ಕುಳಿತು ಹಿಂದೀ ಪುಸ್ತಕ ಓದುತಿದ್ದಳು. ಬಹು ಆಲೋಚನಾ ಭರಿತಳಾಗಿದ್ದಳು. ನಾನು ಬಂದರೂ ಕುರ್ಚಿಯಿಂದ ಏಳಲೇ ಇಲ್ಲ. 'ಏನಸಭ್ಯತನ! ಗಂಡನನ್ನು ಕಂಡರೂ ಈಗಿನ ಹುಡುಗಿಯರು ಎದ್ದು ನಿಲ್ಲುವದೇ ಇಲ್ಲವಲ್ಲ! ಇದು ಕಲಿಯ ಮಹಿಮೆ' ಎಂದಂದುಕೊಂಡು ಅವಳ ಭುಜದ ಮೇಲೆ ಕೈಯಿಟ್ಟೆ. ತಟ್ಟನೆ ಅವಳೆದ್ದು—'ಆಜ್ ಇತ್ನಾ ಜಲ್ದೀ ಆತೇ ಹೋ' ಎಂದುಬಿಟ್ಟಳು. ನನಗೇನು ಗೊತ್ತಾಗಬೇಕು ಆ ಹಿಂದೀ? 'ನಿನ್ನ ಹಯ್ ಗಿಯ್ ಬೇಡ. ಬರಲಿ ತುಪ್ಪದ ದೋಸೆ' ಎಂದೆ. 'ಅಭೀ ಲಾತೀ ಹೂಂ' ಎಂದು ನುಡಿದು ಅವಳು ಒಳಗೆ ಹೋದಳು. ನಾನು ಕುರ್ಚಿಯಲ್ಲಿ ಕುಳಿತುಕೊಂಡು ಸುತ್ತುಮುತ್ತು ನೋಡಿದೆ. ಗೋಡೆಯಲ್ಲೆಲ್ಲಾ ಹಿಂದೀ ಬರಹವೇ. ಬಾಗಿಲ ಬಳಿಯಲ್ಲಿ ಚಿಕ್ಕ ನಿಂತುಕೊಂಡಿದ್ದ. 'ಅದೇನೊ?' ಎಂದು ಕೇಳಿದೆ. 'ಓ ಹಿಂದೀ ಹಯ್' ಎಂದು ಬಿಟ್ಟ. 'ಏನಿದು! ಈ ಹಿಂದೀ ಗಾಳಿ ಎಲ್ಲೆಲ್ಲಿಯೂ ಹಬ್ಬಿದೆ. ವಿಪರೀತ. ಇದು ಸರ್ವವ್ಯಾಪಿ. ಉಜ್ಜದನ್ನು' ಎಂದು ಚಿಕ್ಕನಿಗೆ ಅಪ್ಪಣೆಕೊಟ್ಟೆ. ಅವನನಭೇಕೇ 'ಅಮ್ನೋರ ಹುಕುಂ ಇಲ್ಲ'ವೆಂದು? 'ನಿನ್ನ ಅಮ್ನೋರು ನಿನಗೆ ಯಜಮಾನ್ತಿ, ನಿನ್ನ ಯಜಮಾನ್ತಿಗೆ ನಾನೇ ಯಜಮಾನ' ಎಂದು ನನ್ನ ಸಾರ್ವಭೌಮತ್ವ ವನ್ನು ಪ್ರದರ್ಶಿಸಿದೆ. 'ನಾನು ಕೇಳಿಕೊಂಡು ಬರುತ್ತೇನೆ'ಂದು ಅವನು ಒಳಗೆ ನಡೆದ. ನಾನೂ ಹಾಗೆಯೇ ಆಲೋಚನಾ ಮಗ್ನನಾದೆ. 'ಹೊಸದರ ಮೇಲೆ ಯಾವಾಗಲೂ ಪ್ರೀತಿ ಹೆಚ್ಚು. ಏನೀ ಲೋಕವೋ! ಹೊಸ ಪುಸ್ತಕ, ಹೊಸ ಗ್ರಾಮೋಫೋನ್, ಹೊಸ ಹಾರ್ಮೋನಿಯಂ, ಹೊಸ ಹೆಂಡತಿ ಎಂದರೆ ಅದೇನು ಹುಚ್ಚೊ ಜನರಿಗೆ!—ನೋಡಿದಷ್ಟೂ ಸಾಲದು, ಕೇಳಿದಷ್ಟೂ ತೀರದು, ಮುಟ್ಟಿ ದಷ್ಟೂ ಮುಗಿಯದು. ನಮ್ಮ ನೆರೆಯವರು ಒಂದು ಗ್ರಾಮೋಫೋನ್ ತಂದಿ ದ್ದರು. ಅದರಿಂದ ಅವರಿಗಂತೂ ನಿದ್ರೆಯೂ ಬೇಸರವೂ ಇಲ್ಲ. ಆದರೆ ಪುಣ್ಯಾತ್ಮರು ನಮ್ಮ ನಿದ್ರೆಗೂ ಸೊನ್ನೆಯನ್ನೇ ಹಾಕಿದರು ಹಾಗೆಯೇ ನಾನೊಂದು ಹಾರ್ಮೋನಿಯಂ ತಂದಿದ್ದೆ. ಅದು ಹೊಸದಿರುವಾಗ ನಮ್ಮಾಕೆಗೆ ಅದೇನೋ ಬೇರೆ ಕೆಲಸಗಳಿಗೆ ಸಮಯವೇ ಇರಲಿಲ್ಲ. ಅಂತೆಯೇ ಹೊಸ ಹೆಂಡತಿ ಎಂದು ಹಿಂದೆ ನಮ್ಮ ಹೊಸತನದ ವಿಶೇಷಗಳನ್ನು ಮನಸ್ಸಿನಲ್ಲೆಣಿಸುತ್ತಾ ಈ ಈ ಹಿಂದಿಯೂ ಹಾಗೆಯೇ ಎಂದಂದುಕೊಂಡೆ. ಅಷ್ಟರಲ್ಲಿ ತಟ್ಟೆ ತುಂಬಾ

ತಿಂಡಿ ಬಂತು. ಲೋಟ ತುಂಬಾ ಕಾಫಿ ಬಂತು. ಆದರೆ ತುಪ್ಪದೋಸೆ– ಅತ್ತ ದೋಸೆಯೂ ಅಲ್ಲ, ಇತ್ತ ರೊಟ್ಟಿಯೂ ಅಲ್ಲ ಎನ್ನುವಂತಿತ್ತು. ಕಾಫಿಯೋ–ಅದು ಒಂದು ತರದ ದ್ರವಪದಾರ್ಥ. ಹೇಗೂ ಫಲಾಹಾರ ವಾಯಿತು. ಇಲ್ಲವಾದರೆ ಅದಕ್ಕೂ ಸೊನ್ನೆಯಾಗಿದ್ದರೆ–ಎಂದು ಮನಸ್ಸನ್ನು ಒಡಂಬಡಿಸಿಕೊಂಡೆ.

ಮೂರನೆಯ ದಿವಸ ನಮ್ಮೂರಲ್ಲೊಂದು ದೊಡ್ಡ ಸಮಾರಂಭ. 'ಹಿಂದೀ ಕಾನ್ವೊಕೇಶನ್'' ಅಂತೆ. ನಮಗೂ ಆಮಂತ್ರಣ ಬಂತು. 'ಹಿಂದಿ'ಯ ವಿಷಯವೆಂದು ತಿಳಿದ ಮೇಲೆ ನನಗೆ ಸ್ವಲ್ಪ ಮನಸ್ಸು ಕುಗ್ಗಿತು. ಆದರೆ 'ಅವರಾಗಿ ಕರೆಯುವಾಗ ನಾವೇಕೆ ಹೋಗಬಾರದು? ನಾವಷ್ಟು ದೊಡ್ಡ ಮನುಷ್ಯರಲ್ಲದಿದ್ದರೆ ನಮ್ಮನ್ನು ಕರೆಯುತಿದ್ದರೇ?' ಎಂದು ನಮ್ಮಾಕೆಯು ನುಡಿದಳು. ಹೇಗೂ ಅವಳ ಕಡೆಯಿಂದ ಒತ್ತಾಯ ಹೆಚ್ಚಾಯಿತು. ನಾವಿಬ್ಬರೂ ಆರು ಗಂಟೆ ಸಮಯಕ್ಕೆ ಸರಿಯಾಗಿ ಹಿಂದೀಮಂದಿರಕ್ಕೆ ಹೋದೆವು. ಜನರು—ಗಂಡುಸರು, ಹೆಂಗುಸರು—ಅದರಲ್ಲಿ ಹೆಂಗುಸರ ಸಂಖ್ಯೆ ಹೆಚ್ಚು—ಕಿಕ್ಕಿರಿದಿದ್ದರು. ನಾವೂ ಉಚಿತಾಸನಗಳಲ್ಲಿ ಕುಳಿತೆವು. ಕಾರ್ಯಕ್ರಮಗಳು ಒಂದರ ನಂತರ ಇನ್ನೊಂದು ಹಿಂದೀ ಭಾಷೆಯಲ್ಲೇ ಜರಗಿದವು. ನನ್ನ ಬಲ ಬದಿಯಲ್ಲಿ ನಮ್ಮಾಕೆಯ ಸಖಿ 'ಮಾತಿನ ಮನೋರಮಾ' ಕುಳಿತಿದ್ದಳು. ಆ ಹೊತ್ತು ಪುಟ್ಟಮ್ಮನವರ ಶ್ರದ್ಧೆಯು ತುಂಬಾ ತೋರಿತು. ಭಾಷಣ ಗೀಷಣ ಆದನಂತರ 'ಮೇವಾಡ ಪತನ' ಎಂಬ ನಾಟಕದ ಅಭಿನಯವು ಆರಂಭ ವಾಯಿತು. ಪಾತ್ರರು ಬಂದರು, ಮಾತಾಡಿದರು, ಹೋದರು. ಜನರಲ್ಲಿ ಕೆಲವರು ಅವರ ಸಂಭಾಷಣೆ ಕೇಳಿ ಚಪ್ಪಾಳೆ ಹೊಡೆದರು. ಬಾಯಿ ತುಂಬಾ ನಕ್ಕರು. ಆದರೆ ಅವರೆಲ್ಲಾ ಹುಚ್ಚರೆಂದೇ ಭಾವಿಸಿಕೊಂಡು ನಾನು ಸ್ತಬ್ಧನಾಗಿದ್ದೆ. ಅಷ್ಟರಲ್ಲಿ ಎರಡನೆಯ ಅಂಕವು ಶುರುವಾಯಿತು. 'ನಾನು ಹೋಗಲೇ' ಎಂದು ನಮ್ಮಾಕೆಯನ್ನು ಕೇಳಿದೆ. 'ಛಿ, ಎಂಥ ಮಾತು? ಇನ್ನು ಮುಂದೆ ಬಹು ಚೆನ್ನಾಗಿರುವುದು' ಎನಲು ಹೋಗಲಾರದೆ ಕುಳಿತುಕೊಂಡೆ. ಅದೇನೋ ಪಾತ್ರಗಳು ಬಂದು ಏನೇನೋ ಅಂದವು. ಜನರು ಕೈ ತಟ್ಟಿದರು. ನಾನು ಮಾತ್ರ ಮೌನವಾಗಿದ್ದೆ. ಆಗ ಮನೋರಮೆಯು ನನ್ನ ಮೌನವನ್ನು ಕಂಡು—'ಏನ್ರೀ ನಿಮಗೆ ಹಿಂದೀ ಬರೋದಿಲ್ವೆ?' ಎಂದು ಕೇಳಿಯೇ ಬಿಟ್ಟಳು.

'ಇನ್ನು ಇಲ್ಲವೇನಲೇ?-ಅವಳು ಮಾತಿನ ಮನೋರಮೆ, ಎಲ್ಲರಲ್ಲಿಯೂ ನನ್ನ ಮೌಢ್ಯವನ್ನು ಹರಡುವಳು. ಅಲ್ಲದೆ ಹೆಂಗುಸರೆಲ್ಲರಿಗೂ ಹಿಂದೀ ಗೊತ್ತದೆ. ನಾನು ಗಂಡುಸಾಗಿ ಇಲ್ಲವೇನಲೇ' ಎಂದು ಆಲೋಚಿಸಿ—'ಯಾಕೆ ನನಗೆ ಚೆನ್ನಾಗಿ ಗೊತ್ತಿದೆ' ಎಂದಂದುಬಿಟ್ಟೆ. ಅಂತು ಬಹಳ ಪೇಚಾಟಕ್ಕೆ ಸಿಕ್ಕಿದೆ. ನನ್ನ ರಮಣಿಯು ಒಳಗೊಳಗೆ ನಗುತಿದ್ದಳು. ಅದರಲ್ಲೂ ಹೆಂಗುಸರ ಮಧ್ಯದಲ್ಲಿ ಸಿಕ್ಕುಬಿದ್ದರೆ ಬಹು ಕಷ್ಟ. ಮನೋರಮೆಯು ಆಗ—'ಹಾಗಾದ್ರೆ ಅದೇಕ್ರೀ ಆ ನಟರ ನಾಟ್ಯವನ್ನು ಪ್ರೋತ್ಸಾಹಿಸೋದಿಲ್ಲ'ವೆಂದು ಕೇಳಿದಳು.

ನಾನು ಧೈರ್ಯ ತೆಗೆದುಕೊಂಡು ತುಸು ನಗುಮುಖದಿಂದ—'ನನಗೆಲ್ಲಾ ಗೊತ್ತಿದೆ. ಆದರೆ ನನಗದೇಕೋ ನನ್ನ ಮನಸ್ಸಿನ ಭಾವವನ್ನು ಹೊರಗೆ ತೋರಿಸಲಿಕ್ಕಾಗುವುದಿಲ್ಲ. ಮನಸ್ಸಿನೊಳಗೆ ಎಲ್ಲವನ್ನೂ ತಿಳಕೊಳ್ಳುತ್ತೇನೆ' ಎಂದೆ.

'ಓ ಸರಿಯೇ, ಅವರ ನಾಟ್ಯಕ್ಕೇನನ್ನ್ತೀರಿ' ಎಂದು ಪುನಃ ಪ್ರಶ್ನೆ.

'ಅದೇ, ಸರಿ; ಚೆನ್ನಾಗಿದೆ. ನಟರಿಗೆಲ್ಲಾ ಚೆನ್ನಾಗಿ ಕೈ ಬೀಸಲಿಕ್ಕೆ ಗೊತ್ತಿದೆ. ಪ್ರತಿಯೊಂದು ಮಾತಿಗೂ ಕೈ ಬೀಸುತ್ತಾರೆ' ಎಂದು ನಾನು ಕಂಡಂತೆ ಹೇಳಿಬಿಟ್ಟೆ. ಆದರೆ ಅವಳಿಗೆ ನಾಚಿಕೆಯಾಯಿತು ಎಂದರೆ ನಾಟ್ಯವು ಚೆನ್ನಾಗಿರಲಿಲ್ಲವೆಂದು ನಾನು ಹೇಳಿದೆನೆಂದು ಅವಳು ತಿಳಿದುಕೊಂಡಳು. 'ಆಗಿರ ಬಹುದು' ಎಂದಂದುಕೊಂಡು ಅವಳು ಆಚೆ ಕಡೆ ಮುಖ ತಿರುಗಿಸಿಕೊಂಡಳು.

ಅನಂತರ ನನಗಲ್ಲಿಂದ ಹೊರಡಲಿಕ್ಕೆ ಸಂದರ್ಭವಾಗಲಿಲ್ಲ. ಗೊತ್ತಿಲ್ಲದು ದನ್ನು ಗೊತ್ತಿದೆ ಎಂದೆ. ಎಂದರೆ ನನಗೆ ಚೆನ್ನಾಗಿ ಹಿಂದೀ ಗೊತ್ತಿದೆಯೆಂದು ಜನರಿಗೆ ಭಾವನೆಯಿರಲಿ ಎಂದು ನಾಟಕ ಮುಗಿಯುವ ವರೆಗೆ ಇರಲು ನಿರ್ಧರಿಸಿದೆ. ಅಲ್ಲದೆ ನನ್ನ ಮೌನವ್ರತವನ್ನು ತ್ಯಜಿಸಿ ನಾನೂ ನಟರನ್ನು ಪ್ರೋತ್ಸಾಹಿಸುವುದಕ್ಕೆ ಜನರನ್ನು ಸೇರಿಕೊಳ್ಳಬೇಕೆಂದೂ ನಿಶ್ಚಯಿಸಿದೆ. ಆಗ ಇನ್ನೊಂದು ಪಾತ್ರ ಬಂದು ಏನೇನೊ ಅಂದ. ಜನರೂ, ನನ್ನಾಕೆಯೂ ನಕ್ಕರು. ನಾನೂ ಕೈ ಚಪ್ಪಾಳೆ ಹೊಡೆದು—ನಮ್ಮ ಕಿವುಡನ ಕಥೆಯಂತೆ-ನಕ್ಕೆನು. ಕಡೆಗೆ ನಾಟಕ ಮುಗಿಯಿತು. ನಾವು ಮನೆಗೆ ಹೋದೆವು.

ಮನೆ ಸೇರಿದ ಮೇಲೆ ನಮ್ಮಾಕೆ ನನ್ನನ್ನು ಮೂದಲಿಸಬೇಕೇ?

'ಅದೇನು ನೀವು ತುಂಬಾ ನಗುತಿದ್ದಿರಿ' ಎಂದು ಪ್ರಶ್ನಿಸಿದಳು.

'ಅದೆಲ್ಲಾ ನಿನಗೇಕೆ 'ಅಧಿಕ ಪ್ರಸಂಗ?' ಎಂದು ಬಿಗಿಯಾಗಿ ನಾನು ನುಡಿದೆ.

'ಸರಿಯೋ-ನಾನು ನಾಳೆ ಮನೋರಮೆಗೆ ನಿಜಾಂಶವನ್ನೆಲ್ಲಾ ಹೇಳಿ ಬಿಡುತ್ತೇನೆ' ಎಂದಳು.

'ಏಯ್ ಬೇಡ್ವೇ, ಬೇಡ್ವೇ' ಎಂದು ಅವಳ ತಲೆಯನ್ನು ಸವರಿದೆ. ಆದರೂ ಅವಳು ಸುಮ್ಮನಾದಳೇ? 'ಅದೆಲ್ಲಾ ಸಾಕು ನಿಮ್ಮ ರಂಗು! ನೀವೂ ಹಿಂದೀನ ಕಲಿಯೋದಾದ್ರೆ ಮಾತ್ರ ನಾನು ಹೇಳೋದಿಲ್ಲ' ಎಂದು ಹಟ ತೊಡಬೇಕೆ?

ಮುಂದೆ ಉಪಾಯ ಯಾವುದೂ ತೋರಲಿಲ್ಲ. ಎಲ್ಲಿಯಾದರೂ ಆ ಮನೋರಮೆಗೆ ಇವರ ಸಂಜೆಯ ಕೂಟಗಳಲ್ಲಿ ಹೇಳಿ ಬಿಟ್ಟರೆ ನನ್ನನ್ನು 'ಗೇಲಿ' ಮಾಡೋದು ಖರೆ ಎಂದೆಣಿಸಿ ನಾನೂ ಹಿಂದಿ ಕಲಿಯುವುದಕ್ಕೆ ಒಪ್ಪಿಕೊಂಡೆ. ಆದರೆ ನನಗೆ ಕಲಿಸುವವಳು ನಮ್ಮಾಕೆ! ಈಗ ನಾನೂ ಹಿಂದೀ ಕಲಿಯುತ್ತಾ ಇದ್ದೇನೆ.

---



## ಶ್ರೀ ಕೋಟ ಶಿವರಾಮ ಕಾರಂತರು, ಪುತ್ತೂರು

ಇವರು ಒಮ್ಮೊಮ್ಮೆ 'ಕೌಶಿಕ' ಎಂಬ ಹೆಸರಿನಿಂದಲೂ ಬರೆಯುತ್ತಾರೆ. ಕವಿಗಳು, ಕತೆಗಾರರು, ನಾಟಕಕಾರರು, ವಿಮರ್ಶಕರು, ನಟರು, ಕಲಾವಿದರು ಚಿತ್ರಕಾರರು ಇತ್ಯಾದಿ. ಇವರಿಗೆ ಅರಿಯದ ವಿಷಯವಿಲ್ಲ. ಇವರ 'ದೇವ ದೂತರು' 'ಸೂಳೆಯ ಸಂಸಾರ' 'ವಿಚಿತ್ರ ಕೂಟ' 'ಚೋಮನ ದುಡಿ' 'ಭೂತ' ಮುಂತಾದ ಕಾದಂಬರಿಗಳೂ, 'ಕರ್ಣಾರ್ಜುನ' 'ಸಾವಿರ ಮಿಲಿಯ' 'ಗರ್ಭ ಗುಡಿ' 'ಡುಮಿಂಗೊ' 'ಮುಕ್ತದ್ವಾರ' ನಾಟಕಗಳೂ 'ಹಾವು' 'ಹಸಿವು' ಎಂಬ ಕಥಾ ಸಂಗ್ರಹಗಳೂ 'ಏಕಾಂಕ ನಾಟಕಗಳೂ' ಪ್ರಕಟವಾಗಿವೆ. 'ಭಾರತೀಯ ಚಿತ್ರಕಲೆ', 'ಗ್ನಾನ' ಎಂಬ ಗ್ರಂಥಗಳನ್ನೂ ಬರೆದಿರುವರು. 'ಬಾಲಪ್ರಪಂಚ' ಎಂಬ ಪ್ರಪಂಚದ ವಸ್ತು ಕೋಶವನ್ನು ಪ್ರಕಟಿಸುತ್ತಿದ್ದಾರೆ. ಕೆಲವು ಕಾಲ 'ವಸಂತ' ಪತ್ರಿಕೆಯ ಸಂಪಾದಕರಾಗಿದ್ದು ಅದನ್ನು ಆದರ್ಶ ರೀತಿಯಿಂದ ನಡೆಸಿ ಕೊಂಡು ಬಂದಿದ್ದರು. ನಿರ್ದಯ ವಿಮರ್ಶಕರು. ಇವರ ಟೀಕೆಗೆ ಗುರಿಯಾ ಗದ ವಿಚಾರವಿಲ್ಲ, ವ್ಯಕ್ತಿ ಇಲ್ಲ, ಸಮಾಜವಿಲ್ಲ, ವಸ್ತುವಿಲ್ಲ. ವಿಶ್ವವನ್ನೇ ತಮ್ಮ ಮಾನದಂಡದಿಂದ ಅಳೆಯುವ ಕೆಚ್ಚೆದೆಯವರು. ಸರ್ವದಾ ಕಾರ್ಯತತ್ಪರರು' ಕನ್ನಡದಲ್ಲಿ ಈ ವರೆಗೆ ಇಲ್ಲದುದನ್ನೆಲ್ಲಾ ನಿರ್ಮಾಣಮಾಡಿದ್ದಾರೆ, ಮಾಡುತ್ತಿ ದ್ದಾರೆ. ನೃತ್ಯಕಲೆಯಲ್ಲಿ ತಮ್ಮದೇ ಆದ ಒಂದು ಸ್ವತಂತ್ರ ಮಾರ್ಗವನ್ನು ಸೃಷ್ಟಿಸಿರುವರು. ಎಲ್ಲದರಲ್ಲಿಯೂ ಕ್ರಾಂತಿ, ಒಟ್ಟಿನ ಮೇಲೆ ಕಾರಂತರ ವ್ಯಕ್ತಿತ್ವವು ಅದ್ಭುತವಾದುದು.

ಇವರ ಕತೆಗಳೂ ವಿಮರ್ಶಾತ್ಮಕವಾಗಿಯೇ ಇವೆ. ಆದರೆ ನಾಟಕ, ಕಾದಂಬರಿಗಳಷ್ಟು ಸಾಫಲ್ಯವು ಇವರ ಚಿಕ್ಕ ಕತೆಗಳಲ್ಲಿ ಕಂಡು ಬರುವುದಿಲ್ಲ.

# ಹಾವು

ಶಿವರಾಮ ಕಾರಂತರು

ನಿಜವಾಗಿಯೂ ಅದು ಸೊಗಸಾದ ಹೂದೋಟವಿತ್ತು. ನನ್ನ ತಾಯಿಯು ನನ್ನ ಮೇಲಣ ಮಮತೆಯಿಂದ, ಅತಿ ಹೆಚ್ಚಿನ ಶ್ರಮದಿಂದ ಅದನ್ನು ಮಾಡಿ ಕೊಟ್ಟಳು. ಮೊದಲಿಗೆ ಪ್ರತಿ ಗಿಡವನ್ನು ನಟ್ಟವಳು ಅವಳೇ. ಅವಳಿಗೆ ಹೂವುಗಳಲ್ಲಿ ತುಂಬಾ ಪ್ರೇಮ. ಹಸುರನ್ನು ಕಂಡರೆ ತುಂಬಾ ಆನಂದ. ಆದುದರಿಂದಲೇ ನನಗೆ ಅವಳು ಕೊಟ್ಟ ಮೊದಲಿನ ಉಡುಗೊರೆಯೆಂದರೆ ಹಸುರು ಹೂವುಗಳಿಂದ ತುಂಬಿದ ಈ ಚಿಕ್ಕ ಉದ್ಯಾನ. ಸೇವಂತಿಗೆ, ಗುಲಾಬಿ, ಮಲ್ಲಿಗೆ, ಜಾಜಿ, ಪಾರಿಜಾತ—ಪ್ರತಿ ಬಗೆಯ ಸುಗಂಧ ಕುಸುಮ ಗಳೂ ನನ್ನ ಉದ್ಯಾನವಲ್ಲಿ ಆಗುತ್ತಿದ್ದುವು. ನನ್ನ ಉದ್ಯಾನವೆಂಬ ಆಗಿನ ನನ್ನ ಹೆಮ್ಮೆಯೇ ಹೆಮ್ಮೆ.

ಬೆಳಗಾಯಿತೆಂದರೆ ನನ್ನಮ್ಮನು ನನ್ನನ್ನು ಎಚ್ಚರಿಸುವಳು. "ಮಗೂ, ತೋಟಕ್ಕೆ ನೀರೆರೆದು ಬಾ"—ಎನ್ನುವಳು. ಕೆಲವು ದಿನಗಳಲ್ಲಿ ಅವಳು ಹೇಳುವ ಮೊದಲೇ ನಾನೆದ್ದು ನೀರೆರೆಯತೊಡಗುತ್ತಿದ್ದೆ. ಕಸಬರಿಗೆಯನ್ನು ತೆಗೆದುಕೊಂಡು ಅದರ ಸಂದುಗೊಂದನ್ನೆಲ್ಲ ಗುಡಿಸಿ ಚೊಕ್ಕಟವಾಗಿರಿಸುತ್ತಿದ್ದೆ. ಗುಡಿಸಿಯಾಗಲು, ನನ್ನೆರಡೂ ಪುಟ್ಟ ಕೈಗಳಿಂದ ನೀರ ಬಿಂದಿಗೆಯನ್ನು ತಂದು, ಪ್ರತಿ ಗಿಡಕ್ಕೆ ಸುರಿಯುತ್ತಿದ್ದೆ. ನೀರೆರೆದಾಯಿತಾದರೆ, ಅಲ್ಲೇ ಕುಳಿತುಕೊಂಡು ಕಳೆಯನ್ನು ಕೀಳತೊಡಗುವೆ. ನನಗೆ ಅದರ ಕೆಲಸ ಮುಗಿಯಿತೆಂದು ತೋರು ತ್ತಿರಲಿಲ್ಲ. ಎಷ್ಟು ಆರೈಕೆಮಾಡಿದರೂ ತೃಪ್ತಿಯಿಲ್ಲ. ಅದರಲ್ಲಿ ಹೂವು ಗಳಾದುವೆಂದರೆ, ನನ್ನ ಒಡಲೇ ಅರಳಿದಷ್ಟು ಆನಂದವಾಗುತ್ತಿತ್ತು. "ದೇವರಿ ಗೆ"ಂದು ಹೇಳಿದರೂ ನನ್ನ ತೋಟದಿಂದ ಯಾರಿಗೂ ಹೂವಾರಿಸಲು ನಾನು ಬಿಡುತ್ತಿರಲಿಲ್ಲ. "ದೇವರಿಗೆ, ದೇವರಿಗೆ,"—ಎಂದು ಮೂರು ಮೂರು ಬಾರಿ ಕೇಳುವವರಿದ್ದರು. ಆದರೆ ನನ್ನುತ್ತರವು ಅವರಿಗೆ ಇದು: "ಹೂವು ಗಿಡದ ಮೇಲಿದ್ದುದನ್ನೇ ಕಂಡು ದೇವರು ಆನಂದಿಸಲಾರನೇನು? ಮೈತುಂಬಾ ಆವನಿಗೆ ಕಣ್ಣುಗಳಲ್ಲವೇ? ಮೈತುಂಬಾ ಮೂಗುಗಳಿಲ್ಲವೇ"—ಎಂದು. ನನ್ನೊಡನೆ ಯಾರೂ ಚರ್ಚಿಸಲು ಬರುತ್ತಿರಲಿಲ್ಲ. ನನ್ನ ಮುದ್ದಾದ ಮರಿಗಳು

ತೊಟ್ಟ ಹಳದಿ, ಕೆಂಪು, ಕಿತ್ತಿಳೆ ಹೂವುಗಳನ್ನು ಕುಯ್ಯುವುದೆಂದರೆ, ಅವುಗಳ ಗೋಣುಮುರಿದಂತೆ ಕಾಣುತ್ತಿತ್ತು. ದೇವರು ನಮ್ಮಂಥ ಸ್ವಾರ್ಥಿಯೇ! ಮಾನವರ ಮೂಗಿನ ಬಳಿಯಿದ್ದರೆ ಮಾತ್ರ ಹೂವುಗಳಿಗೆ ಮೌಲ್ಯವೆಂದು ಅವನು ತಿಳಿಯುವನೇ?

ಎಷ್ಟೋ ದಿನ—'ಯಾರಾದರೂ ನನ್ನ ತೋಟದಿಂದ ಹೂವುಗಳನ್ನು ಕದ್ದು ಒಯ್ದರೆ—?' ಎಂಬ ಅಂಜಿಕೆಯಾದುದುಂಟು. ಅದರಿಂದ ಎಷ್ಟೋ ರಾತ್ರಿ ನಿದ್ರೆಯನ್ನು ಕಳೆದುಕೊಂಡುದೂ ಉಂಟು. ಕಾರ್ಯಾಂತರದಿಂದ, ಮನೆಯಿಂದ ನಾನು ಕಣ್ಮರೆಯಾದರೆ, ನನ್ನ ಜೀವವೆಲ್ಲ ಈ ಮುದ್ದು ಕಂದವ್ವಗಳ ಮೇಲೆ. ಎಲ್ಲಿ ಆಡು ಬಂದು ಮೆಲ್ಲುವದೋ, ಎಲ್ಲಿ ತುಂಟ ಹುಡುಗರು ಅವುಗಳನ್ನು ಮುರಿಯುವರೋ ಎಂಬ ಭೀತಿ.

ಒಂದು ದಿನ ನಾನು ನನ್ನಜ್ಜಿಯ ಮನೆಗೆ ಹೋಗಿದ್ದೆ. ಅವರ ಬಲವಂತದಿಂದ ಎರಡು ದಿನಗಳ ತನಕ ಮನೆಗೆ ಬರಲು ಆಗಲಿಲ್ಲ. ಅಲ್ಲಿನ ಬಾಲಕರೊಡನಾಟದಲ್ಲಿ ನನಗೆ ತೋಟದ ಮರವೆಯೇ ಆಯಿತು. ಎರಡು ದಿನಗಳ ಬಳಿಕ ಧಾವಿಸಿ ಬಂದು ನೋಡುತ್ತೇನೆ: ನನ್ನ ಕೂಸುಗಳು, ನನ್ನ ಮುದ್ದು ಗೆಳೆಯರು ಬಾಯಾರಿ ಬಾಡಿದ್ದುವು. ನನಗೆ ತುಂಬಾ ದುಃಖವಾಯಿತು. ಓಡೋಡಿ ಬಾವಿಯಿಂದ ನೀರನ್ನು ತಂದು ಸುರಿದೆ. ಆದರೂ ಆ ದಿನ ಅವುಗಳು ನನ್ನನ್ನು ಕ್ಷಮಿಸಲಿಲ್ಲವೆಂದೇ ಕಂಡಿತು. ಅಂದಿನಿಂದ ನಾನು ಅವುಗಳ ಸೇವೆಯಲ್ಲಿ ತಪ್ಪಲಿಲ್ಲ.

ನನ್ನ ತೋಟವು ನನಗೆ ಮಾತ್ರ ಸಂತಸವನ್ನು ಕೊಡುತ್ತಿತ್ತೆಂದು ತಿಳಿಯದಿರಿ. ನಮ್ಮ ಕೇರಿಯವರೆಲ್ಲ, ಸಂಜೆಯಾಯಿತೆಂದರೆ ಅದರ ಬಳಿ ಹಾಕಿದ್ದ ಮರಳ ರಾಶಿಯ ಮೇಲೆ ಕುಳಿತು ಆನಂದಿಸುವರು. ತುಸು ತಂಬೆಲರು ಬೀಸಿತೆಂದರೆ ಅವರು ಮೈಮರೆಯುವರು. ಎಷ್ಟೋ ಬಾರಿ ಪುಟ್ಟ ಕೂಸುಗಳನ್ನು ತರುವರು. ಅವುಗಳಿಗೆ ಹೂವಿನ ಆಸೆಯಾಯಿತೆಂದರೆ—"ಆಗದಮ್ಮಾ ತೆಗೆಯಬಾರದು"—ಎನ್ನುವರು. ನನ್ನ ತೋಟವನ್ನು ಕಂಡು, ಎಷ್ಟೋ ಚಿಕ್ಕಪುಟ್ಟ ಮಕ್ಕಳು ತಮ್ಮ ಮನೆಯ ಅಂಗಣದಲ್ಲೂ ಇಂಥ ಚಿಕ್ಕ ಹೂಗಿಡಗಳನ್ನು ನಟ್ಟುದುಂಟು.

ನನ್ನ ತೋಟದಿಂದ ನನ್ನ ಕೇರಿಯವರಿಗೇನು, ಊರ ಹಕ್ಕಿ ಪತಂಗಗಳಿಗೆಲ್ಲಾ ಆನಂದವೇ! ನನ್ನ ಕಂದಮ್ಮಗಳು ಬಿಡುವ ಹೂವಿನ ಬಣ್ಣಗಳನ್ನು

ತೊಟ್ಟ ಹಲವು ಪತಂಗಗಳು ಬಂದು ಕುಣಿಯುವುವು. ಇನ್ನು ಎಷ್ಟೋ ಚಿಕ್ಕ ಪುಟ್ಟ ಹಕ್ಕಿಗಳು ಬಂದು ಅದರ ಬಳಿ ಕುಣಿದಾಡುವುವು. ಬೆಳಗು ಸಂಜೆ ಗಳಲ್ಲಿ ತಪ್ಪದೆ ಅವುಗಳ ಹಾಡು ಅಲ್ಲಿಂದ ಕೇಳಿಸುತ್ತಿತ್ತು.

ಆದರೆ ಇದೆಲ್ಲ ಅಂದಿನ ಕಥೆ. ಅಂದಿನ ಚೆಲುವು ಇಂದು ನಿಜಕ್ಕೂ ನನ್ನ ತೋಟಕ್ಕಿಲ್ಲ. ಅಂದಿನದು ನಿಜ ಅರಮನೆಯಾದರೆ ಇಂದಿನದು ಬರೀ ಕನಸಿನ ಅರಮನೆ.

ಅದೊಂದು ದಿನ ನನ್ನ ನೆರೆಮನೆಯ ಬಾಲಕನೊಬ್ಬನು ನನ್ನನ್ನು ತಮ್ಮ ಮನೆಗೆ ಬರಹೇಳಿದನು. ಅಲ್ಲವನು ನನಗೆ ನಾನಾ ಬಗೆಯ ಆಟಗಳನ್ನು ಕಲಿಸಿದನು. ನಾನು ಅವನ ಕೃತ್ರಿಮ ಆಟಗಳಲ್ಲೆ ಭ್ರಮಿತನಾದೆ. ಅವೇ ಹರುಷದಾಯಕವೆಂದು ತಿಳಿಯತೊಡಗಿದೆ. ಸಂಜೆ ಬೆಳಗುಗಳಲ್ಲಿ ವಿರಾಮ ದೊರೆಯಿತೆಂದರೆ, ಅವನನ್ನು ಕಟ್ಟಿಕೊಂಡು ಎಲ್ಲೆಲ್ಲಿ ಅಲೆದಾಡುತ್ತಿದ್ದೆ. ಅದ ರಿಂದ ತೋಟದ ಮೇಲಿನ ಮಮತೆಯೇ ತಗ್ಗಿತು. ಒಂದು ದಿನ ಅದು ಸಂಪೂರ್ಣ ನಶಿಸಿಹೋಯಿತು. ಇದೇ ಸಮಯ ನನ್ನ ಅಮ್ಮನಿಗೆ ದೃಷ್ಟಿಯು ಲೋಪವಾಯಿತು. ಇಲ್ಲವಾದರೆ ನನ್ನ ತೋಟದ ದುರವಸ್ಥೆಯು ಅವಳ ಕಣ್ಣಿಗೆ ಬಿದ್ದು ಅವಳಾದರೂ ನನ್ನನ್ನು ಎಚ್ಚರಿಸುತ್ತಿದ್ದಳೋ ಏನೋ. ಅದೂ ಇಲ್ಲದಾಯಿತು. ನಾನು ಜೀನು ಕಡಿವಾಣಗಳಿಲ್ಲದ ಕುದುರೆಯಾದೆ.

ನಮ್ಮ ನೆರೆ ಹಿತ್ತಿಲಿನವರು ತೀರ ಆಲಸಿಗಳು. ಅವರ ಹಿತ್ತಿಲು ತುಂಬ ಒಂದು ಬಗೆಯ ನಾಚುಗೆ ಮುಳ್ಳಬೀಳಲು ತುಂಬಿತ್ತು. ಅದರ ಬೀಳಲೊಂದು ನಮ್ಮ ತೋಟಕ್ಕೂ ಬಂದಿತು. ಒಂದು ವರುಷದೊಳಗಾಗಿ ನನ್ನ ತೋಟವನ್ನೆ ನುಂಗಿಬಿಟ್ಟಿತು. ಪಾಪ, ನನ್ನ ಕಂದಮ್ಮಗಳು ಎಷ್ಟು ಗೋಳಿಟ್ಟುವೋ ಏನೋ! ಆದರೆ ಯಾರು ಕೇಳಬೇಕು? ನನ್ನ ಧ್ಯಾನವೆಲ್ಲ ಹೊರಗೆ ಚಲಿಸು ತ್ತಿತ್ತು. ನನ್ನದೆಂಬ ತೋಟವೊಂದಿತ್ತು ಎಂಬ ನೆನವರಿಕೆಯೂ ನನಗಿಲ್ಲದಾ ಯಿತು. ನಾನೇ ಇಷ್ಟು ಉದಾಸೀನನಾಗಲು, ನನ್ನ ತೋಟವನ್ನು ಕಾಣಲು ಬರುವವರಾರು? ಊರು ಕೇರಿಯವರೆಲ್ಲ ಎಲ್ಲೆಲ್ಲಿ ಹೋದರೋ. ಅಂತು ಅವರು ಬಂದು ವಿಶ್ರಮಿಸುತ್ತಿದ್ದ ಮರಳು ದಿನ್ನೆಗಳಲ್ಲಿ, ಕಾಡುಪೊದೆಗಳು ಬೆಳೆದು ಆಡುಗಳ ಒಂದು ಮೇಯುವ ನೆಲೆಯಾಯಿತು!

ಒಂದು ದಿನ ಒಬ್ಬ ಮಿತ್ರರು ಬಂದು—"ನಿನ್ನ ಹೂವುಗಳ ಚೆಂದವನ್ನು ದೇವರು ಗುಡಿಯಿಂದಲೇ ಕಂಡು ಹರುಷಪಡುತ್ತಿರುವನು" ಎಂದರು! ನಾನವರ

ಮಾತನ್ನು ಕಿವಿಯ ಮೇಲೇರಿಸಿಕೊಳ್ಳಲೇ ಇಲ್ಲ. ನನ್ನ ಸುಖವೆಲ್ಲಾ ತೋಟವನ್ನು ಮಿಕ್ಕಿತ್ತು.

ಒಂದು ದಿನ ನಡೆನಡೆದು ಬಲು ಆಯಾಸವಾಗಿತ್ತು. ಮನೆಯ ಕಡೆಗೆ ಬಂದೆ. ಬಂದವನು ನನ್ನ ತೋಟವಾಗಿದ್ದ ಸ್ಥಳದ ಬಳಿ ದಣಿವಾರಿಸಲೆಂದು ಕುಳಿತೆ. ಮೊದಲಿನ ಕಾಲವಾಗಿದ್ದರೆ ನಾನಲ್ಲಿ ಕ್ಷಣಕಾಲ ನಿಲ್ಲುತ್ತಿರಲಿಲ್ಲ. ಕುಳಿತವನಿಗೆ ಚಿಕ್ಕ ಝೋಂಪು ಹತ್ತಿತ್ತು. ನಿದ್ರೆ ತೂಗುತ್ತಿದ್ದ ನನ್ನನ್ನು ಏನೋ ಕಡಿದಂತಾಯಿತು. "ಅಯ್ಯೋ" ಎಂದು ಚೀರಿದೆ. ಕಣ್ಣೆದುರಿಗೆ ನನ್ನನ್ನು ಕಡಿದ ಹಾವು ಬುಸುಗುಟ್ಟುತ್ತ, ನನ್ನ ತೋಟದ ಮುಳ್ಳು ಬೀಳಲಿ ನೆಡೆಯನ್ನು ಸೇರಿತು. ನನಗೆ ಸಾಯುವೆನೆಂಬ ಭೀತಿಯಾಯಿತು. "ಅಮ್ಮಾ, ಅಮ್ಮಾ" ಎಂದು ಚೀರಿದೆ. ನನ್ನ ಕೂಗನ್ನು ಕೇಳಿ ತಾಯಿ ತಡವರಿಸುತ್ತ "ಮಗು, ಏನಾಯಿತು? ಏನಾಯಿತು?" ಎಂದು ಕೂಗುತ್ತ ಬಂದಳು. "ಹಾವು ಕಡಿಯಿತೆ"ಂದೆ........ನನ್ನ ತಾಯಿ ನೆರೆಕರೆಯುವರನ್ನು ಕೂಗಿ ಕರೆದಳು. ನಾಲ್ಕಾರು ಮಂದಿ ಬಂದರು. ವೈದ್ಯರನ್ನು ಕರೆತಂದರು. ಏನೇನೋ ಚಿಕಿತ್ಸೆಯನ್ನು ಮಾಡಿದರು. ಬಲುವಾದ ಸಂಕಟವನ್ನು ಅನುಭವಿಸಿದೆನು. ಒಂದು ದಿನ ಸರಿದ ಬಳಿಕ ನನಗೆ ಚೇತನವಾಯಿತು. ಆರೋಗ್ಯವೂ ಬಂದಿತು. ಅಲ್ಲಿಯ ತನಕ ನನ್ನ ಅವ್ವನು ನನ್ನನ್ನು ಮಾತನಾಡಿಸಲಿಲ್ಲ. ನಾನು, ಆರೋಗ್ಯಗೊಂಡುದನ್ನು ಕಂಡು ಹರ್ಷಿತಳಾಗಿ ನನ್ನನ್ನು ಬಳಿಗೆ ಕರೆದು— "ಮಗು, ಹಾವು ಎಲ್ಲಿಂದ ಬಂದಿತು? ಇದುವರೆಗೆ ನಮ್ಮ ತೋಟದಲ್ಲಿ ಹಾವು ಬಂದುದನ್ನು ನಾನು ಕೇಳಿರಲಿಲ್ಲ"—ಎಂದಳು.

"ಹೂದೋಟದಿಂದ"—ಎಂದೆ.

ಅವಳಿಗೆ ಮತ್ತಷ್ಟು ಆಶ್ಚರ್ಯವಾಯಿತು. "ಮಗು, ಹೂದೋಟದಲ್ಲಿ ಹಾವೆಂದರೇನು? ಒಂದು ಕಳೆಯೂ ಹುಟ್ಟದಂತೆ ಕಾಪಾಡಿದ ಹೂದೋಟದಲ್ಲಿ ಹಾವೇ" ಎಂದಳು.

ಆಗ ನನಗೆ ಹೊಳೆಯಿತು—ನನ್ನ ಹೂದೋಟವು ಕಣ್ಮರೆಯಾಗಿ, ಅಲ್ಲಿ ಮುಳ್ಳುಗಿಡಗಳೆಲ್ಲಾ ಬೆಳೆದು ಆ ವಿಷಜಂತುವಿಗೆ ಎಡೆಕೊಟ್ಟಿತೆಂದು. ಅಮ್ಮನು ಪ್ರೇಮದಿಂದ ಮಾಡಿಕೊಟ್ಟ ಹೂದೋಟವನ್ನು ಹಾಳುಮಾಡಿದೆನಲ್ಲ ಎಂದು ದುಃಖವಾಯಿತು. ಅದಕ್ಕಾಗಿ ಬಳಬಳನೆ ಕಣ್ಣೀರನ್ನು ಸುರಿಸಿದೆ. ನನ್ನ

ಉಕ್ಕುತ್ತಿದ್ದ ದುಃಖದ ಪರಿಚಯವು ಅವಳಿಗಾಯಿತು. “ಏನು, ಏಕೆ ಅಳುತ್ತಿರುವೆ” ಎಂದು ಕೇಳಿದಳು. ಎಲ್ಲವನ್ನೂ ಹೇಳಿದೆನು. ನನಗೂ ಮೀರಿದ ದುಃಖ ಅವಳಿಗಾಯಿತು. “ಮಗೂ, ನೀನಿಷ್ಟು ಮೈಮರೆಯುವಿಯೆಂದು ನಾನು ತಿಳಿದಿರಲಿಲ್ಲ”—ಎಂದಳು. “ಇನ್ನೆಂದೂ ಹಾಗೆ ಉದಾಸೀನನಾಗಿರಲಾರೆ. ತಿರುಗಿ ನನ್ನ ಹೂದೋಟವನ್ನು ಸರಿಪಡಿಸುವೆನೆ”ಂದು ವಚನವಿತ್ತೆ. ನನ್ನ ಪಶ್ಚಾತ್ತಾಪವನ್ನು ಕಂಡು ಅವಳಿಗೆ ಸಂತಸವಾಯಿತು. ಅಂದೇ ಕಾಡು ಬೆಳೆದ ಬೀಳಲುಗಳನ್ನು ಕಡಿದು ಸವರಿದೆ.

ಪಾಪದ ನನ್ನ ಕಂದವ್ವಗಳು ಅವುಗಳೆಡೆಯಲ್ಲಿ ಸಿಕ್ಕಿ, ಅನ್ನ ನೀರಿಲ್ಲದೆ ಕಂಗೆಟ್ಟು ಕಡ್ಡಿಯಾಗಿದ್ದವು. ಸೇವಂತಿಗೆಯಂತು ಸತ್ತೇ ಹೋಗಿತ್ತು. ತಿರುಗಿ ಅವುಗಳನ್ನು ಆರೈಕೆಯಿಂದ ಚೇತನಗೊಳಿಸುವುದು ಅಸಾಧ್ಯವೆಂಬಷ್ಟಾಯಿತು. ಈಗೇನೋ ಅವು ತುಸು ಜೀವಕಳೆಯನ್ನು ಹಿಡಿದು ಎದ್ದು ನಿಂತಿವೆ. ಇನ್ನೆಂದಿಗೂ ನಾನವುಗಳನ್ನು ಮರೆಯುವಂತಿಲ್ಲ. ಆದರೇನು? ಎಷ್ಟು ಎಚ್ಚರದಿಂದ ಅವನ್ನು ರಕ್ಷಿಸಿಕೊಂಡು ಬಂದರೂ ನನ್ನ ಉದ್ಯಾನದ ಅಂದಿನ ಶೋಭೆ ಕನಸಿನ ಗಂಟೇ ಸರಿ!

---



## ಶ್ರೀಮತಿ ಪಿ. ಮಂದಾಕಿನಿ ಬಾಯಿಯವರು, ಮದ್ರಾಸು

ಇವರು ಉಡುಪಿಯವರು. ಈಗ ಮದ್ರಾಸಿನ ಕ್ವೀನ್ ಮೇರೀಸ್ ಕಾಲೇಜಿನ ಕನ್ನಡ ಪಂಡಿತೆ. ವಿದ್ವತ್‌ಪರೀಕ್ಷೆಯಲ್ಲಿ ಪ್ರಥಮತಃ ಉತ್ತೀರ್ಣೆಯಾದ ಕನ್ನಡಿತಿ ಇವರೆ. ಹಿಂದೀ ಭಾಷೆಯಲ್ಲಿಯೂ 'ರಾಷ್ಟ್ರಭಾಷಾ ವಿಶಾರದೆ'. ಏಳೆಂಟು ವರ್ಷಗಳಿಂದ ಕನ್ನಡ ಪತ್ರಿಕೆಗಳಲ್ಲಿ ಇವರ ಲೇಖನಗಳೂ ಕತೆಗಳೂ ಪ್ರಕಟವಾಗುತ್ತಿವೆ. ಹಿಂದೂ ಸಮಾಜದ ಸ್ತ್ರೀಯರ ದುಃಖಗಳ ಚಿತ್ರಣವು ಇವರ ಕತೆಗಳಲ್ಲಿ ಪ್ರಾಧಾನ್ಯವನ್ನು ಪಡೆದಿದೆ. ಕತೆಗಳಲ್ಲಿ ಕಾದಂಬರಿಯ ನೆರಳು ಹಾಯುವುದಿದೆ. ಪ್ರಾಚೀನ ರೀತಿಯ ಪ್ರಭಾವವೂ ಅಲ್ಲಲ್ಲಿ ಕಾಣುತ್ತದೆ. ಆದರೂ ಕೆಲವು ಕತೆಗಳು ಉತ್ತಮವಾಗಿವೆ. ಅವುಗಳಲ್ಲಿ ಮನ ಮೆಚ್ಚುವ ವಿಷಯಗಳಿವೆ.

# ಹೊಣೆ ಯಾರು

ಪಿ. ಮಂದಾಕಿನಿಬಾಯಿಯವರು

೧

"ಲೀಲಾ! ನಾನು ನಿನ್ನಲ್ಲಿ ಅಪರಾಧಿಯಾಗಿದ್ದೇನೆ. ಅದಕ್ಕಾಗಿ ನನ್ನನ್ನು ಕ್ಷಮಿಸಲಾರೆಯಾ? ಕ್ಷಮಿಸು! ಕ್ಷಮಿಸಿದೆನೆಂದು ಹೇಳು!!"

"ಹಾಗೆನ್ನಬಾರದು. ನೀವು ನನ್ನಲ್ಲಿ ಮಾಡಿರುವ ಅಪರಾಧವಾದರೂ ಏನು?"

"ಲೀಲಾ! ನೀನಿನ್ನೂ ಚಿಕ್ಕವಳು. ನಿನಗೆ ತಿಳಿಯದು. ನಾನು ನಿನ್ನಲ್ಲಿ ದ್ರೋಹಿ; ವಿಶ್ವಾಸಘಾತುಕ. ನಾನು ನಿನ್ನ ವಿವಾಹಕ್ಕೆ ಪೂರ್ವವೇ ಇನ್ನೊಬ್ಬಳನ್ನು ನನ್ನ ಕಾಮತೃಷ್ಣೆಯ ಉಪಭೋಗ್ಯ ವಸ್ತುವನ್ನಾಗಿ ಮಾಡಿಕೊಂಡಿದ್ದೆ. ಆದರೂ ನಿನ್ನ ಸುಖ, ಸೌಭಾಗ್ಯಗಳನ್ನು ಲೆಕ್ಕಿಸದೆ, ನಿನ್ನ ರೂಪ ಲಾವಣ್ಯಾದಿಗಳನ್ನು ನೋಡಿ ನಿನ್ನನ್ನು ಮದುವೆಯಾದೆನು. ನನ್ನ ಪ್ರೇಮವನ್ನು ನಿನಗೆ ಕೊಡದೆ ಅದಕ್ಕೆ ಇನ್ನೊಬ್ಬಳನ್ನು ಭಾಗಿಯಾಗಿ ಮಾಡಿ ಅದರ ಫಲವಾಗಿ ಈಗ ಮಹಾ ಭಯಂಕರವಾದ ವೈಧವ್ಯವನ್ನು ನಿನ್ನ ಪಾಲಿಗೆ ಒಪ್ಪಿಸುತ್ತಿದ್ದೇನೆ. ನಿನ್ನನ್ನು ವೈಧವ್ಯವೆಂಬ ಮಾರಿಗೆ ಬಲಿಗೊಡುತ್ತಿದ್ದೇನೆ. ನಿನ್ನನ್ನು ಮದುವೆಯಾಗಲು ನನಗೆ ಅಧಿಕಾರವಿರಲಿಲ್ಲ. ಎರಡು ಸಾವಿರ ವರದಕ್ಷಿಣೆಯೊಂದಿಗೆ ಶ್ರೀಧರನಿಗೆ ನಿಶ್ಚಯವಾಗಿದ್ದ ನಿನ್ನನ್ನು ವರದಕ್ಷಿಣೆ ತೆಗೆದುಕೊಳ್ಳದೆಯೇ ಮದುವೆಯಾಗಲು ಮುಂದುವರಿದು ನಿನ್ನ ತಂದೆಯ ಮನಸ್ಸನ್ನು ತಿರುಗಿಸಿದೆನು. ಪಾಪ! ವೃದ್ಧನಾದ ನಿನ್ನ ತಂದೆಯು ನಿನ್ನ ಹಿತವನ್ನೆಣಿಸದೆ, ನನ್ನ ವಿಷಯದಲ್ಲಿ ಅಪರಿಚಿತನಾಗಿದ್ದುದರಿಂದಲೂ, ನನ್ನ ಸ್ವಭಾವವನ್ನು ಸ್ವಲ್ಪವೂ ತಿಳಿಯದವನಾಗಿದ್ದುದರಿಂದಲೂ ತನ್ನ ಸಾಲದ ಭಾರವನ್ನು ಪರಿಹರಿಸಿಕೊಳ್ಳುವ ಸದುಪಾಯವನ್ನು ಕಂಡು ನಿನ್ನನ್ನು ಶ್ರೀಧರನಿಂದ ತಪ್ಪಿಸಿ ನನಗೆ ಮದುವೆಮಾಡಿಕೊಟ್ಟನು. ನೀನು ಶ್ರೀಧರನನ್ನೇ ಮದುವೆಯಾಗುತ್ತೇನೆಂದು ನಿನ್ನ ಸಖಿಯಾದ ಸುಶೀಲೆಯೊಡನೆ ಹೇಳುತ್ತಿದ್ದುದೂ, ಅವನಾದರೂ ನಿನ್ನನ್ನು ಪ್ರೀತಿಸುತ್ತಿದ್ದುದೂ ನನಗೆ ತಿಳಿಯದಿರಲಿಲ್ಲ........ಲೀಲಾ! ಹೀಗಿದ್ದು ನಿನ್ನನ್ನು ಮದುವೆಮಾಡಿಕೊಳ್ಳಬಾರದಾಗಿತ್ತು. ಅಟ್ಟಮೇಲೆ ಒಲೆ ಉರಿಯಿತು. ಈಗ ಪಶ್ಚಾತ್ತಾಪ

ಪಡುವುದರಿಂದ ನಿನ್ನ ವೈಧವ್ಯವೇದನೆಯು ದೂರವಾಗುವುದೇ? ಅಂದು ನಾನು ನಿನ್ನ ಮನೆಗೆ ಪ್ರಥಮದಲ್ಲಿ ಬಂದ ರಾತ್ರಿ ಓದುತ್ತಿದ್ದ ನಿನ್ನನ್ನು ನೋಡಿ, ಆ ನಿನ್ನ ಬಾಲಭಾವಸ್ವಭಾವವಾದ ಚಂಚಲತೆಯನ್ನೂ ಚುರುಕನ್ನೂ ಕಂಡು, ನಿನ್ನಲ್ಲಿ ನೆಟ್ಟ ನನ್ನ ಮನಸ್ಸನ್ನು ಹಿಂದಿರುಗಿಸಲಾರದೆ ಹೋದೆನು. ನಾನು ವರದಕ್ಷಿಣೆ ತೆಗೆದುಕೊಳ್ಳದೆ ಮದುವೆಯಾಗಲು ಮುಂದರಿಯದಿರುತ್ತಿದ್ದರೆ ನೀನು ಇಂದು ಶ್ರೀಧರನೊಂದಿಗೆ ಸುಖಜೀವನವನ್ನು ಅನುಭವಿಸುತ್ತಿದ್ದೆ. ನಾನು ನಿನ್ನ ರೂಪಕ್ಕೆ, ಗುಣಕ್ಕೆ ಕೊನೆಗೆ ನಿನ್ನ ಸೌಭಾಗ್ಯಕ್ಕೇ ಮೃತ್ಯುವಾದೆ. ನಿನ್ನ ನಾಶಕ್ಕೆ ಮೂಲಕಾರಣನಾದೆ. ಇಷ್ಟಾದರೂ ನಿನ್ನ ಜೀವನಕ್ಕೆ ದಾರಿಯನ್ನು ಮಾಡಲಿಲ್ಲ. ನಿನ್ನ ಗತಿ ಏನು? ನೀನು ನಿನ್ನನ್ನು ಹೇಗೆ ಕಾಪಾಡಿಕೊಳ್ಳುವೆ? ಎಂಬುದೇ ಈಗ ನನ್ನ ಯೋಚನೆಯಾಗಿದೆ."

"ನೀವು ಹೆಚ್ಚು ಮಾತಾಡಿ ಶ್ರಮ ಪಡಬಾರದೆಂದು ಡಾಕ್ಟರರು ಹೇಳಿರುತ್ತಾರೆ."

"ಇದು ವರೆಗೆ ಹೇಗಾದರೂ ಯೋಚಿಸ ಬಹುದಾಗಿತ್ತು. ಆದರೆ ಈಗ ಮೃತ್ಯು ಶಯ್ಯೆಯಲ್ಲಿರುವ ನನಗೆ ನನ್ನ ಒಂದೊಂದೇ ತಪ್ಪುಗಳೂ ನಿನ್ನಲ್ಲಿ ಮಾಡಿದ ಭಯಂಕರ ಅತ್ಯಾಚಾರ ಅನಾಚಾರಗಳೂ ಕಣ್ಣ ಮುಂದೆ ತಾಂಡವ ವಾಡುತ್ತಿವೆ. ಅವು ಮುಂದೆ ನನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಅನುಭವಿಸಲು ಕರೆದುಕೊಂಡು ಹೋಗುವುದಕ್ಕೆ ಬಂದಿರುವುವೋ ಎಂಬಂತೆ ನನ್ನ ಮುಂದೆ ವಿಕಟವಾಗಿ ನಗುತ್ತಾ ಹಾಸ್ಯಮಾಡುತ್ತಿವೆ........ಲೀಲಾ! ನಿನ್ನ ಪಾಲಿಗೆ ನಾನೇ ಮೃತ್ಯು! ನಿನ್ನ ತಂದೆಯು ಹೇಗಾದರೂ ಮಾಡಿ ನಿನ್ನನ್ನು ಶ್ರೀಧರನಿಗೆ ಮದುವೆ ಮಾಡುತ್ತಿದ್ದರು. ನಾನು ನಡುವೆ ಯಮನಾಗಿ ಬಂದೆ. ಇದ್ದಾಗಲೂ ಸುಖ ಕೊಡಲಿಲ್ಲ. ಸತ್ತ ಮೇಲೆ ಒಂದು ತುತ್ತು ಅನ್ನಕ್ಕೂ ಗತಿ ಮಾಡಲಿಲ್ಲ. ಇನ್ನು ನಿನ್ನ ತಂದೆಯ ಮನೆಗೆ ಹೋದರೂ ನಿನಗೆ ಸುಖವಿಲ್ಲ. ಆ ಚಿಕ್ಕಮ್ಮನೊಂದಿಗೆ ಹೇಗೆ ತಾನೆ ದಿನಗಳನ್ನು ಕಳೆಯುವೆ! ಏನು ಮಾಡುವೆ! ಲೀಲಾ! ಈ ಯೋಚನೆಯೇ ನನ್ನನ್ನು ಸುಡುತ್ತಿದೆ. ಲೀಲಾ! ಕ್ಷಮಿಸಲಾರೆಯಾ! ಕ್ಷಮಿಸಲಾರೆಯಾ!............"

ಲೀಲೆಯು ಮೌನವಾಗಿ ಕಣ್ಣೀರು ಸುರಿಸುತ್ತಿದ್ದಳು.

"ಲೀಲಾ! ಆಯಿತು! ಇನ್ನು ನನ್ನ ಆಟ ಮುಗಿಯಿತು!! ನೀನು ನಿರ್ಗತಿಕಳಾದೆ. ಲೀಲಾ! ನಮ್ಮ ಸಮಾಜದ ನಿಬಂಧನೆಗಳಾದರೂ ಎಂತಹ ಕಠಿಣ! ಪತಿಯು ಬಧಿರ, ಅಂಧ, ಹೆಳವ, ರೋಗಿ ಎಂಥವನೇ ಆಗಲಿ, ಸ್ತ್ರೀಯು ಅವನನ್ನು ಪರದೇವತೆಯಂತೆ ಪೂಜಿಸಬೇಕು! ಅವನೊಂದಿಗೆ ಆಜನ್ಮ ಪರಿಯಂತ ಬಾಳಬೇಕು! ಅವಳಿಗೆ ದಾಂಪತ್ಯವಿಚ್ಛೇದಕ್ಕೆ ಅಧಿಕಾರವಿಲ್ಲ. ಬಾಲವಿಧವೆಯೂ ಕೂಡ ಪುನರ್ವಿವಾಹ ಮಾಡಿಕೊಳ್ಳಲು ಶಾಸ್ತ್ರಮರ್ಯಾದೆ ಇಲ್ಲ. ಇಷ್ಟು ಮಾತ್ರವಲ್ಲ,—ಅವಳಿಗೆ ಆಗಲೇ ಮುಂಡನಾದಿ ಕ್ರೂರ ಕೃತ್ಯಗಳನ್ನು ಮಾಡಿಸಿ ಮೂಲೆಯಲ್ಲಿ ಕುಳ್ಳಿರಿಸುತ್ತಾರೆ. ಲೀಲಾ! ಇದನ್ನೆಲ್ಲಾ ನೆನೆಸಿಕೊಂಡು, ನಿನ್ನ ರೂಪವನ್ನೂ ನೆನೆಸಿಕೊಂಡರೆ ನನಗೆ ಸಹಿಸಲಾರದ ವ್ಯಥೆಯಾಗುತ್ತಿದೆ. ಆದರೆ ಗಂಡನು ಮಾತ್ರ ಹೆಂಡತಿ ಸತ್ತರೆ ಮಾತ್ರವಲ್ಲ, ಇರುವಾಗಲೇ ಒಂದಲ್ಲ, ಎರಡಲ್ಲ, ಮೂರಲ್ಲ, ಮನಸ್ಸಿಗೆ ಬಂದಷ್ಟು ಮದುವೆ ಮಾಡಿಕೊಳ್ಳುವುದಲ್ಲದೆ ದುರಾಚಾರಿಯಾಗಿದ್ದರೂ ಅವನಿಗೆ ಸಮಾಜದಲ್ಲಿ ಯಾವ ನಿಬಂಧನೆಯೂ ಇಲ್ಲ! ಹಾಳು ಅಂಧ ಸಮಾಜವೇ! ನೀನೆಂದಿನ ವರೆಗೆ ಸ್ತ್ರೀಯರ ಕಣ್ಣೀರನ್ನೊರಸುವುದಿಲ್ಲವೋ, ಅದುವರೆಗೆ ನಿನಗೆಲ್ಲಿಯ ಏಳಿಗೆ! ಅನಾಥೆಯರೂ ಅಬಲೆಯರೂ ಆದ ಅಶಿಕ್ಷಿತ ನಾರೀಸಮುದಾಯವು ನಿರಾಶ್ರಯದಿಂದ ಜೀವಿಸಲಾರದೆ ಆಶ್ರಯವನ್ನು ಹುಡುಕಿಕೊಂಡು ಹೋಗಿ, ಕೊನೆಗೆ ಅದೇ ವಿಪರೀತವಾಗಿ ಅವರು ಅಸತಿಯರಾಗಿ ಪರಿಣಮಿಸಿದರೂ ನಮ್ಮ ಸಮಾಜವು ತೂಕಡಿಸುತ್ತಿದೆಯೇ ಹೊರತು ಅವರಿಗೆ ತಕ್ಕ ಮಾರ್ಗವನ್ನು ತೋರಿಸುವುದಿಲ್ಲ. ಇದಕ್ಕಿಂತ ಹೆಚ್ಚಿನ ಅತ್ಯಾಚಾರವಿನ್ನೇನು ಬೇಕು! ಲೀಲಾ! ನಾನೊಂದು ಮಾತನ್ನು ಹೇಳುವೆನು. ಅದರಂತೆ ನಡೆಯುವೆಯಾ?"

"ಹೂಂ"

"ಲೀಲಾ! ಇದುವರೆಗೆ ನಡೆಯಿಸಿದ ಹಾಗಲ್ಲ. ಅದೇ ಬೇರೆ, ಇದೇ ಬೇರೆ........ನನ್ನ ಆಶೆ ತೀರಿತು. ನೀನು ಸಮಾಜಕ್ಕೆ ಹೆದರದೆ ಶ್ರೀಧರನನ್ನು ಮದುವೆಯಾಗಿ ಸುಖವಾಗಿರು. ನಾನು ನಿನ್ನಲ್ಲಿ ಮಾಡಿದ ಅಪರಾಧಕ್ಕೆ ನೀನು ನನ್ನನ್ನು ಈ ರೀತಿಯಾಗಿ ಕ್ಷಮಿಸಬೇಕು."

"ಹಾಗೆಲ್ಲ ಮಾತಾಡಬಾರದು."



ನಸುಕು ಹರಿಯುತಿತ್ತು.

"……ಶ್ರೀಧರಾ! ನಾನು ನಿನಗೆ ಇಷ್ಟೆಲ್ಲಾ ಅಪರಾಧವನ್ನು ಮಾಡಿದೆ. ನಿನ್ನ ಕೈಯ ತುತ್ತನ್ನು ಕಸಿದುಕೊಂಡೆ. ಇಂದು ಅದೇ ತುತ್ತನ್ನು ಬೀದಿಯಲ್ಲಿ ಬಿಸುಡುತ್ತಿದ್ದೇನೆ. ಆದರೆ ನೀನು ಅದನ್ನೆಲ್ಲಾ ಹಚ್ಚಿಕೊಳ್ಳದೆ ನಮ್ಮ ಪುರಾತನದ ಸ್ನೇಹವನ್ನು ನೆನೆದು ನನ್ನಲ್ಲಿಗೆ ಇಂದೂ ಬಂದು ಹೋಗುತ್ತಿರುವೆ. ಇನ್ನು ಲೀಲೆಗೆ ಯಾರೂ ಗತಿಯಿಲ್ಲ ಮೃತ್ಯುಸಮ್ಮುಖದಲ್ಲಿ ಕುಳಿತು ನಿನ್ನಿಂದ ಕೇಳಿಕೊಳ್ಳುತ್ತೇನೆ. ಲೀಲೆಯನ್ನು ನೀನು ಬಿಟ್ಟುಹಾಕಬೇಡ. ನೊಂದುತ್ತಿರುವ ಜೀವದ ಆಶೆಯನ್ನು ನೆರವೇರಿಸು……"

"ಈ ಸಮಯದಲ್ಲಿ ಈ ಹಳೆಯ ಪುರಾಣವನ್ನು ಹರಟಬೇಡ ನಾರಾಯಣ. ಹುಟ್ಟಿಸಿದ ದೇವನು ಹುಲ್ಲು ಮೇಯಿಸಲಾರನು."

"ಹರಟೆಯಲ್ಲ ಶ್ರೀಧರ ಇದು. ಎದೆಯ ಗೂಡನ್ನು ತೆರೆದು ಹೊರಗೆ ಹಾರುತ್ತಿರುವ ಪಕ್ಷಿಯ ಆರ್ತ ಕ್ರಂದನ. ಲೀಲೆಯನ್ನು ನಾನು ದಾರಿಯಲ್ಲಿ ಹಾಕಿದೆ. ಆಕೆಯ ರಕ್ಷಣೆಯ ಭಾರವು ನಿನ್ನದು. ಲೀಲಾ! ಕ್ಷಮಿಸು—"

ಹಕ್ಕಿ ಹಾರಿ ಹೋಯಿತು! ದೀಪವು ನಂದಿ ಹೋಯಿತು!

೨

"ಲೀಲಾ! ನನ್ನನ್ನು ಕಂಡರೆ ಹುಲಿಯನ್ನು ಕಂಡ ಚಿಗರಿಯಂತೆ ಹೆದರುವುದೇಕೆ? ನನ್ನಲ್ಲಿ ಅಷ್ಟು ಅವಿಶ್ವಾಸವೇ? ನನಗೇನು ಸಹೋದರಿಯರಿಲ್ಲವೇ? ನನ್ನಲ್ಲಿ ಮಾತನಾಡಲೂ ಭಯವೇ? ಇಷ್ಟು ದಿನಗಳಿಂದ ಇಲ್ಲಿಗೆ ಬರುತ್ತಿದ್ದೇನೆ. ಒಮ್ಮೆಯೂ ನನ್ನ ಕಣ್ಣಿಗೆ ಬಿದ್ದಿರಲಿಲ್ಲ. ನನ್ನ ಹೃದಯ ನಿನಗೆ ತಿಳಿಯದೇ? ನಿನ್ನ ಮದುವೆಯಾದ ಮೇಲೂ ನಾನು ಸೋದರ ಸ್ನೇಹದಿಂದ ನಿಮ್ಮಲ್ಲಿಗೆ ಬಂದು ಹೋಗುತ್ತಿಲ್ಲವೆ? ಶ್ರೀಧರನು ಹೆರವರ ಒಡವೆಯ ಮೇಲೆ ಕಣ್ಣಿಟ್ಟುದನ್ನು ಇಂದಿನ ವರೆಗೆ ನೀನು ಕೇಳಿರುವೆಯಾ?……"

"ನಾನು ನಿನಗೆ ಕೊಂಚವೂ ಹೆದರುವುದಿಲ್ಲ. ನಿನ್ನನ್ನು ಚೆನ್ನಾಗಿ ಬಲ್ಲೆ. ಆದರೆ ನನ್ನ ಮನಸ್ಸಿಗೆ ಹೆದರುತ್ತೇನೆ! ಹಾಳು ಸಮಾಜಕ್ಕೆ ಹೆದರುತ್ತೇನೆ!! ಇನ್ನೂ ಹೆಚ್ಚಾಗಿ ನನ್ನ ಚಿಕ್ಕಮ್ಮನಿಗೆ ಹೆದರುತ್ತೇನೆ!!! ನನ್ನ ಹೃದಯದಲ್ಲಿ ನಿನಗೆ ಮೊದಲು ಯಾವ ಸ್ಥಾನವಿತ್ತೋ, ಅದೇ ಈಗಲೂ ಇದೆ. ಆದರೆ ನನ್ನಂತಹ ಪಾಪಿಯು ಎಷ್ಟು ಹೆದರಿದರೂ ಕಡಿಮೆಯೇ."

"ನಿನ್ನ ಚಿಕ್ಕಮ್ಮನ ಬುದ್ಧಿ ನನಗೆ ಚೆನ್ನಾಗಿ ಗೊತ್ತು. ನಿನ್ನ ತಂದೆಯೂ 'ಲೀಲೆಯು ಬಂದಂದಿನಿಂದ ಮನೆಯಲ್ಲಿ ಶಾಂತಿಯಿಲ್ಲ. ಕಟುಕರ ಆವಾಸ ಸ್ಥಾನದಂತಿದೆ' ಎಂದು ಹೇಳುತ್ತಿರುವನು."

"ನನ್ನ ತಂದೆಯು ಸ್ನೇಹದ ರಾಶಿ. ಚಿಕ್ಕಮ್ಮನು ಮಾತ್ರ ಯಾವ ಜನ್ಮದ ಸೇಡು ತೀರಿಸಿಕೊಳ್ಳುವಳೋ ತಿಳಿಯದು. ಅನುದಿನವೂ ವಾಗ್ಬಾಣ ದಿಂದ ಚುಚ್ಚುತ್ತಿರುವಳು. ಮಾಡುವುದೇನು? ಒಂದು ಹಿಡಿ ಅನ್ನಕ್ಕಾಗಿ ಬಿದ್ದಿರಬೇಕು. ದೇವರು ಮಕ್ಕಳನ್ನು ಕೊಡದಿದ್ದುದು ಎಷ್ಟೋ ಮೇಲು. ಅದು ಬೇರೆ ಇದ್ದಿದ್ದರೆ ನಾನು ಅವುಗಳೊಂದಿಗೆ ಕೆರೆ ಬಾವಿಯ ಆಳ ನೋಡ ಬೇಕಾಗಿತ್ತು."

ಬಹು ಸಮಯದ ವರೆಗೆ ಹಟ್ಟಿಯ ನಾಲ್ಕು ಗೋಡೆಗಳ ನಡುವೆ ಬಂಧಿ ಸಲ್ಪಟ್ಟಿದ್ದ ದನವು ಬಂಧವಿಮುಕ್ತವಾದಾಗ ಯಾವ ವೇಗದಿಂದ ಹೊರಗೆ ನೆಗೆದು ಬರುವುದೋ ಅದೇ ವೇಗದಿಂದ ಚಿರಕಾಲ ಮಾತಿನ ದಾರಿಯನ್ನು ಕಾಣದಿದ್ದ ಹೃದಯದಲ್ಲಿನ ಹುದುಗಿದ ಬೇಗೆಯು ಮಾತಿನ ಮೇರೆಯನ್ನು ಮೀರಿ ಕಣ್ಣೀ ರಾಗಿ ಹರಿಯಿತು. ಶ್ರೀಧರನ ಹೃದಯದ ತಂತಿಯನ್ನು ಆ ದುಃಖವು ಮಿಡಿ ಯಿತು. ಅಂದಿನಿಂದಲೂ ಅವರು ಆಗಾಗ ತಮ್ಮ ಸುಖದುಃಖಗಳನ್ನು ಮಾತ ನಾಡಿಕೊಳ್ಳುತ್ತಿದ್ದರು.

* * * * * *

"........ಸುಬ್ಬಮ್ಮ, ನಾನು ಏನು ಹೇಳಲಿ? ಮುಂದೆ ನಮ್ಮ ಮರ್ಯಾದೆ ಉಳಿಯುವಂತಿಲ್ಲ. ಒಟ್ಟಿನ ಮೇಲೆ ಈಗೀಗ ಬಹಳ ಹೇಯವಾದ ವಿಚಾರಗಳು ನಡೆಯುತ್ತಿವೆ. ಯಾವ ಕೆಲಸವನ್ನೂ ಮಾಡುವುದಿಲ್ಲ. ಬೆಳಿಗ್ಗೆ ಎದ್ದರೆ ಶೃಂಗಾರಮಾಡಿಕೊಂಡು ಕೂತುಕೊಳ್ಳುವುದು. ಈ ಹಾಳು ಮುಂಡೆಗೆ ಇನ್ನು ಶೃಂಗಾರವೇಕಮ್ಮಾ! ನಮ್ಮ ಮನೆಯವರು ಕೂದಲು ತೆಗಿಸಬೇಕೆಂದು ಎಷ್ಟು ಹೇಳಿದರೂ ಕೇಳುವುದಿಲ್ಲ. ಕೂದಲಿಟ್ಟುಕೊಂಡು ಇನ್ನು ಯಾರೊಂದಿಗೆ ಮೆರೆಯಬೇಕೋ ಕಾಣೆ!"

"ಏನೋ ಚಿಕ್ಕ ಹುಡುಗಿ ಪಾಪ! ಇನ್ನೂ ಕೊಂಚ ದಿನ ಕೂದಲಿಟ್ಟು ಕೊಂಡಿರಲಿ. ನೀನೇಕೆ ಆ ಮಗುವಿನ ಕೂದಲಿಗೆ ಹೊಡೆದುಕೊಳ್ಳುತ್ತೀಯಾ! ಈಗಿನ ಕಾಲದಲ್ಲಿ ಮೂಗು ನೆಲಕ್ಕೆ ಮುಟ್ಟಸಿ ಕೊಳ್ಳುವವರು ಕೂಡ

ಕೂದಲಿಟ್ಟುಕೊಂಡು ಓಡಾಡುತ್ತಿರುವಾಗ ಇನ್ನು ಲೀಲೆಗೇನಮ್ಮಾ ಅವಸರ?"

"ಸುಮ್ಮನಿರಮ್ಮ! ಕಂಡಿದ್ದೇನೆ ಎಲ್ಲಾ!! ಕೂದಲು ತೆಗೆದು ಮುಡಿಯಾದರೆ ಬೇಯಿಸಬೇಕೆಂದು ಉಪಾಯ! ಅದು ಅಲ್ಲದೆ ವೈಯಾರ ಮಾಡಿಕೊಂಡು ಶ್ರೀಧರನ ಮುಂದೆ ತಿರುಗಾಡುವುದಕ್ಕಾಗುವುದಿಲ್ಲ..........ಎಂತಹ ನಾಚಿಕೆಗೇಡಪ್ಪಾ!"

"ಅದ್ಯಾರೆ ಶ್ರೀಧರ ಎನ್ನುವವನು?"

"ಅವನು ನಮ್ಮ ಮನೆಯವರಿಗೆ ಗೆಳೆಯನಂತೆ. ಒಳ್ಳೇ ಸೊಗಸಾದ ಗಂಡು. ಮುಂಚಿನಿಂದ ನಮ್ಮ ಮನೆಯವರೊಂದಿಗೆ ಬಂದು ಹೋಗುತ್ತಿದ್ದ. ಈಗಂತೂ ದಿನಾ ಬರೋದು, ಲೀಲೆಯೊಡನೆ ಚಕ್ಕಂದ ಮಾತನಾಡುತ್ತಾ ಕೂತುಕೊಳ್ಳೋದು. ಇನ್ನು ಇನ್ನೇನು ನಡಿಯಲಿಕ್ಕಿದೆಯೋ ಪರದೆಯೊಳಗೆ! ........ಅಂತೂ ಗೋಣಿಯೊಳಗಿನ ಇಲಿ ಹೊರಗೆ ಬರದೇ ಇರುತ್ತದೆಯೇ?........ ಒಟ್ಟಿನ ಮೇಲೆ ಮರ್ಯಾದೆ ಹೋಗೋ ಕಾಲ........"

ಒಳಗಿಂದ ಮಗು ಕೂಗಿತು. ಚಿಕ್ಕಮ್ಮ "ಈ ಮಕ್ಕಳ ಕಾಟದಿಂದ ಇರಸ್ಸಿಕೆಯಿಲ್ಲ. ನನ್ನ ಜೀವ ತಿಂತಾವೆ...." ಎಂದು ಗೊಣಗುಟ್ಟಿ ಒಳಗೆ ಹೋದಳು.

"ಈಕೆಗೆ ಮುಂಚೆ ಶ್ರೀಧರ ಬಂದಷ್ಟೂ ಸಾಲುತ್ತಿರಲಿಲ್ಲ. ಈಗ ಹೊಟ್ಟೆಕಿಚ್ಚು-ಮರ್ಯಾದೆ" ಎಂದು ಸುಬ್ಬಮ್ಮ ಅರೆದನಿಯಲ್ಲಿ ಹೇಳುತ್ತ ನಡೆದಳು.

೩

"........ಲೀಲಾ! ಅಂತೂ ಜನರು ಏನೇನೋ ಆಡಿಕೊಳ್ಳುತ್ತಿದ್ದಾರೆ. ಜನರ ಕಣ್ಣಿಗೆ ಕಸವಾಗಿ ನಾವು ನಮ್ಮ ಜೀವನವನ್ನು ಸಾಗಿಸಲಾರೆವು. ಜನರ ಕಣ್ಣುಗಳು ಹೃದಯವನ್ನು ಹೊಗಲಾರವು. ಹೊಗಲು ಇಚ್ಛಿಸುವುದೂ ಇಲ್ಲ. ನಾಲಗೆಯು ಮಾತ್ರ ಎಲ್ಲವನ್ನೂ ಅರಿತಂತೆ ಗಳಹುವುದು........ಒಂದು ಕಣ್ಣಿನವರ ರಾಜ್ಯದಲ್ಲಿ ಎರಡು ಕಣ್ಣುಳ್ಳವರಿಗೆ ಎಡೆಯಿಲ್ಲ. ನಾವು ಹೀಗೆ ಬಂಧು ಪ್ರೇಮದಿಂದಿರುವುದು ಸಮಾಜದ ಭೂತಗನ್ನಡಿಯಲ್ಲಿ ವಿಸ್ವರೂಪವನ್ನು ಪಡೆದಿರುವುದು. ಸಮಾಜದ ಸಂತೋಷಕ್ಕಾಗಿ ಇಂದು ನಾವು ಬೀಳ್ಕೊಳ್ಳೋಣ. ಇನ್ನಾದರೂ ಸಮಾಜವು ತನ್ನ ದೃಷ್ಟಿಯಿಂದ ನಿಷ್ಕಳಂಕವಾಗಿರಲಿ."

ಮೌನವು ಸಮ್ಮತಿಯನ್ನೋ ಅಸಮ್ಮತಿಯನ್ನೋ ಸೂಚಿಸಿತು. ಬಿಸಿಯೇರಿದ ಮೋಡವು ಮಳೆ ಸುರಿಸಲಾರದೆ ವಿಹ್ವಲವಾಯಿತು.

ಲೀಲೆಯಿಂದ ಬೀಳ್ಕೊಂಡು ಭಾರವಾದ ಹೃದಯದ ಹೊರೆಯನ್ನು ಹೊತ್ತು ಶ್ರೀಧರನು ಜಗುಲಿಯಿಂದ ಹಾದು ಹೊರಟು ಹೋಗುತ್ತಿದ್ದನು. ಎದುರಿಗೆ ಲೀಲೆಯ ತಂದೆ ಸಿಕ್ಕಿದರು. ಆದರಾತನು ಅತ್ತಕಡೆ ಲಕ್ಷ್ಯವೀಯದೆ ನಡೆದುಹೋಗುತ್ತಿದ್ದ. ಅವರೇ ಕರೆದರು:

"ಶ್ರೀಧರಾ!"

ಶ್ರೀಧರನು ಕೊಂಚ ಸಾವರಿಸಿಕೊಂಡನು.

"ನಮಸ್ಕಾರ. ರಾಯರೆ!...."

ಅತ್ತಿತ್ತ ಯಾರೂ ಇರಲಿಲ್ಲ.

"ಶ್ರೀಧರಾ!" ರಾಯರು ಒಳದನಿಯಿಂದ ತೊಡಗಿದರು: "ಇನ್ನು ನೀನು ನಮ್ಮಲ್ಲಿಗೆ ಈತೆರನಾಗಿ ಬಂದು ಲೀಲೆಯೊಡನೆ ಮಾತನಾಡಬಾರದು. ಜನರು ಏನೇನೋ ಅಂದುಕೊಳ್ಳುತ್ತಿದ್ದಾರೆ........ನೀವೇನೋ ಪವಿತ್ರಭಾವದಿಂದಲೇ ಬೆರೆಯುತ್ತಿರಬಹುದು. ಆದರೆ ನೋಡುವವರಿಗೆ ಹೇಗೋ ಹೇಗೋ ಕಾಣುತ್ತದೆ........"

"ಅಹುದು ರಾಯರೇ........ಅದಕ್ಕಾಗಿಯೇ ನಾನು ಈಗ ಲೀಲೆಯಿಂದ ಕೊನೆಯ ಬಾರಿ ಬೀಳ್ಕೊಂಡು ಬಂದಿದ್ದೇನೆ....ಇನ್ನಾದರೂ ಸಮಾಜವು ನಿಷ್ಕಲಂಕವಾಗಲಿ. ವಿಧವೆಯ ಸ್ನೇಹವಂಚಿತವಾದ ಹೃದಯವು ಉರಿಯುತ್ತಿರುವುದರಿಂದಲೆ ಸಮಾಜದ ಚಳಿಯು ದೂರವಾಗುವುದಾದರೆ, ನನ್ನ ಅಡ್ಡಿಯಿಲ್ಲ...... ಈಗ ಹೆಚ್ಚಿಗೆ ಮಾತನಾಡಲು ಮನಸ್ಸೊಪ್ಪುವುದಿಲ್ಲ........ಹೋಗುತ್ತೇನೆ...."

* * * * * *

"ಲೀಲೆ!....ಇಷ್ಟು ದಿನ ನಾನು ಸುಮ್ಮನಿದ್ದೆ....ಇನ್ನು ಸಹಿಸಲಾಗುವುದಿಲ್ಲ. ಸಮಾಜದ ಕಣ್ಣಿಗೆ ನಿನ್ನ ಕೂದಲು ಕಸವಾಗಿದೆ....ಅದರಿಂದ ಇನ್ನು ವಿಳಂಬಮಾಡದೆ .......ಏನು ಹೇಳಲಿ?........ಸಮಾಜ......"ರಾಯರ ಕಂಠವು ತುಂಬಿ ಬಂತು.

ಮೌನವು ಸಮ್ಮತಿ ಸೂಚಕವೆಂದು ರಾಯರು ಹೊರಟುಹೋದರು.

* * * * * *

ಆ ದಿನ ಇರುಳು ತುಸು ತಡವಾಗಿಯೇ ಬಂತೇನೊ! ಲೀಲೆಯ ಹೃದಯದ ಬೆಂಕಿಯು ಆಕಾಶವನ್ನು ಮುಟ್ಟಿ ಉರಿಯುತ್ತಿತ್ತು. ಅದಕ್ಕೆ ಸಾಮಾನ್ಯವಾದ

ಜಲಧಾರೆಯು ಸಾಲದು....... ಅದೇ ಮಹಾ ಜಲಾಶಯವನ್ನು ಆಶ್ರಯಿಸಿದ ಳೇನೋ! ಜ್ವಾಲೆಯು ಅಲ್ಲಿ ಶಾಂತವಾಯಿತೇನೋ!

* * * * * *

"....ಪಾಪ!....ಒಂದು ದಿನ ಸುಖ ಕಂಡಿರಲಿಲ್ಲ. ಆಕೆಯ ಜೀವ.... ಅಂತೂ ತಣ್ಣಗಾಯಿತು...."

"........ಎಲ್ಲಕ್ಕೂ ಅವಳ ಚಿಕ್ಕಮ್ಮನಂತೆ ಕಾರಣ........ಮತ್ಸರದಿಂದ ಏನೇನೋ ಸುದ್ದಿ ಹುಟ್ಟಿಸಿದಳಂತೆ....ಶ್ರೀಧರನಿಗೂ ಅವಳಿಗೂ ಸಂಬಂಧ ಕಲ್ಪಿಸಿ. ಪಾಪ....ಜೀವ ಬೇಡಾಯ್ತು....ಹುಡುಗೀಗೆ!—"

"ಶ್ರೀಧರನ ಮೇಲೆ ಆಕೆಯ ಚಿಕ್ಕಮ್ಮನ ಕಣ್ಣಿತ್ತಂತೆ!—ಸಿಗವಲ್ಲನಲ್ಲ ಅಂತ ಹೀಗೆಲ್ಲ ಮಾಡಿ ಲೀಲೇನ ತೀರಿಸಿಬಿಟ್ಟರೆ ತನ್ನ ಕೆಲಸ ಆಗುತ್ತದೆಂತ ಎಣಿಸಿದಳು....ಶ್ರೀಧರ ಇನ್ನು ಆಕೇನೇ ಸೇರ್‍ತಾನೋ ನೋಡಬೇಕು....ಒಟ್ಟಿನ ಮೇಲೆ ಕಷ್ಟ ನೋಡು...."

ಒಂದು ಜೀವವನ್ನುಂಡು ಸಮಾಜದ ಬೆಂಕಿ ಇನ್ನೊಂದರ ಕಡೆಗೆ ನಾಲಗೆಯನ್ನು ಚಾಚಲು ತೊಡಗಿತ್ತು.

---



## ಶ್ರೀ ಪಿ. ವೆಂಕಟರಮಣಾಚಾರ್ಯರು, ಉಡುಪಿ

ಇವರು ಕವಿಗಳು, ಕತೆಗಾರರು ಮತ್ತು ವಿಮರ್ಶಕರು. ಇವರ ಕವಿತೆಗಳಲ್ಲಿ ಕೆಲವು 'ಜಯ ಕರ್ನಾಟಕ' ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕತೆಗಳ ಬಗೆಗೆ ಇವರದು ಇದು ಮೊದಲನೆಯ ಪ್ರಯತ್ನ. ಆದರಿಂದ ಸಾರ್ವತ್ರಿಕವಾದ ಅಭಿಪ್ರಾಯವನ್ನು ಸೂಚಿಸುವುದು ಅಸಾಧ್ಯವಾಗಿದೆ. ಶೈಲಿಯು ಕವಿತಾಪೂರ್ಣವಾಗಿದೆ. ಕತೆಯಲ್ಲಿ ಬಿಗುವು ಇದೆ. ವ್ಯಕ್ತಿಗಳ ಮನೋಧರ್ಮ ಮತ್ತು ಕತೆಯಿಂದಾಗತಕ್ಕ ಪರಿಣಾಮ ಇವುಗಳ ಮೇಲೆ ಇವರು ಹೆಚ್ಚು ಲಕ್ಷ್ಯವನ್ನು ಪೂರಯಿಸುತ್ತಾರೆ.

# ಕರುಳಿನ ಮರುಳು

ಪಿ. ವೆಂಕಟರಮಣಾಚಾರ್ಯರು

..........................................

"ಅಮ್ಮಾ...."

"....ಏಕೆ ಮಗು?....ಇನ್ನೂ ನಿದ್ದೆ ಬಂದಿಲ್ಲವೆ?...."

"....ಇಲ್ಲ ಅಮ್ಮ...."

ತಿಂಗಳಿರುಳಿನ ಪ್ರಶಾಂತವಾದ ಸರೋವರದಲ್ಲಿ ಕಿರಿದಾದೊಂದು ಕಲ್ಲನ್ನೆಸೆದ ಹಾಗೆ ನೀರವದ ಆ ರಾತ್ರಿಯಲ್ಲಿ ಆ ಮಾತುಗಳು ತರಂಗಿತವಾದುವು.

ಕೊಂಚ ಹೊತ್ತು ಮೌನ............

"....ಅಮ್ಮಾ!"

"ಏಕೆ ಮಗು?"

"ನೀನು ಅಳುತ್ತಿರುವುದೇಕಮ್ಮ?"

"....ಎಲ್ಲಿ ಮಗು?"

"ಆಗಿಂದ ನೀನು ಮೌನವಾಗಿ ಅಳುತ್ತಿರುವೆಯಲ್ಲ?"

"ಇಲ್ಲ ಮಗು!...."

"ನೀನು ಸುಳ್ಳೆ ಹೇಳುತ್ತಿ. ಆಗಿಂದ ನನಗೆ ನಿದ್ದೆ ಬಂದಿದೆಯೆಂದು ತಿಳಿದು ಅಳುತ್ತಿದ್ದಿ........ಏಕಮ್ಮಾ ಅಳುವುದು....?"

ಕಟ್ಟು ಹರಿದು ಹೋಯಿತು. ಕಣ್ಣೀರು ಕೋಡಿ ಹರಿಯಿತು. ಕರುಳಿನ ಚೂರನ್ನು ಒಡಲಿಗೆ ಒತ್ತಿಕೊಂಡಳು.

ಏಕೆಂದರಿಯದೆ ಹುಡುಗನೂ ಅತ್ತನು.....ಕಾಳಿಂದಿಯ ಪ್ರವಾಹಕ್ಕೆ ಕೈತೋಡೊಂದು ಬಂದು ಸೇರಿದ ಹಾಗಾಯಿತು.

...................................

"....ಹೀಗೇಕೆ ನಿದ್ದೆ ಮಾಡದೆ ಅಳುತ್ತಿರುವುದಮ್ಮ....ನನ್ನ ಕೂಡೆ ಹೇಳಲಾಗದೆ?"

"ಯಾಕೂ ಇಲ್ಲ ಮಗು!...."

"ಹೇಳುವುದಿಲ್ಲವೆ ಅಮ್ಮ....?"

"ಬೇಡ ಮಗು! ನಿನಗೆ ತಿಳಿಯದು. ಈ ಮೊಗ್ಗಿನ ಬಳಿ ಸುಮ್ಮನೆ ಉರಿಯನ್ನೇಕೆ ಉರಿಸಲಿ?"

ಹುಡುಗನಿಗೆ ಅರ್ಥವಾಗಲಿಲ್ಲ...........

"ಯಾಕೆ ಅಳುತ್ತಿರುವೆ, ಹೇಳಮ್ಮ !"

"ಯಾಕೆನ್ನಲಿ ಮಗು?...."

ಗುಡುಗಿಲ್ಲ, ಮಿಂಚಿಲ್ಲ, ಮೋಡವು ಧಾರಾಕಾರವಾಗಿ ಮಳೆ ಸುರಿಸಿತು. ಒಂದೊಂದು ಹನಿಗೂ ಆ ಹುಡುಗನ ಎದೆಯ ಬೇಗುದಿ ಹೆಚ್ಚುತ್ತಿತ್ತು.

"ನನ್ನ ಕೂಡೆ ಹೇಳಬಾರದೆ ಅಮ್ಮ...?"

"........ಈ ಬಡತನದಲ್ಲಿ ನಮ್ಮನ್ನು ಬಿಟ್ಟು ನಿನ್ನ ಅಪ್ಪ ಹೋದರಲ್ಲ ಎಂದು ಅಳುತ್ತಿದ್ದೇನೆ, ಅಷ್ಟೆ....ನನ್ನ ಕರುಳಿನ ಕೂಸಿಗೆ ಒಂದು ಹಿಡಿ ಅನ್ನ ವನ್ನು ಇಕ್ಕಬೇಕಾದರೆ ನನ್ನ ಕೂಡೆ ಅನುಕೂಲವಿಲ್ಲ...."

"ಇಲ್ಲ ಅಮ್ಮ....ನನಗೆ ಅರೆಹೊಟ್ಟೆಯಾದದ್ದಿಲ್ಲ....ನಾನು ನಿನ್ನನ್ನು ಕಾಡಿದ್ದುಂಟೆ?...."

"ಇಲ್ಲ ಮಗು, ನೀನು ಕಾಡಿದ್ದಿಲ್ಲ, ನಿನ್ನಂಥ ಮಗುವನ್ನು ಹೊಟ್ಟೆ ತುಂಬ ಉಣಿಸುವ ಭಾಗ್ಯವಿಲ್ಲದೆ ಹೋಯಿತಲ್ಲ....ನಿನ್ನ ಅಪ್ಪ ಹತ್ತಾರು ಸಾವಿರ ಸಂಪಾದಿಸ್ಸಿದ್ದರು....ನನ್ನ ಭಾಗ್ಯಕ್ಕೆ ಒಂದು ಚಿಕ್ಕಾಸು ಬಿಟ್ಟು ಹೋಗಲಿಲ್ಲ...."

"ಅಷ್ಟೆಲ್ಲ ಹಣವನ್ನೇನು ಮಾಡಿದನಮ್ಮ....?"

"ಏನು ಮಾಡಿದನೆನ್ನಲಿ?....ಎಲ್ಲ ಆ ವಿನೋದಾಸಾನಿಯು ದೋಚಿ ಕೊಂಡಳು....ಹೀಗೆ ನಮ್ಮನ್ನು ಗತಿಗೆಡಿಸಿ ಹೋದರು....ಸತ್ತವರಿಗೇನು ಇದ್ದ ವರ ಸುಖದುಃಖ?"

"ಎಲ್ಲ ಹಣವನ್ನು ಆಕೆ ಕದ್ದುಕೊಂಡು ಹೋದಳೆ?...."

"ಇಲ್ಲ ಮಗು....ಕದ್ದುಕೊಂಡು ಹೋಗಿದ್ದರೆ ನನಗೆ ದುಃಖವಿರಲಿಲ್ಲ.... ನಿನ್ನಪ್ಪನೇ ಎಲ್ಲವನ್ನವಳಿಗೆ ಕೊಟ್ಟರು..."

"ಅವಳಿಗೆ ಕೊಟ್ಟದ್ದು ಯಾಕಮ್ಮಾ....?"

"ಅಯ್ಯೋ! ಮಗು........ಯಾಕೆನ್ನಲಿ?....ಅವಳು ಸೂಳೆ...ಅವಳಿಗೆ ಮೋಹಿಸಿ ನಿನ್ನಪ್ಪ ಎಲ್ಲವನ್ನು ಅವಳಿಗೆ ಕೊಟ್ಟರು....ನಿನ್ನಪ್ಪನಿಗೆ ನಾನೊಬ್ಬಳೆ ಸಾಲದೆ ಸೂಳೆಯನ್ನಿಟ್ಟುಕೊಂಡಿದ್ದರು."

ಹುಡುಗನಿಗೆ ಅರ್ಥವಾಗಲಿಲ್ಲ...ಆದರೆ ಆಕೆಯ ಕರುಳಲ್ಲಿ ಏಳುತ್ತಿದ್ದ ದುಃಖದ ಸ್ವರಗಳು ಆತನ ಕರುಳಲ್ಲಿ ಪ್ರತಿಧ್ವನಿತವಾಗುತ್ತಿದ್ದುವು. ಆದರೆ ಆ ಸ್ವರವು ಅವ್ಯಕ್ತ—ಮುಚ್ಚಂಜೆಯ ಹಾಗೆ ಮಸುಕು ಮಸುಕು....ತಿರುಗಿ ವಿಷಾದಮಯ!

....................................

"ಮಗು..." ಕರುಳು ಮೃದುವಾಗಿ ಝುಂಕರಿಸಿತು.

"ಯಾಕೆ ಅಮ್ಮ?" ಕರುಳಿನ ತುಂಡು ಪ್ರತಿ ಝುಂಕರಿಸಿತು.

"ನೀನು ನಿನ್ನಪ್ಪನ ಹಾಗೆ ಸೂಳೆಗಾರಿಕೆ ಮಾಡಿ...ಎಲ್ಲಿಯಾದರೂ ನಿನ್ನ ಹೆಂಡತಿಯನ್ನು ದುಃಖಗೊಳಿಸಬೇಡ..." ಕರುಳಿನ ಮರುಳು ಹಿಂದು ಮುಂದೆ ನೋಡದೆ ನುಡಿಸಿತು.

"ಇಲ್ಲಮ್ಮ."

"ಹೆಂಡತಿಯನ್ನು ಬಿಟ್ಟು ಬೇರೊಬ್ಬಳ ಸಂಗ ಮಾಡೆನೆಂದು ನನ್ನಾಣೆ ಹಾಕಿ ನುಡಿ..."

"ನಿನ್ನಾಣೆಯಾಗಿ ನಾನು ಬೇರೊಬ್ಬಳ ಸಂಗ ಮಾಡೆನು!"

ಹುಚ್ಚು ಹೃದಯವು ಅರಿಯದ ಹುಡುಗನಿಂದ ಪ್ರತಿಜ್ಞೆ ಮಾಡಿಸಿತು.

* * * * * *

ಹನ್ನೆರಡು ಮಧುಮಾಸಗಳು ಆಗಸವನ್ನು ತೊಳೆದವು. ಮಾತೆಯ ಮೋಹದ ಮಡಿಲಲ್ಲಿ ಪವಡಿಸಿ ಆಕೆಯ ಕಣ್ಣೀರ ಹೊನಲ ತಡಿಯಲ್ಲಿ ಪ್ರತಿಜ್ಞೆ ಮಾಡಿದ ಆ ಹುಡುಗ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ. ಅವನ ಬುದ್ಧಿಶಕ್ತಿಯು ಅಧ್ಯಾಪಕರೆಲ್ಲರ ಮನವನ್ನು ಸೆಳೆದು ಆತನನ್ನು ಕಾಲೇಜಿನ ಮೆಟ್ಟಲೇರಿಸಿದ್ದಿತು. ಕಾಲೇಜಿನ ವ್ಯಾಸಂಗದಿಂದ ತಾಯಿಯ ಸ್ನೇಹಮಯವಾದ ಸಹವಾಸಕ್ಕೆ ಚಿರಕಾಲ ತೊಡಕುಂಟಾಯಿತು.

* * * * * *

ಆತ ಕಿಟಕಿಯ ಬಾಗಿಲನ್ನು ತೆರೆದ.........

ನಾಲ್ಕು ಕಣ್ಣುಗಳು ಒಂದೆಡೆ ಸೇರಿದುವು.

ದೂರದಲ್ಲಿ ಪ್ರಭಾತ ದಿಗಂತದಲ್ಲಿ ಅರುಣರಾಗವು ಕಳೆಯೇರುತ್ತಿತ್ತು—ಅವರ ಕಪೋಲಗಳಲ್ಲಿ ಅದೇ ರಾಗವು ಕ್ಷಣಕಾಲ ಪ್ರತಿಬಿಂಬಿತವಾದಂತೆ ತೋರಿತು. ಎರಡೂ ಮೊಗಗಳು ಜೋತುವು.........

"ಸರಳಾ!...ಏ ಸರಳಾ!"

"ಬಂದೆನಮ್ಮ .."

ಅವನು ತಲೆಯೆತ್ತಿ ನೋಡಿದ: ಆಕೆಯ ಮೂರ್ತಿಯು ತಿರುತಿರುಗಿ ನೋಡುತ್ತ ತಾಯ ಕಡೆಗೆ ಹೊರಟುಹೋಗುತ್ತಿತ್ತು

* * * * * *

ಅಮೃತಮಯವಾದ ಬೆಳ್ದಿಂಗಳು ಶ್ಯಾಮಲ ಗಗನದಲ್ಲಿ ಹಿಡಿಸಲಾರದೆ ಹೊರ ಸೂಸುತ್ತಿತ್ತು. ಆ ಹೂದೋಟದಲ್ಲಿ ವಿವಿಧ ಕುಸುಮಗಳರಳಿ ನಳನಳಿಸುತ್ತಿದ್ದುವು. ಮಾರುತನ ಮೃದುಲ ಸ್ಪರ್ಶದಿಂದ ತರು-ಲತೆಗಳು ದರವಿಹ್ವಲವಾಗಿದ್ದುವು ಅದೇ ಉದ್ಯಾನವ ಮಾಮರದ ನೆಳಲಲ್ಲಿ ಅಪ್ಪಿನ ಬಿಗಿಯಲ್ಲಿ ಮೈಮರೆದ ವ್ಯಕ್ತಿಗಳಾರು ..?

....ಪ್ರತಿಜ್ಞೆಯಾಗಿ ಹನ್ನೆರಡು ವರುಷಗಳು ಕಳೆದು ಹೋಗಿದ್ದುವು!....

* * * * * *

"...ಪರೀಕ್ಷೆಯಾದ ಮೇಲೂ ಒಂದು ದಿನ ಸುಮ್ಮನೆ ನಾನೇಕೆ ಇಲ್ಲಿ ಉಳಿದುಕೊಂಡೆ....ಹಾಸ್ಟೆಲಲ್ಲಿ ವ್ಯಾಸಂಗಕ್ಕೆ ಅನನುಕೂಲವೆಂದಲ್ಲ ಈ 'ಲಾಜಿ' ನಲ್ಲಿ ಉಳಿದುಕೊಂಡುದು...ಇಲ್ಲಿ ಹೊಸ ವ್ಯಾಸಂಗವಾಗುವುದೆಂದು ಯಾರಿಗೆ ಗೊತ್ತು...ಹೈಸ್ಕೂಲಿಗೆ ಸೇರಿದಂದಿನಿಂದ ಎಷ್ಟೊಂದು ಬಾರಿ ಹೃದಯವನ್ನು ಮಿದಿದು ಇಂತಹ ಸಂದರ್ಭಗಳಿಂದ ಪಾರಾಗಿದ್ದೆ!........ಆದರೆ ಹದಿಮೂರು ವರುಷಗಳ ವರೆಗೆ ಮಾಡಿದ ಸಾಧನೆಯು—ಅಯ್ಯೋ ದುರ್ಬಲ ಹೃದಯವೆ!.... ಅಂದು ಮಾತೆಯ ಕಣ್ಣೀರಿನ........ಬಿಸುಸುಯ್ಲಿನ ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ....ಈ ಮೋಹನ ಮೂರ್ತಿಯು...ಈ ವಸಂತವು...ಅದನ್ನು ಸೂರೆಗೊಂಡವಲ್ಲ!....ಈ ಒಂದು ದಿನ ಹೃದಯವನ್ನು ಮಿದಿದಿದ್ದರೆ....?

....ಅಂದು ಬೆಳಗ್ಗೆ ಕಿಟಕಿಯನ್ನು ತೆರೆದಾಗ....ಹೂಕೊಯ್ಯಲು ಬಂದ ಆಕೆಯ ದರ್ಶನವಾಯಿತು........ಹೃದಯವನ್ನು ಮಿದಿಯುವುದು ಆಗಲೇ ನನಗೆ ದುಸ್ಸಹವಾಯಿತು...ಆದರೆ...ಯಾವ ಪಾಪವು ನನ್ನನ್ನು ಆ ಕಡೆ ಎಳೆಯಿತೊ!...ಒಂದೇ ಒಂದು ತಿಂಗಳೊಳಗೆ...ಮಾತೆಯ ಕಣ್ಣೀರಿನ, ಬಿಸುಸುಯ್ಲಿನ, ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ...ಒಂದು ನಿಮಿಷದ ಸುಖಕ್ಕೆ... ಎರವಾಯಿತು......" ಬಾಹು ಬಂಧನವನ್ನು ಬಿಡಿಸಿಕೊಂಡು ತನ್ನ ಕೊಟ್ಟಡಿಯತ್ತ ತೆರಳುವಾಗ ಈ ಮೋಡಗಳು ಆತನ ಮನಸ್ಸನ್ನು ಕವಿದಿದ್ದು ವು.

* * * * * *

ಮಾತೆಯ ಸಮ್ಮುಖದಲ್ಲಿ ತಲೆವಾಗಿ ನಿಂತಿದ್ದಾನೆ ಆತ:

"...........ಹನ್ನೆರಡು ವರುಷವಾಯಿತಮ್ಮ...ನಿನ್ನ ಸಂತಪ್ತವಾದ ಉಡಿಯಲ್ಲಿ ಮುಖವನ್ನಿಟ್ಟು ಪ್ರತಿಜ್ಞೆಮಾಡಿ...ಇಂದಿನ ವರೆಗೆ ಆ ಪ್ರತಿಜ್ಞೆಯನ್ನು ಕಾದುಕೊಂಡು ಬಂದೆ....ಅಂದಿನ ಆ ಎಂಟನೆ ವರುಷದ ಪ್ರತಿಜ್ಞೆಯ ಸಾಕ್ಷಿಯನ್ನು ಯಾವ ನನ್ನ ಹೃದಯವು ಹೇಳುತ್ತಿದೆಯೋ, ಅದೇ ಹೃದಯವಿಂದು....ಅದರ ಭಂಗದ ಸಾಕ್ಷಿಯನ್ನು ಹೇಳುತ್ತಿದೆ—ಹದಿಮೂರು ವರುಷಗಳ ಮೇಲೆ....ಮಾತೆಯ ಕಣ್ಣೀರ ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆಯನ್ನು ಕಾದುಕೊಳ್ಳಲಾರದೆ ಹೋದೆ........"

ಆತನ ಕಣ್ಣಲ್ಲಿ ನೀರು ತುಂಬಿತು........ಹೃದಯವು ರುದ್ಧವಾಯಿತು. ತರಂಗಗಳು ಒಂದೊಂದಾಗಿ ಬಂದು ದಡಕ್ಕೆ ಹೊಡೆಯುತ್ತಿದ್ದವು.

ಶಾರದ ಗಗನದಂತೆ ಶುಭ್ರವಾಗಿ ನಿಷ್ಕಲಂಕವಾಗಿದ್ದ ಹೃದಯದಿಂದ ಅರಿಯದೆ ಪ್ರತಿಜ್ಞೆಯನ್ನು ಮಾಡಿದ್ದ ಎಂಟು ವರುಷದ ಹುಡುಗನ ಆ ಮುಖವನ್ನು ಯಾವ ಸ್ನೇಹದಿಂದ ತನ್ನ ಉರಕ್ಕೆ ಒತ್ತಿಕೊಂಡು ಕಣ್ಣೀರು ಸುರಿಸಿದ್ದಳೋ, ಹನ್ನೆರಡು ವರುಷಗಳ ಮೇಲೆ ಕಲಂಕಿತವಾದ ಹೃದಯದ ಭಾರವನ್ನು ಆಕೆಯ ಮುಂದೆ ಇಳಿಸಿ ಕಣ್ಣೀರು ತುಂಬಿ ನಿಂತಿದ್ದ ಇಪ್ಪತ್ತು ವರ್ಷದ ಮಗನ ಅದೇ ಮುಖವನ್ನು....ಅದೇ ಕ್ಷಮಾಮಯವಾದ ಸ್ನೇಹದಿಂದ ಬರಸೆಳೆದು ಹೃದಯಕ್ಕೆ ಆತುಕೊಂಡು ಕಣ್ಣೀರು ಸುರಿಸಿದಳು ಆ ಮಾತೆ.

ಮಾತೆಯ ಸ್ನೇಹಮಯವಾದ ಹೃದಯವು ಯಾವುದನ್ನು ತಾನೇ ಕ್ಷಮಿಸದಿರುವುದು?

ಬೀಸಿದ ಗಾಳಿಯ ತೀಟಕ್ಕೆ ದಡಕ್ಕೆ ಹೋಗಿ ಬಿದ್ದ ತೆರೆಯನ್ನು ಸಮುದ್ರವು ತನ್ನೊಳಗೆ ಬರಮಾಡಿಕೊಳ್ಳದೇನು ಮಾಡಬಲ್ಲುದು?

---



**ಶ್ರೀಮತಿ ಪಿ. ಭಾರತಿಬಾಯಿ ಪಣಿಯಾಡಿಯವರು, ಉಡುಪಿ**

ಇವರು ಶ್ರೀಮತಿ ಪಿ. ಮಂದಾಕಿನಿ ಬಾಯಿಯವರ ಸಹೋದರಿ. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ತೀರಾ ಹೊಸಬರು. ಆದರೆ ಗೂಢ ನಾಮದಿಂದ ಕೆಲವು ಕತೆಗಳನ್ನು ಬರೆದಿದ್ದಾರೆ. ಈ ಕತೆಯನ್ನು ಓದಿ ನೋಡಿದರೆ ಇವರು ಸಾಹಿತ್ಯದ ರೀತಿ, ಮರ್ಯಾದೆಗಳನ್ನು ಮನನ ಮಾಡಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಈ ಕಥೆಯನ್ನು ಬರೆದ ರೀತಿಯು ಕನ್ನಡಕ್ಕೆ ನವೀನ ವಾಗಿದೆ. ಇವರಿಂದ ಇನ್ನೂ ಉತ್ತಮವಾದ ಕತೆಗಳನ್ನು ನಿರೀಕ್ಷಿಸಬಹುದಾಗಿದೆ.

## ಹುಟ್ಟು ಕಟ್ಟೇ

ಪಿ. ಭಾರತೀ ಬಾಯಿಯವರು

### ಪ್ರಕಟಣೆ.

ಧರ್ಮೋದ್ಧಾರಕ ಸಂಘ. ಪ್ರ. ನಂ. ೫.

ಈ ದಿನ ಇಲ್ಲಿಯ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಹೊರಪೌಳಿಯಲ್ಲಿ ಧರ್ಮವೀರರಾದ ಶ್ರೀ. ಗೋಪೀನಾಥಶರ್ಮರು ಅಸ್ಪೃಶ್ಯರೊಡನೆ ಉಂಡ ತಮ್ಮ ಮಗನನ್ನು ಕರ್ತವ್ಯಪಾಲನೆಗಾಗಿ ಮನೆಯಿಂದ ಹೊರಡಿಸಿದ ಬಗ್ಗೆ ಧರ್ಮ ಪ್ರೇಮಿಗಳ ಪರನಾಗಿ ಅವರಿಗೆ ಧನ್ಯವಾದ ಕೊಡುವುದಕ್ಕಾಗಿ ಸಾರ್ವಜನಿಕ ಸಭೆ ಜರಗಲಿರುವುದು. ಪಂಡಿತವರ್ಯ ಮಾಧವಾಚಾರ್ಯರು ಅಧ್ಯಕ್ಷರಾಗ ಲೊಪ್ಪಿರುವರು.

ಉಡುಪಿ,<br>3-9-1932. ಪ್ರಧಾನಮಂತ್ರೀ,<br>ಧರ್ಮೋದ್ಧಾರಕ ಸಂಘ.

### ಪ್ರಜಾಬಂಧು

2-11-'32

ಉಡುಪಿ:—ಇಲ್ಲಿಯ ಸನಾತನಿಗಳ ನೇತೃಗಳಾದ ಮಾಧವಾಚಾರ್ಯರ ಮೇಲೆ ಸ್ಥಳೀಯ ಕೋರ್ಟಿನಲ್ಲಿ, ಮೊದಲು ಅಸ್ಪೃಶ್ಯಜಾತಿಯವಳಾಗಿದ್ದು ಈಗ ವೇಶ್ಯಾವೃತ್ತಿಯಲ್ಲಿರುವ ದುರ್ಗಾಬಾಯಿಯು ಒಂದು ವಿಚಿತ್ರ ದಾವೆ ಹೂಡಿದ್ದಾಳೆ. ತನಗೆ ಇತ್ತೀಚೆಗೆ ಹುಟ್ಟಿದ ಹೆಣ್ಣು ಮಗುವೊಂದು ಶ್ರೀ. ಆಚಾರ್ಯರಿಂದಾದುದೆಂದೂ ಆ ಮೇಲೆ ಅವರು ತನ್ನನ್ನು ತ್ಯಜಿಸಿ ಬೇರೊಬ್ಬಳನ್ನು ಹಿಡಿದುದರಿಂದ ತನಗೆ ಅವರು ರೂ. 25ರ ಮಾಸಿಕ ವೇತನವನ್ನು ತೆರಬೇಕೆಂದೂ ಆಕೆಯ ವಾದ.

### ಪ್ರಜಾಬಂಧು

4—8—'33

ಉಡುಪಿ:—ಕೆಲವು ತಿಂಗಳುಗಳ ಹಿಂದೆ ಶ್ರೀ. ಮಾಧವಾಚಾರ್ಯರ ಮೇಲೆ ದುರ್ಗಾಬಾಯಿಯೆಂಬವಳು ಹೂಡಿದ ಪರಿಹಾರದ್ರವ್ಯದ ದಾವೆಯು ಆಚಾರ್ಯರಿಗೆ ವಿರುದ್ಧ ತೀರ್ಮಾನವಾಗಿ ಅವರು ರೂ. 500/-ರ ಪರಿಹಾರ ದ್ರವ್ಯವನ್ನು ಒಂದೇ ಗಂಟಿನಿಂದ ತೆರಬೇಕೆಂದಾಯಿತು.

## ಮಾನಪತ್ರ

## ಪತಿತೋದ್ಧಾರಕ ಶ್ರೀ. ಕೃಷ್ಣಶರ್ಮರ ಸನ್ನಿಧಿಯಲ್ಲಿ

ಇಂದು ತಮ್ಮ ಹುಟ್ಟೂರಾದ ಉಡುಪಿಯಲ್ಲಿ ತಮ್ಮನ್ನು ಎದುರುಗೊಳ್ಳುತ್ತಿರುವಾಗ ನಮ್ಮ ಹೃದಯವು ಬಡಿಯುತ್ತಿದೆ. 13 ವರ್ಷಗಳ ಕೆಳಗೆ ತಮ್ಮನ್ನು ಇದೇ ನಾಡಿನಿಂದ ನಾವು ಹೊರಡಿಸಿದ್ದೆವು. ಆದರೆ ಕ್ಷಮಾಮಯರಾದ ತಾವು ಈ ತಪ್ಪನ್ನು ಕ್ಷಮಿಸಿ ತಮ್ಮ ದರ್ಶನವನ್ನು ನಮಗೆ ಕರುಣಿಸಿದುದಕ್ಕೆ ನಮ್ಮ ಧನ್ಯವಾದಗಳನ್ನು ಹೇಳಲು ಬಾಯಿ ಸಾಲದಾಗಿದೆ.

ಪತಿತರ ಉದ್ಧಾರಕ್ಕಾಗಿ ತಾವು ತಮ್ಮ ಜೀವನವನ್ನು ಅರ್ಪಿಸಿದ್ದೀರಿ. ಅದಕ್ಕಾಗಿ ದೇಶತ್ಯಾಗಿಗಳಾದಿರಿ. ಸರ್ವ ಕಷ್ಟಗಳನ್ನು ಅನುಭವಿಸಿದಿರಿ. ತಮ್ಮ ವಿರೋಧಿಗಳಾಗಿದ್ದ ನಮ್ಮ ಹೃದಯಗಳನ್ನು ಪರಿವರ್ತಿಸಿದಿರಿ. ಇಂದು ಸಾರ್ವಜನಿಕ ಸಮ್ಮತಿಯಿಂದ ನಮ್ಮ ನಾಡಿನ ಈ ಮಹಾಲಿಂಗೇಶ್ವರ ದೇವಸ್ಥಾನವನ್ನು ಅಸ್ಪೃಶ್ಯರಿಗಾಗಿ ತೆರೆದಿಕ್ಕಿ ನಮ್ಮ ನಾಡಿನಲ್ಲಿ ತಮ್ಮ ಹೆಸರನ್ನು ಸ್ವರ್ಣಾಕ್ಷರಗಳಿಂದ ಕೆತ್ತಿಸುವ ಕೃಪೆ ಮಾಡಬೇಕು.

ನಾವು ಮಾಡಿದ ಅಪಕಾರಗಳಿಗಾಗಿ ಕ್ಷಮೆ ಬೇಡಲು ನಾಲಗೆ ಬಾರದು. ಆದರೆ ತಾವು ನಮ್ಮನ್ನು ಕ್ಷಮಿಸಿದ್ದೀರಿ. ಶ್ರೀ ಮಹಾಲಿಂಗೇಶ್ವರನು ತಮಗೆ ಚಿರಾಯುರಾರೋಗ್ಯಗಳನ್ನು ದಯಪಾಲಿಸಿ ತಮ್ಮಿಂದ ದೀನೋದ್ಧಾರ ಕಾರ್ಯಗಳನ್ನು ಇನ್ನೂ ಮಾಡಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

ಉಡುಪಿ, ಇತಿ
ತಾ. 15-3-1945. ಪುರಜನರು.

* * * *

## ಪತಿತೋದ್ಧಾರಕ ಶ್ರೀ. ಕೃಷ್ಣಶರ್ಮರ ಆತ್ಮವೃತ್ತ.

ಅಧ್ಯಾಯ ೩

### ನನ್ನನ್ನು ಮನೆಯಿಂದ ಹೊರಡಿಸಿದ್ದು

ನನಗೆ ಆಗ ೮ ವರ್ಷಗಳು ತುಂಬುತ್ತಾ ಬಂದಿದ್ದುವು. ನಮ್ಮೂರಲ್ಲಿ ಇದ್ದ ಒಂದು ಶಾಲೆಯಲ್ಲಿ ನಾನು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿದ್ದೆ. ನಮ್ಮ ತರಗತಿಯಲ್ಲಿ ಅಸ್ಪೃಶ್ಯ ಹುಡುಗನೊಬ್ಬನು ವಿದ್ಯಾಭ್ಯಾಸ ಮಾಡುತ್ತಿದ್ದನು. ಆತನ ಹೆಸರು ತಿಮ್ಮು. ಅವನನ್ನು ಪ್ರತ್ಯೇಕವಾದ ಬೆಂಚಿನ ಮೇಲೆ

ಕುಳ್ಳಿರಿಸುವುದನ್ನು ನೋಡಿ ನನಗೆ ಸಹಜವಾಗಿಯೇ ಕುತೂಹಲವಾಗುತ್ತಿತ್ತು. ನಮ್ಮ ತಂದೆಯವರು ಒಮ್ಮೊಮ್ಮೆ "ಶಾಲೆಗಳಿಗೆಲ್ಲ ಹೊಲೆಯರನ್ನು ಬರಗೊಳಿಸುತ್ತಾರೆ. ಈ ನೀಚರು ಬಂದು ಧರ್ಮವೆಲ್ಲಾ ಹಾಳಾಗುತ್ತೆ" ಎನ್ನುತ್ತಿದ್ದುದು ನನಗೆ ನೆನಪಿದೆ. ಹೊಲೆಯರನ್ನು ಮುಟ್ಟುವುದು ಅಷ್ಟೊಂದು ಹೀನವೇನೆಂದು ನನಗೆ ಗೊತ್ತಾಗುತ್ತಿರಲಿಲ್ಲ. ನಾನು ತಾಯಿಯನ್ನು ಕೇಳಿದೆ. ಸಮರ್ಪಕ ಉತ್ತರ ದೊರೆಯಲಿಲ್ಲ. 'ಬೆಕ್ಕು ನಾಯಿಗಳನ್ನು ಮುಟ್ಟುತ್ತೇವಲ್ಲಾ' ಎಂದು ನಾನು ಪ್ರಶ್ನಿಸಿದೆ. ಆಕೆ ಹೇಳಿದಳು—'ಹಾಗೆಲ್ಲಾ ಮಾತಾಡಬಾರದು. ಅವರು ಹೊಲೆಯರು, ಮಧು-ಮಾಂಸ ತಿನ್ನುತ್ತಾರೆ, ಕರ್ರಗಿದ್ದಾರೆ, ಬ್ರಹ್ಮವರ್ಚಸ್ಸಿಲ್ಲ, ಅವರನ್ನು ಮುಟ್ಟಿದರೆ ಬ್ರಾಹ್ಮಣ್ಯ ಕೆಟ್ಟುಹೋಗುತ್ತದೆ' ಎಂದು. ನಾನು ಕೇಳಿದೆ—'ಹಾಗಾದರೆ ಬೇರೆ ಶೂದ್ರರು ತಿನ್ನುತ್ತಾರಲ್ಲ.'—ಅವಳು ಸಿಟ್ಟುಗೊಂಡು 'ಮುಟ್ಟಿದರೆ ಕಣ್ಣು ಹೊಟ್ಟಿಹೋಗುತ್ತದೆ' ಎಂದು ಬೆದರಿಕೆ ಹಾಕಿದಳು. ನಾನು ಸುಮ್ಮನಾದೆ.

ಹೊಲೆಯ ತಿಮ್ಮು ಒಂದು ದಿನ ನಮ್ಮಲ್ಲಿಗೆ ಉಪ್ಪಿನ ಕಾಯಿ ಬೇಡುವುದಕ್ಕೆ ಬಂದಿದ್ದ. ನಮ್ಮ ತಾಯಿ ಹುಳುವಾದ ಸ್ವಲ್ಪ ಉಪ್ಪಿನಕಾಯಿಯನ್ನು ಕುದಿಸಿ ಒಂದು ಎಲೆಯಲ್ಲಿ ಹಾಕಿ ಅಂಗಳದ ಮೂಲೆಯಲ್ಲಿಟ್ಟು ತೆಗೆದುಕೊಂಡು ಹೋಗೆಂದಳು. ನಾನು ಅವನ ಎದುರಿನಲ್ಲಿಯೇ 'ಹುಳುವಾದ ಉಪ್ಪಿನ ಕಾಯಿ ಏಕೆ ಕೊಟ್ಟೆ' ಎಂದು ಕೇಳಿ ಬಿಟ್ಟೆ. ತಾಯಿಯು ಸಿಟ್ಟುಗೊಂಡು ನನಗೆ ಹೊಡೆಯ ಬಂದಳು. ನಾನು ನಗುತ್ತ ತೋಟಕ್ಕೆ ಓಡಿದೆ. ಓಡುವ ಭರದಲ್ಲಿ ಫಕ್ಕನೆ ತೋಟದಲ್ಲಿಯ ಕೆರೆಯಲ್ಲಿ ಬಿದ್ದುಬಿಟ್ಟೆ. ನನ್ನ ತಾಯಿಗೆ ಈಜು ಬರುತ್ತಿರಲಿಲ್ಲ. ತಂದೆ ಮನೆಯಲ್ಲಿರಲಿಲ್ಲ. ಹತ್ತಿರದಲ್ಲಿ ಮನೆಗಳೂ ಇರಲಿಲ್ಲ. ತಿಮ್ಮುವು ಅತ್ತಿತ್ತ ನೋಡಿ ಕೆರೆಯಲ್ಲಿ ಹಾರಿಕೊಂಡು ಬಹಳ ಪೇಚಾಟದಿಂದ ನನ್ನನ್ನು ಎತ್ತಿ ಮೇಲೆ ತಂದ. ನನಗೆ ಅನೇಕ ದಿನಗಳ ವರೆಗೆ ಕಣ್ಣು ಹೊಟ್ಟಿಹೋಗುವುದೋ ಎಂದು ಹೆದರಿಕೆ ಇತ್ತು! ಆದರೆ ಹಾಗೆ ಆಗದಿದ್ದುದನ್ನು ನೋಡಿ ಆಶ್ಚರ್ಯವಾಯಿತು. ಆ ಮೇಲೆ ನಾನು ತಿಮ್ಮುವನ್ನು ಸರಾಗವಾಗಿ ಮುಟ್ಟುವುದಕ್ಕೆ ಮೊದಲು ಮಾಡಿದೆ ಒಂದೆರಡು ವರ್ಷ ಈ ವಿಷಯವು ನಮ್ಮ ತಂದೆತಾಯಿಗಳಿಗೆ ತಿಳಿದಿರಲಿಲ್ಲ. ಅವರಿಗೆ ಗೊತ್ತಾದಾಗ ಅವರು ನನ್ನನ್ನು ಹೊಡೆದು ಮೃತ್ತಿಕೆ ಹಾಕಿ ಸ್ನಾನಮಾಡಿಸಿ ಬೇರೆ ಯಜ್ಞೋಪವೀತ

ಹಾಕಿಸಿದರು. ಇದರಿಂದಾಗಿ ನನ್ನ ಅಪನಂಬಿಕೆಯೇನೂ ಕಡಿಮೆಯಾಗಲಿಲ್ಲ. ಅಷ್ಟರಲ್ಲಿ ಎಲ್ಲೆಲ್ಲಿಯೂ ಅಸ್ಪೃಶ್ಯತಾ ನಿವಾರಣೆಯ ಚಳವಳವು ಹೂಡಲ್ಪಟ್ಟಿತ್ತು. ನಮ್ಮಲ್ಲಿನ ಬ್ರಾಹ್ಮಣರಲ್ಲಿ ಮುಕ್ಕಾಲು ಪಾಲು ಈ ಚಳವಳಕ್ಕೆ ವಿರುದ್ಧವಾಗಿದ್ದರು. ಅಲ್ಲದೆ ಬ್ರಾಹ್ಮಣೇತರರಲ್ಲಿಯೂ ತುಂಬಾ ಜನರು ವಿರೋಧಿಗಳಿದ್ದರು. ಮಧ್ಯ ಜಾತಿಯ ಈ ಬ್ರಾಹ್ಮಣೇತರರು ತಾವು ತಮ್ಮಿಂದ ಕೀಳು ಜಾತಿಯವರನ್ನು ತಿರಸ್ಕರಿಸುತ್ತಿದ್ದರೂ ಕೂಡ ಬ್ರಾಹ್ಮಣರು ಮಾತ್ರ ತಮ್ಮನ್ನು ಕೊಂಚ ತಿರಸ್ಕರಿಸಿದರೆ ಸಿಟ್ಟುಗೊಳ್ಳುತ್ತಿದ್ದರು. ಇದೆಲ್ಲಾ ನನಗೆ ದೊಡ್ಡ ಸಮಸ್ಯೆಯಾಗಿತ್ತು. ಆಗ ಅಸ್ಪೃಶ್ಯತಾ ನಿವಾರಣೆಯ ಚಳವಳವು ಉನ್ನತ ಸ್ಥಿತಿಯಲ್ಲಿತ್ತು. ನನಗಾಗ ೧೫ ವರ್ಷ.

ಅಸ್ಪೃಶ್ಯರಲ್ಲೊಬ್ಬನು ಸ್ವಲ್ಪ ಕಲಿತಿದ್ದವನು ಒಂದು ದಿನ ಸುಧಾರಕರ ಬೆಂಬಲದಿಂದ ಒಂದು ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದನು. ಆತನು ತಿಮ್ಮುವಿನ ಚಿಕ್ಕಪ್ಪನಾಗಿದ್ದನು. ಅವನು ಭಗವದ್ಗೀತೆಯ ಕೆಲವು ಶ್ಲೋಕಗಳನ್ನು ಎತ್ತಿ ಮಾತನಾಡಿದೊಡನೆಯೇ ನಮ್ಮ ಸನಾತನಿಗಳ ಕೋಪವು ಮಿತಿಮೀರಿ ಅವನನ್ನು ಕಲ್ಲುಗಳಿಂದಲೂ ಇಟ್ಟಿಗೆಗಳಿಂದಲೂ ಹೊಡೆದು ಗಾಯಗೊಳಿಸಿದರು. ಅಲ್ಲಿನ ವರೆಗೆ ನಾನು ಈ ಚಳವಳದ ವಿಷಯ ತಟಸ್ಥನಾಗಿದ್ದೆ. ಈ ಅತ್ಯಾಚಾರವನ್ನು ಕಂಡು ನನ್ನ ಲಕ್ಷ್ಯವನ್ನು ನಾನು ನಿರ್ಧರಿಸಿದೆ. ಅದೇ ತಿಂಗಳಲ್ಲಿ ನಮ್ಮೂರಿನ ಸುಧಾರಕರು ಮಾಡಿದ ಸಹಪಂಕ್ತಿ ಭೋಜನದಲ್ಲಿ ಅದೇ ಅಸ್ಪೃಶ್ಯನು ತಯಾರಿಸಿದ ಅಡಿಗೆಯನ್ನು ನಾನೂ ಉಂಡೆ. ನಮ್ಮ ತಂದೆಯ ವರೆಗೆ ಇದು ತಿಳಿದು ಬಂದ ಕೂಡಲೇ ಅವರು ನನ್ನನ್ನು ಮನೆಯಿಂದ ಹೊರಡಿಸಿದರು. ಆ ಮೇಲೆಯೇ ನನ್ನ ನಿಜವಾದ ಜೀವನವು ಪ್ರಾರಂಭವಾಯಿತೆನ್ನಬಹುದು.

---



## ಶ್ರೀ ಕಡೆಂಗೋಡ್ಲು ಶಂಕರ ಭಟ್ಟರು, ವಿದ್ವಾನ್, ಮಂಗಳೂರು

ಇವರು 'ರಾಷ್ಟ್ರಬಂಧು'ವಿನ ಸಂಪಾದಕರು ಮತ್ತು ಮಂಗಳೂರು ಹೆಮ್ಮಕ್ಕಳ ಕಾಲೇಜಿನ ಕನ್ನಡ ಪಂಡಿತರು. ಉತ್ತಮ ಕವಿಗಳು, ನಾಟಕಕಾರರು, ಕಥೆಗಾರರು ಹಾಗೂ ವಿಮರ್ಶಕರು. ಇವರ ಕವಿತೆಗಳು ಕನ್ನಡದ ಆಧುನಿಕ ಸಾಹಿತ್ಯದಲ್ಲಿ ಮೊದಲಿನ ಸ್ಥಾನವನ್ನು ಸಂಪಾದಿಸಿಕೊಂಡಿವೆ. 'ಕಾಣಿಕೆ', 'ನಲ್ಮೆ' 'ಹಣ್ಣುಕಾಯಿ' ಎಂಬ ಕವನಸಂಗ್ರಹಗಳನ್ನೂ 'ಹಿಡಿಂಬೆ', 'ಯಜ್ಞಕುಂಡ', 'ಗುರುದಕ್ಷಿಣೆ' ಮೊದಲಾದ ನಾಟಕಗಳನ್ನೂ ಬರೆದಿದ್ದಾರೆ. ಸಂಗ್ರಹವಾಗಿ ಇವರ ಕತೆಗಳು ಪ್ರಕಟವಾಗಿಲ್ಲವಾದರೂ ನೂರಾರು ಕತೆಗಳು ಬೇರೆ ಬೇರೆ ಪತ್ರಿಕೆಗಳಲ್ಲಿ, ಹೆಚ್ಚಾಗಿ 'ರಾಷ್ಟ್ರಬಂಧು'ವಿನ ಸಾಹಿತ್ಯ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಇವರ 'ದೊಡ್ಡಣ್ಣ' 'ಅದ್ದಿಟ್ಟು' ಮೊದಲಾದ ಕತೆಗಳು ಉತ್ತಮ ಸಣ್ಣ ಕತೆಗಳ ಸಾಲಿಗೆ ಸೇರತಕ್ಕವು. ಆದರೂ ಕಾವ್ಯದಲ್ಲಿ ಪಡೆದಷ್ಟು ಸಾಫಲ್ಯವು ಕತೆಗಳಲ್ಲಿ ಕಂಡು ಬರುವುದಿಲ್ಲ. ಕೆಲವು ವೇಳೆ ಮಾತಿನ ಸರಣಿಯು ಮಾತ್ರ ನಮ್ಮನ್ನು ಕತೆಯ ಕೊನೆಯ ವರೆಗೆ ಎಳೆದುಕೊಂಡು ಹೋಗುವುದೂ ಇದೆ. ಅಲ್ಲಲ್ಲಿ ಮೃದುಹಾಸವಿದೆ. ಮನಸು ಕರಗಿಸುವ ಕತೆಗಳು ಕಡಿಮೆಯಾದರೂ ಮನ ಮೆಚ್ಚುವ ಕಥಾವಸ್ತು, ಮನಚುಚ್ಚುವ ವ್ಯಂಗ್ಯ ಇವು ಇವರ ವೈಶಿಷ್ಟ್ಯ. ಸಾಹಿತ್ಯದ ಯಾವ ವಿಭಾಗದಲ್ಲಾಗಲೀ ಇವರು ಯಾರ ಅನುಕರಣೆಯನ್ನೂ ಮಾಡುವುದಿಲ್ಲ. ಅವರದೇ ಆದ ಒಂದು ರೀತಿ ಅವರದು.

# ಮಡದಿಯ ಮುನಿಸು

ಕಡೆಂಗೋಡ್ಲು ಶಂಕರ ಭಟ್ಟರು

ಮದುವೆಯಾಗಿ--ಧಾರವಾಡದ ಕನ್ನಡಿಗರು ಹೇಳುವಂತೆ—ಸುಖವಾಗಿ 'ಸಂಸಾರ ಮಾಡಿಕೊಂಡಿರುವುದು' ಅಷ್ಟು ಸುಲಭದ ಕೆಲಸವೇನೂ ಅಲ್ಲ. ಸಂಸಾರವೆಂಬ ಶಬ್ದದಲ್ಲಿ ಸಾರವುಂಟು. ಆದರೆ ಆ ಸಂಸಾರದಲ್ಲಿ ಎಷ್ಟು ಸಾರ! ಬಲ್ಲವರೆ ಬಲ್ಲರು. ಗೊತ್ತಿಲ್ಲದವರು ನನ್ನಿಂದ ಕಲಿತುಕೊಳ್ಳಬಹುದು. ನಾನು ಉಳಿದವರಂತೆ ಮದುವೆಯಾಗಿ ಸಂಸಾರ ಮಾಡಿಕೊಂಡವನಲ್ಲ. ಮದುವೆಯು ತಾನಾಗಿ ಆಯಿತು. ಸಂಸಾರವೂ ತಾನಾಗಿ ಆಗಿಹೋಯಿತು. ದೇವರ ಮೇಲೆಯೇ ಸರ್ವ ಭಾರಗಳನ್ನೂ ಹೊರಿಸಿ ಕುಳಿತ ನನಗೂ ಈ ಸಂಸಾರವು ಹೇಗೆ ಕ್ಲೇಶ ಕೊಟ್ಟಿತು ನೋಡಿರಿ! ಅಲ್ಲ; ಈಗಿನ ಸ್ಥಿತಿಯೇ ಬೇರೆ ಎಂದು ಭಾವಿಸಿಕೊಳ್ಳಿ. ಈಗ ಅಷ್ಟೇನೂ ಕಷ್ಟವೆಂದು ಕಾಣುವುದಿಲ್ಲ. ಉಳುವ ಸಮಯದಲ್ಲಿ ನೇಗಿಲ ಭಾರದಿಂದ ಕತ್ತು ಜೋತು ಹೋಗುವ ಎತ್ತಿಗೆ ಮೊದ ಮೊದಲು ಅದು ಕಷ್ಟ. ಆ ಮೇಲೆ ಅದೆ ಇಷ್ಟ!

ನಾನು ನಿಜವಾಗಿ ಹೇಳುತ್ತೇನೆ. ನನ್ನಾಕೆ ಇಷ್ಟು ಬಿರುಸು ಸ್ವಭಾವ ದವಳೆಂದು ಮೊದಲೆ ಗೊತ್ತಿದ್ದರೆ, ಖಂಡಿತವಾಗಿ ನಾನು ಆಕೆಯ ಕೊರಳಿಗೆ ಮಂಗಲಸೂತ್ರ ಕಟ್ಟುತ್ತಿರಲಿಲ್ಲ. ಅಂದು ನಾನು ಹುಡುಗಿಯನ್ನು ನೋಡ ಲೆಂದು ಹೋದಾಗ ಆ ಪೋರಿ, ಆ ಹನ್ನೆರಡು ವರ್ಷದ ಎರಡು ಗೇಣುದ್ದದ ಹುಡುಗಿ-ಎಷ್ಟು ವಿನಯಸಂಪನ್ನೆ ಎಂದು ತೋರುತ್ತಿದ್ದಳು! ಹುಡುಗಿಯನ್ನು ನೋಡುವುದಕ್ಕೆ ನಾನಾಗಿ ಹೋದುದಲ್ಲ. ನನ್ನ ಗೆಳೆಯನೊಬ್ಬನ ಮನೆಗೆ ಹೋಗಿದ್ದೆ. ಗೆಳೆಯನಿಗೆ ಎಳೆಯ ತಂಗಿಯೊಬ್ಬಳು! ಅವಳು ಅರೆ ನಗುತ್ತಾ ಮೊಗವನ್ನು ತಗ್ಗಿಸುತ್ತಾ ಒಂದು ಲೋಟದಲ್ಲಿ ತುಂಬಾ ಕಾಫಿಯನ್ನು ನನ್ನೆದು ರಲ್ಲಿ ಇಟ್ಟಳು. ಲೋಟದಿಂದ ಅವಳ ಮುಖಕ್ಕೆ, ಮುಖದಿಂದ ಲೋಟಕ್ಕೆ ಎರಡು ಸಲ ನಾನು ನೋಡಿದೆ. ಕಾಫಿಯನ್ನು ಕುಡಿದನೋ ಇಲ್ಲವೋ ಗೊ ತ್ತಿಲ್ಲ. ಅವಳ ರೂಪಸಾರವನ್ನು ಹೀರಿದೆನು. ಹೊರಗೆ ಬಂದೆ. ಅದೇ ದಿನ ಸಂಜೆ, ಮನೆಗೆ ಹಿಂತೆರಳುವಾಗ ನನ್ನ ಸ್ನೇಹಿತ ಎಲ್ಲವನ್ನು ಹೇಳಿದ. ಅವನಿಗೆ ಒಬ್ಬಳೇ ತಂಗಿ; ತಂದೆಯಿಲ್ಲ; ತಾಯಿಯಿಲ್ಲ; ನನಗೆ ಕೊಡಬೇಕೆಂಬ ಆಸೆ;

ಉತ್ತರವೇನು? ಎಂದು. ನಾನು ಯಾವ ಉತ್ತರವನ್ನು ಕೊಡುವುದು? ಆ ಹುಡುಗಿ ಕೊಟ್ಟ ಕಾಫಿಯನ್ನೇನಾದರೂ ನಾನು ಚೆಲ್ಲಿದ್ದೆನೇ? ಇಲ್ಲ—ಅದನ್ನು ಬಹುಶಃ ಕುಡಿದಿದ್ದೆ. ಹಾಗೆಯೇ 'ಬಹುಶಃ ನಮ್ಮ ಸಂಬಂಧ ಆಗಬಹುದು,' ಎಂದು ಉತ್ತರ ಕೊಟ್ಟೇ ಬಿಟ್ಟೆ.

ನಾನು ಒಬ್ಬನೇ ಕುಳಿತಿದ್ದಾಗ ಎಲ್ಲವನ್ನೂ ಆಲೋಚಿಸಿದೆ. ಮದುವೆಯ ವಿಷಯದಲ್ಲಿ ದುಡುಕುವುದು ತಪ್ಪು. ನಾನೇನೂ ದುಡುಕಲಿಲ್ಲ. ಸ್ನೇಹಿತನಿಗೆ ಮಾತು ಕೊಟ್ಟೆ. ಇದು ತಪ್ಪೆಂಬ ಭಾವನೆ ಬಂತು. ಹುಡುಗಿ ಹುಡುಗಿಯೆಂದೇ ನನಗೆ ಗೊತ್ತಿದ್ದಿತಲ್ಲದೆ, ಅವಳ ನಡೆಯೇನು? ನುಡಿಯೇನು? ಸ್ವಭಾವವೇನು? ಒಂದೂ ಗೊತ್ತಿಲ್ಲ. ನನ್ನ ಗೆಳೆಯ ಸಜ್ಜನ; ಮಿತಭಾಷಿ; ಅವನ ಸ್ವಭಾವವೇ ಅವಳಲ್ಲಿಯೂ ಬಿಂಬಿತವಾಗಿದ್ದರೆ ಸೊಗಸು. ಅದು ನನ್ನ ಪುಣ್ಯ. ಇಲ್ಲವಾದರೆ? ಕೆಲ ಹೆಂಗುಸರು ಹೂವರಳಿದಂತೆ ನಕ್ಕು ಜೇನು ನೊಣ ಕಡಿದಂತೆ ಮಾತಾಡುತ್ತಾರೆ. ಹಾಗಿದ್ದರೆ ಈಕೆ,—ನನ್ನ ಗತಿಯೇನಪ್ಪ! ಎಂದು ವಿಚಾರಕ್ಕೆ ತೊಡಗಿದೆ. ಹೀಗೆ ವಿಚಾರಿಸುತ್ತಾ ಹೋದರೆ—ಎಲ್ಲಿಂದಾದರೂ ಸಂಬಂಧ ಮಾಡಿಕೊಳ್ಳುವುದಕ್ಕೆ ಸಾಧ್ಯವೇ? ಒಬ್ಬಳು ಹುಡುಗಿಯ ಗುಣ ಸ್ವಭಾವಗಳನ್ನು ಕಲಿಯುವುದರಲ್ಲೇ ಇಷ್ಟು ಸಮಯ ಹೋಯಿತೆಂದರೆ ಮನಸ್ಸಿಗೆ ಒಪ್ಪುವ ಹುಡುಗಿಯನ್ನು ಹುಡುಕಿ ಹಿಡಿಯಲು ಎಷ್ಟು ಕಾಲ ಬೇಕಾದೀತು? ಇದೂ ಒಂದು ಯೋಚನೆ ಹೌದು. ಮತ್ತೆ ಭಾವಿಸಿಕೊಂಡೆ ಹುಡುಗಿಯರೆಂದರೆ ಕೈ ಹಿಡಿದವರ ಸ್ವಭಾವವನ್ನು ಪಡೆಯತಕ್ಕವರು. ತಿದ್ದಿಕೊಂಡರೆ ಸರಿ! ಮುಂದೆ....ಕೊನೆಗೆ ಆಲೋಚನೆ ಇಲ್ಲ. ಮದುವೆಯಂತೂ ಆಗಿಯೇ ಹೋಯಿತು.

ಮದುವೆ ಆಗಿಹೋಯಿತು. ಹೆಂಡತಿ ಚೆಲುವೆ; ಎಷ್ಟು ಪರೀಕ್ಷಿಸಿದರೂ ಚೆಲುವೆ! ಮಾತಿನಲ್ಲಿ ನಯ, ನುಣುಪು, ಬೆಡಗು! ದೂರುವುಕ್ಕೇನೂ ಇಲ್ಲ. ಪ್ರೌಢವಾಗಿ ಸರಸವನ್ನಾಡದೆ ಸೆರಗು ಸೆಳೆದು ಮೋರೆಯನ್ನು ಓರೆಮಾಡಿ ನಿಲ್ಲುತ್ತಾಳೆಂಬುದೊಂದೆ ನಾನು ಕಂಡ ಕೊರತೆ. ಇದೂ ಕೊರತೆಯಾಗಿ ಕಾಣಲಿಲ್ಲ. ಶಾಲೀನತೆ! ಲಜ್ಜೆ!! ಎಳೆಬಳ್ಳಿಯಂತೆ, ಮಾತಾಡದೆ ಒಂದು ಬದಿಗೆ ಒಲೆಯುತ್ತಿದ್ದವಳನ್ನು ಮಾತಾಡಿಸಬೇಕೆಂಬ ಆಸೆ. ಸರ್ವಥಾ ಮಾತಾಡಳು. ನಾನು ಇಚ್ಛಿದಸಿ ಅವಳು, ಕೊಡದ—ಮಾತು ಕ್ರಮೇಣ

ಉದಾರಗುಣವನ್ನು ಹೊಂದಿ ಹತ್ತಕ್ಕೆ ಒಂದರಂತೆ ಬರಲಾರಂಭಿಸಿತು. ಈ ಸಮಯಕ್ಕೆ ಒಂದೆರಡು ವರ್ಷಗಳು ಕಳೆದುಹೋದುವೆನ್ನಿ.

ಹೋಯಿತು ಕಾಲ! ಹೀಗೆಯೇ ಹೋಯಿತು. ಗಂಡಹೆಂಡಿರ ಪ್ರಣಯಕ್ಕೆ ಭಂಗ ತರುವುದಕ್ಕೋ ಎಂಬಂತೆ ಒಂದು ಗಂಡು ಮಗು ಹುಟ್ಟಿತು. ಅದಿನ್ನೂ ದಟ್ಟಡಿಯಿಡಲು ಕಲಿತಿದ್ದಿತಷ್ಟೆ. ಹದಿನೈದೆ ತಿಂಗಳೊಳಗೆ ಇನ್ನೊಂದು ಪ್ರತಿಬಿಂಬ! ಪಿತೃತ್ವವು ಬಂದೊಡನೆ ಬಂತು ನನಗೆ ಕಷ್ಟ. ತಂದೆ ತಾಯಿ ಇಬ್ಬರೂ ಮಡಿದರು. ಮಾತಾಡಿಕೊಂಡೆ ಕಾಲಧರ್ಮವನ್ನು ಹೊಂದಿದರೊ ತಿಳಿಯೆ. ಗಂಡ ಸತ್ತು ನಾಲ್ಕು ದಿವಸಗಳಾಗಬೇಕಾದರೆ ತಾಯಿ ಪರಂಧಾಮವನ್ನು ಹೊಂದಿದಳು. ಮಗ ನಾನೊಬ್ಬನೆ ಉತ್ತರಾಧಿಕಾರಕ್ಕೆ. ಇಷ್ಟೆಲ್ಲಾ ಆಗಿ ಒಂದು ವರ್ಷವಾಗಿದ್ದಿತಷ್ಟೆ. ಆ ಕಾಲಕ್ಕೆ ಸೇರಿದುದು ನಮ್ಮ ಕಥಾವಸ್ತು. ಅನಂತರವೆ ಸಂಸಾರದ ಶುದ್ಧ ಸಾರವು ಅರಿತುದು!

ಮನೆಯಲ್ಲಿ ತುಂಬ ಜನರಿರುವಾಗ, ಅತ್ತೆ ಮಾವಂದಿರು ಗಿಡುಗಗಳಂತೆ ಸೊಸೆಯ ಮೇಲೆಯೇ ದೃಷ್ಟಿಯಿಡುತ್ತಿರುವಾಗ, ಮುಂಜಾನೆ ಮರದಿಂದೆದ್ದು ಹಾರುವ ಹಕ್ಕಿಗಳಂತೆ ಮನೆಯ ಕೋಣೆ ಕೋಣೆಗಳಿಂದಲೂ ಅತ್ತಿಗೆಯರೂ ನಾದಿನಿಯರೂ ಹೊರಡುತ್ತಿರುವಾಗ, ಭಾವಂದಿರೂ ಸಮಾನ ಪ್ರಾಯದ ಅಳಿಯಂದಿರೂ ತಮ್ಮ ಭಾವನ ಅಥವಾ ಮಾವನ ಮೇಲೆಯೇ ಕಣ್ಣಿಟ್ಟು—ಈತ ಹೆಂಡತಿಯೊಡನೆ ಮಾತಾಡುವುದನ್ನು ಹೊಂಚುಹಾಕಿ ನೋಡಬೇಕು—ಎಂದು ವ್ರತ ಹಿಡಿದಿರುವಾಗ—ಆದುದರಿಂದಲೇ ಹೆಂಡತಿಯೊಡನೆ ದಿನಕ್ಕೊಂದು ಮಾತನ್ನಾದರೂ ಆಡುವುದು ಪ್ರಯಾಸಲಭ್ಯ ಸುಖವಾಗಿರುವಾಗ—ಆಯಿತು ಹೆಂಡತಿಯ ಮೌನ. ಗಂಡನು ಒಬ್ಬನಾಗಿರುವಾಗ ಹೇಳುವುದೇನು? ಬೇರೆ ಹೆಂಗುಸರ ವಿಷಯವೇನೊ ತಿಳಿಯೆ. ನನ್ನ ಹೆಂಡತಿಯ ವಿಚಾರವನ್ನು ಹೇಳುತ್ತೇನೆ. ಅವಳ ರಸವತ್ತಾದ ಮಾತಾಗಲಿ, ಮುಗುಳು ನಗೆಯಾಗಲಿ ಒಂದೂ ಬೇಡವಾಯಿತು. ರುದ್ರಮ್ಮ! ಅದೀಗ ನನ್ನಾಕೆಯ ಹೆಸರು. ಯುಗಾಂತ್ಯದಲ್ಲಿ ತಾಂಡವವಾಡುವ ಆ ಕಾಲರುದ್ರನ ಅಮ್ಮನೋ ಏನೋ! ಅಂತೂ ಅವಳ ಹೆಸರು ರುದ್ರಮ್ಮ. ಆಕೆಯ ತಾಯ್ತಂದೆಗಳ ಹೆಸರಿಡುವ ಬುದ್ಧಿವಂತಿಕೆ ಈಗ ನನಗೆ ತಿಳಿದುಬಂತು. ಬೇರಾವ ಹೆಸರನ್ನಾದರೂ ಇಡಬಾರದಿತ್ತೆ? ಚಂದ್ರಮ್ಮ—ಎಂದು ಹೆಸರಿಡುತ್ತಿದ್ದರೆ ಚಂದ್ರನಂತೆ

ಮುದ್ದು ಮುದ್ದಾಗಿ ನಗುತ್ತಿದ್ದಳು. ಹೊನ್ನಮ್ಮನೆಂದು ನಾಮಕರಣ ಮಾಡಿದ್ದರೆ ಗೃಹಲಕ್ಷ್ಮಿಯಾಗಿ ಬಾಳುತ್ತಿದ್ದಳು. ಸುಶೀಲೆಯೆಂದೋ, ಸುಗುಣೆಯೆಂದೋ, ಲಲಿತೆಯೆಂದೋ ಕರೆಯುತ್ತಿದ್ದರೆ, ಎಷ್ಟೊ ಗುಣವತಿಯಾಗಬಹುದಿತ್ತು. ಅದೊಂದೂ ಅಲ್ಲ. ರುದ್ರಮ್ಮ! ಎಂಬ ಹೆಸರು. ಎಂತಹ ರೌದ್ರ ರಸ ಹೆಸರಲ್ಲಿ! ಆ ಹೆಸರು ಕೇಳಿದೊಡನೆ ನಡು ಕಾಡಿನಲ್ಲಿ ಗರ್ಜಿಸುವ ಹುಲಿಯ ಅಥವಾ ಮರುಭೂಮಿಯಲ್ಲಿ ಕೇಸರವನ್ನಲ್ಲಾಡಿಸುವ ಆರ್ಭಟಿಸುವ ಸಿಂಹದ ನೆನಪು. ನನ್ನಲ್ಲಿ ಭಯ! ಮಾತಾಡಿದರೆ ಭಯ! ಕಾಲ ಅಂದುಗೆಯ ಶಬ್ದವಾದರೆ ಭಯ! ಇದಕ್ಕೆ ಕಾರಣ ನನ್ನಾಕೆ ರುದ್ರಮ್ಮನ ಸ್ವಭಾವವೋ ಅಥವಾ ಅವಳಿಗೆ ಆ ಹೆಸರಿಟ್ಟ ತಾಯ್ತಂದೆಗಳ ಸ್ವಭಾವವೋ ತಿಳಿಯದು. ಕಾರಣವನ್ನು ಹುಡುಕುವುದಿಲ್ಲ. ಸ್ಥಿತಿ ಮಾತ್ರ ಹಾಗೆ.

ನಮ್ಮದು ನಗರವಾಸ. ನನಗೆ ಒಂದು ಉದ್ಯೋಗ. ರುದ್ರಮ್ಮನ ಸ್ವಭಾವದ ಹೆಂಗುಸನ್ನು ಮದುವೆಯಾದ ಮೇಲೆ, ಇಡೀ ದಿನ ಕೆಲಸವಿರುವ ಉದ್ಯೋಗ ಸಲ್ಲದು; ಎಂದು ದಿನಕ್ಕೆ ೫ ಗಂಟೆಯಷ್ಟೇ ಕೆಲಸ ಮಾಡಿದರೆ ಸಾಲುವ ಉಪಾಧ್ಯಾಯವೃತ್ತಿಯನ್ನು ಕೈಕೊಂಡೆ. ಆದರೆ ಮಾಡುವುದೇನು? ನನ್ನೊಡತಿಯ ಸೇವೆಗೆ ಅಷ್ಟು ವೇಳೆ ಸಾಲದಾಯಿತು. ಈ ಮೊದಲೆ ನೋಡಿ ನಾನು ಮಾಡಿದ ಒಂದು ಅಪರಾಧ! ಹಳ್ಳಿಯ ಮೊದ್ದು ಹೆಂಗುಸಿಗೆ ಇಂಗ್ಲೀಷು ಭಾಷೆಯನ್ನು ಕಲಿಸಿಬಿಟ್ಟಿದ್ದೆ. ಹೀಗೆ ಕಲಿಸುವುದರಲ್ಲಿ ನನಗೆ ದುರುದ್ದೇಶವೇನೂ ಇರಲಿಲ್ಲ. ಯಾರಾದರೂ ಸಂಭಾವಿತ ಸ್ತ್ರೀಯರು—ಇಂಗ್ಲೀಷು ಓದಿದವರು, ಕನ್ನಡ ತಿಳಿಯದವರು ಮನೆಗೆ ಬಂದರೆಂದು ತಿಳಿಯಿರಿ. ಅವರೊಡನೆ ಒಂದು ಮಾತನ್ನಾದರೂ ಆಡಬೇಕಷ್ಟೆ? ಅಲ್ಲ; ಎಲ್ಲಿಂದಾದರೂ ಒಂದು 'ಟೆಲಿಗ್ರಾಮ್' ಬಂತೆಂದು ಭಾವಿಸಿರಿ. ಆಗ ಅದನ್ನೋದಿ ವಿಷಯವೇನೆಂದು ತಿಳಿದುಕೊಳ್ಳಬೇಕಷ್ಟೆ? ಅದೂ ಪ್ರಯೋಜನವಿಲ್ಲವೆಂದು ಭಾವಿಸಿಕೊಂಡರೂ, ತಂಗಳನ್ನವನ್ನು ಕಾಯಿಸಿ ಬಿಸಿಮಾಡಿದಂತೆ ಆ ಹಳ್ಳಿಯ ಪಾಮರಿಗೆ, ಸ್ವಲ್ಪ ವಿದಗ್ಧತೆಯನ್ನು ತಂದುಕೊಟ್ಟಂತೆ ಆಯಿತಷ್ಟೆ? ಎಂಬ ಆಲೋಚನೆಯಿಂದ ಓದಿಸಿದೆ ಇಂಗ್ಲೀಷನ್ನು. ಅದರ ಪರಿಣಾಮವನ್ನು ಹೇಳುವುದೇನು? ಭಾಷಣವಾದ ಭಾಷಣಗಳಿಗೆಲ್ಲಾ ಅವಳು ಹೋಗಬೇಕೆ? ಒಂದು ವೇಳೆ ಜನರು ಸೇರಿ, ಕುರ್ಚಿಗಳಿಲ್ಲವಾದರೆ, ಈಕೆ ಹೆಂಗುಸು,—ನನ್ನ ಹೆಂಡತಿ! ಎಂದು ರುಜುಪಡಿಸಿ

ನಾನೇ ಕುರ್ಚಿಯನ್ನು ತಂದು ನಮ್ಮಾಕೆಯ ಮಂಡನಕ್ಕೆ ಅಣಿಮಾಡಿಕೊಡುವ ಪ್ರಸಂಗ ಬರಬೇಕೇ? ಸ್ತ್ರೀಯರ ಕ್ಲಬ್ಬುಗಳಾದ ಕ್ಲಬ್ಬುಗಳಿಗೆಲ್ಲಾ ಅವಳ ಜತೆಯಲ್ಲಿ ಹೋಗಿ, ಅವಳನ್ನು ಮನೆಗೆ ಕರೆದುಕೊಂಡು ಬರುವುದಕ್ಕೆ ಒಂದೊ, ಎರಡೊ, ಮೂರೋ ಗಂಟೆಯ ವರೆಗೆ ಬಾಗಿಲಲ್ಲಿ ಕೈಕಟ್ಟಿ, ಅಥವಾ ಆಲೋಚನಾ ಮಗ್ನನಾಗಿ, ಅಲ್ಲದಿದ್ದರೆ ಮಕ್ಕಳನ್ನು ಆಡಿಸಿಕೊಂಡು ನಿಲ್ಲುವ ಅವಸ್ಥೆ ಬರಬೇಕೆ?

ದಿನ ಹೋದಂತೆ ಮನೆಯ ತಾಪತ್ರಯ ಹೆಚ್ಚಿತು. ನನ್ನ ಹೆಂಡತಿ ಕುಣಿಯುವ ನಾಲಿಗೆಗೆ ಸ್ವಲ್ಪ ಕಡಿವಾಣ ಹಾಕಿದ್ದರೆ, ಹೊಡೆಯುವ ಹುಬ್ಬಿಗೆ ಸ್ವಲ್ಪ ಶಾಂತಿಯನ್ನು ಕಲ್ಪಿಸಿದ್ದರೆ, ನಡೆಯುವ ಅಬ್ಬರಕ್ಕೆ ಸ್ವಲ್ಪ ತಡೆಯನ್ನು ಎಂದರೆ "ಬ್ರೇಕ"ನ್ನು ಹಾಕಿದ್ದರೆ—ಚಿಂತೆಯಿಲ್ಲ; ಇಷ್ಟೆಲ್ಲ ಮಾಡದಿರುತ್ತಿದ್ದರೂ ವ್ಯಸನವಿರುತ್ತಿರಲಿಲ್ಲ—ಹೊತ್ತಿಗೆ ಸರಿಯಾಗಿ ಎರಡೂಟ; ಎರಡು ಕಾಫಿಯನ್ನು ಕೊಡುವ ಕೃಪೆ ಮಾಡುತ್ತಿದ್ದರೆ, ನಿಜವಾಗಿಯೂ ಹೇಳುತ್ತೇನೆ! ನನ್ನ ತಾಪತ್ರಯವೆಲ್ಲಾ ದೂರವಾಗುತ್ತಿದ್ದಿತು! ಆದರೆ ಮಾಡುವುದೇನು? ಅವಳ ಮುಖಕ್ಕೆ ಯಾವಾಗಲೂ ಮಳೆಗಾಲವೇ ಸರಿ. ಒಂದು ದಿನವಾದರೂ ಮೋಡ ತಿಳಿಯುವ ಪದ್ಧತಿಯಿರಲಿಲ್ಲ. ತಾಪತ್ರಯವೆಂದರೆ ನನ್ನ ಹೆಂಡತಿ! ನನ್ನ ಹೆಂಡತಿಯೆಂದರೆ ತಾಪತ್ರಯ!

ಒಂದು ದಿನ ಸಂಜೆಗೆ ಮನೆಗೆ ಬಂದಿದ್ದೆ. ಆ ದಿನ ನನಗೆ ೫ ಘಂಟೆಯ ಪಾಠ! ಬೊಬ್ಬೆ ಹೊಡೆದು ಸಾಕಾಗಿತ್ತು. ಕಲಿಸುವ ಪಾಠದ ಮಧ್ಯದಲ್ಲಿ ಕಾಫಿಯ ಸ್ಮರಣೆ. ಆ ಸಮಯಕ್ಕೆ ಒಂದು ಲೋಟ ಬೆಚ್ಚಗಿನ ಕಾಫಿ ಸಿಕ್ಕುತ್ತಿದ್ದರೆ, ನಾನು ಸ್ವರ್ಗಸುಖವನ್ನಾದರೂ ತಿರಸ್ಕರಿಸಿ ಬಿಡುತ್ತಿದ್ದೆ. ಮನೆಗೆ ಬಂದೆ! ಸೇಂಕುತ್ತಾ ಬಂದೆ! ಯಾರಾದರೂ ಅಡಿಗೆ ಹೋದ ನನ್ನ ಕಣ್ಣನ್ನೂ, ಬಿಳುಪೇರಿದ ಮುಖವನ್ನೂ, ಹೊರಡುತ್ತಿದ್ದ ದೀರ್ಘ ಶ್ವಾಸವನ್ನೂ ನೋಡುತ್ತಿದ್ದರೆ, ಏನೇನೋ ಭಾವಿಸಬೇಕಾಗಿತ್ತು! ಬಂದು ಕೂಗಿದೆ—ಏ ರುದ್ರಮ್ಮ! ಎಂದು. ರುದ್ರಮ್ಮ ಎಲ್ಲಿದ್ದಾಳೆ? ಮಂಚದ ಮೇಲೆ. ನನ್ನ ಕೊನೆಯ ಮಗುವನ್ನು—ಆ ಚಿಕ್ಕ ಬೊಂಬೆಯನ್ನು ಹಿಡಿದುಕೊಂಡು ಮಲಗಿದ್ದಳು. ಸಮೀಪ ಹೋದೆ, ಅವಳಿಗೆ ಎಚ್ಚರವಾಗಲಿಲ್ಲ. ಮೈ ಮುಟ್ಟುವ ಧೈರ್ಯವನ್ನು ತಂದುಕೊಂಡೆ. ಎಚ್ಚರವಾಗಲಿಲ್ಲ. ತಡವರಿಸಿದೆ. ಎಚ್ಚರವಾಗುವ ಕೆಲಸವನ್ನು

ಮರೆತೇ ಬಿಟ್ಟವಳಂತೆ ಕಂಡಿತು. ನಾಲ್ಕು ಸಲ ಹೆಸರೆತ್ತಿ ಕೂಗಿದೆ, ಎದ್ದಳು ನನ್ನಾಕೆ. ಮಗುವನ್ನು ನಿದ್ದೆ ಮಾಡಿಸುವೆನೆಂದರೆ ಇವರ ಹಟ! ಹಂದಿಯಂತೆ ಕೂಗುವುದು! ಹೆಂಗಸರ ಕಷ್ಟ ಯಾರಿಗೆ ಗೊತ್ತು!! ಎಂದು ಗರ್ಜಿಸುತ್ತಾ ಎದ್ದಳು ಆ ಮಹಾಕಾಳಿ! 'ನೀನು ಮಲಗಿಕೊ! ಕಾಫಿ ಎಲ್ಲಿದೆ ಹೇಳು! ನಾನೇ ತೆಗೆದುಕೊಳ್ಳುತ್ತೇನೆ!' ಎಂದು ಮೆದು ನುಡಿಯಲ್ಲಿ ಹೇಳಿದೆ. 'ಕಾಫಿ ಯಾರು ಮಾಡಿಟ್ಟಿದ್ದಾರೆ? ಏನು ಹತ್ತು ಜನ ಅಡಿಗೆಭಟ್ಟರನ್ನು ಇಟ್ಟರೆ ತಾನೆ ಕೇಳಿದಾಗ ಕಾಫಿ! ಮನೆ ತುಂಬ ಮಕ್ಕಳು. ಒಂದೊಂದಕ್ಕೆ ತಂಟೆಯುಂಟು ರಾಶಿರಾಶಿ! ನಿಮಗೇನು? ಕೈ ಬೀಸಿ ಶಾಲೆಗೆ ಹೋಗುವುದು. ಕೈ ಬೀಸಿ ಬರುವುದು. ಬಂದು ಕಾಫಿ. ಹೆಂಗುಸರೇನು ಬಿಟ್ಟಿ ಮಾಡುವುದಕ್ಕೆ ಹುಟ್ಟಿದರೆ!' ಎಂದು ಗದರಿಸಿದಳು. ಪ್ರಶ್ನೆ ದೊಡ್ಡದು–ಸ್ತ್ರೀಪುರುಷರ ಸಮಾನ ಸ್ವಾತಂತ್ರ್ಯ!

'ಕಾಫಿಯೂ ಬೇಡ; ಏನೂ ಬೇಡ' ಎಂದು ಕೋಣೆಯಿಂದ ಹೊರಬೀಳುವಷ್ಟರಲ್ಲಿ 'ಬೇಡದಿದ್ದರೆ ನಾಲಗೆ ಕಚ್ಚಿಕೊಳ್ಳುವುದು ಬೊಬ್ಬೆಹೊಡೆದು ಮಕ್ಕಳನ್ನು ಎಬ್ಬಿಸಬೇಡಿರಿ ಎಂದರೆ ಮತ್ತು ಗುರುಗುಟ್ಟುವುದು. ಪರಮಾತ್ಮ ಸ್ವಲ್ಪ ನಾಚಿಗೆಯನ್ನು ಕೊಡಲಿಲ್ಲ,' ಎಂದು ಆರ್ಭಟಿಗೊಟ್ಟಳು. ತಾಯಿಯ ಹೊಟ್ಟೆಯಿಂದ ಬಂದುದಲ್ಲವೇ? ಆ ಮಗುವೂ ಅನುಕೂಲವಾಗಿ ಎಚ್ಚತ್ತು ಅಳಲಾರಂಭಿಸಿತು. 'ಆಯಿತು; ಇನ್ನು ಮಗುವನ್ನು ಒರಗಿಸಲಿಕ್ಕೆ ಒಂದು ಜಾವ ಬೇಕು; ಅಷ್ಟಾಯಿತು ನಿಮ್ಮಿಂದ!' ಎಂದಳು. ಸರಿ! ಇನ್ನೊಂದು ಜಾವದವರೆಗೆ ನನ್ನಾಕೆ ಹಾಸಿಗೆ ಬಿಟ್ಟೇಳುವ ಆಸೆಯಿಲ್ಲವೆಂದು ಗೊತ್ತಾಯಿತು.

ಇದು ನಮ್ಮ ದಾಂಪತ್ಯ ಜೀವನದ ಒಂದು ದಿನದ ಒಂದು ಗಳಿಗೆಯ ಚಿತ್ರವೆಂದು ಭಾವಿಸಿಕೊಳ್ಳಿ! ಇದರಿಂದ ಚೆನ್ನಾದ ಪಾಠವನ್ನು ಕಲಿತೆ. ಆ ದಿನದ ಪ್ರಸಂಗದಲ್ಲಿ ನಾನೆ ಅಧಿಕ ಪ್ರಸಂಗ ಮಾಡಿದವನೆಂದು ಒಪ್ಪಿಕೊಳ್ಳದೆ ನಿರ್ವಾಹವಿಲ್ಲ. ನನ್ನ ಆಗಿನ ಸ್ಥಿತಿಯೇ ಹಾಗಿತ್ತು. ಪ್ರಪಂಚದಲ್ಲಿ ಕೊನೆಗೆ ನಮ್ಮ ಗೃಹಪ್ರಪಂಚದಲ್ಲಾದರೂ ಆಗುವ ಪ್ರತಿಯೊಂದು ತಪ್ಪಿಗೆ ನಾನೇ ಕಾರಣವೆಂದು ನನ್ನಾಕೆ ಕಲಿಸಿಬಿಟ್ಟಿದ್ದಳು. ಮನೆಯೆಮ್ಮೆ ಹಾಲು ಕೊಡದಿದ್ದರೆ, ನಾನು ತಂದ ಹಿಂಡಿಯ ದೋಷದಿಂದಾಗಿ ಹಾಗೆ ಆಗಬೇಕು. ಅನ್ನ ಸರಿಯಾಗಿ ಬೇಯದಿದ್ದರೆ ನಾನೆ ತಂದ ಅಕ್ಕಿಯ ದೋಷ! ಹೆಚ್ಚು ಬೆಂದರೆ ಕಟ್ಟಿಗೆಯ ದೋಷ. ಪಂಥೇರು ಸಕ್ಕರೆ ಒಂದೇ ದಿನ ಖರ್ಚಾದರೆ ಮಕ್ಕಳ

ನಾಲಗೆಯಾಸೆ. ಅವಕ್ಕೂ ನಾನೇ ಕಾರಣವಲ್ಲವೆ?—ಅಂತೂ ನಾನಿಲ್ಲದೆ ಮನೆಯೊಳಗೆ ಯಾವ ಅನಾಹುತವೂ ಆಗುತ್ತಿರಲಿಲ್ಲವೆಂದು ನನ್ನ ಮನಸ್ಸಿಗೂ ಖಚಿತವಾಯಿತು. ಆ ದಿನದ ಮಟ್ಟಿಗೆ ನನಗೆ ತಾಳ್ಮೆಯೇನೂ ಇರಲಿಲ್ಲ. ಮೇಲಂಗಿಯನ್ನು ಕದಲಿಸಿ ಹಾಕಿದೆ. ಮುಂಡಾಸನ್ನು ಬಿಸಾಡಿದೆ. ನನ್ನ ಸಿಟ್ಟು ಇದಕ್ಕಿಂತ ಹೆಚ್ಚು ಭಯಂಕರವಾದ ವೇಷವನ್ನು ಧರಿಸುತ್ತಿರಲಿಲ್ಲ. ನೆಟ್ಟನೆ ಮನೆಯಿಂದ ಹೊರಟು ನಡೆದವನು ಎಲ್ಲಿಗೆ ಹೋದೆನೋ ನಾನರಿಯೆ!

ಎಷ್ಟೆಂದರೂ ಸಂಸಾರಿಯ ಮನಸ್ಸಲ್ಲವೇ? ನಾವು ಭಾವಿಸಿದಷ್ಟು ಅದು ನಿಷ್ಠುರವಾಗಿರುವುದಿಲ್ಲ. ನಿಷ್ಠುರತೆಯೊಳಗೆ ಒಂದು ತಾಳ್ಮೆ; ತಾಳ್ಮೆಯೊಳಗೆ ನಿಷ್ಠುರತೆ. ಇವುಗಳಲ್ಲಿ ಯಾವುದಕ್ಕೆ ಮೇಲ್ಮೆಯೊ ಆಗ ಆ ಸ್ವಭಾವ ಸಂಸಾರಿಗೆ. ಮನೆಯಿಂದ ಹೊರಟು ಬೀದಿಗೆ ಇಳಿವಷ್ಟರಲ್ಲೆ ನನ್ನ ತಲೆಯಲ್ಲಿ ವಿಚಾರ ತರಂಗಗಳು ಎದ್ದುವು. ಹೌದು; ರುದ್ರಮ್ಮನ ಸ್ವಭಾವವು ಬಲು ಕೆಟ್ಟುದು; ಆದರೆ ಇದಕ್ಕೆ ಕಾರಣವಾರು? ನಾನೆ ಅವಳೆ? ನಾನೂ ಇರಬಹುದು ಅವಳೂ ಆಗಿರಬಹುದು. ಬೇರೆಯವರಾರೂ ಅಲ್ಲವೆಂಬುದು ನಿಶ್ಚಯ! ಒಂದು ಗಳಿಗೆ ನನ್ನ ತೊಡೆಯಿಂದ ಅಗಲಿ ಅನುಭವವಿಲ್ಲದ ಮಕ್ಕಳೋ! ಅವುಗಳಾದರೂ ತಾಯಿಯ ಸ್ವಭಾವಕ್ಕೆ ಹೊಣೆಯಲ್ಲ. ಹಾಗಾದರೆ ಮನೆಯಿಂದ ನಾನು ಹೊರಟು ಹೋದರೆ ಕಷ್ಟ ಯಾರಿಗೆ? ಹೆಂಡತಿಗಿಂತಲೂ ಹೆಚ್ಚು ಮಕ್ಕಳಿಗೆ. ಯಾವ ತಪ್ಪನ್ನು ಮಾಡಿದುದಕ್ಕಾಗಿ ಅವುಗಳಿಗೆ ಈ ಪ್ರತೀಕಾರ? ಇಲ್ಲಿ ನನ್ನ ವಿಚಾರವು ನಿಂತಿತು. ಶಾಲೆಯೊಳಗೆ ಹುಡುಗರಿಗೆ ಪ್ರಶ್ನೆ ಕೇಳಿ ಅವರ ಬಾಯಿ ಮುಚ್ಚಿಸುವುದೇ ವಿನೋದವಾಗಿದ್ದ ನಾನು—ಇಲ್ಲಿ ನಿರುತ್ತರನಾದೆ. ಹೌದು; ನಾನು ಮಾಡಿದುದು ತಪ್ಪು. ಎಳೆಪ್ರಾಯದಲ್ಲಿ ಸಲಿಗೆ ಕೊಡಬಾರದಿತ್ತು. ಅಂದೆ ಕಡಿವಾಣ ಹಿಡಿದು ಬಿಡುತ್ತಿದ್ದರೆ ಈ ಎಲ್ಲಾ ಅನರ್ಥಗಳು ಬರುತ್ತಿರಲಿಲ್ಲ. ಹುಂ! ಮಾಡುವುದೇನು? ಇನ್ನು ಉಪಾಯವಿಲ್ಲ. 'ಮಾಡಿದ್ದುಣ್ಣೋ ಮಾರಾಯ' ಎಷ್ಟು ಜನರಿಗೆ ಈ ಗಾದೆ ವೇದಾಂತ ಕಲಿಸಿದೆ? ಈಗ ಅದೇ ನನಗೂ! ಹೀಗೆ ಭಾವಿಸುತ್ತಾ ಒಂದೆರಡು ತಾಸುಗಳನ್ನು ಸ್ವಲ್ಪ ದೂರದಲ್ಲಿದ್ದ ಒಂದು ಮಾವಿನ ತೋಪಿನಲ್ಲಿ ಕುಳಿತು ಕಳೆದೆ.

ವಿಚಾರವು ಹೆಚ್ಚಿದಂತೆ, ನನ್ನ ಸ್ಥಿತಿ ಅಷ್ಟೇನೂ ಶೋಚನೀಯವಲ್ಲ; ಶೋಚನೀಯವಾಗಲು ಸಾಧ್ಯವೂ ಇಲ್ಲವೆಂದು ಭಾಸವಾಯಿತು. ಗಂಡ,

ಹೆಂಡತಿ-ಮಕ್ಕಳು ಇಷ್ಟೇ ಮಂದಿಯಿರುವ ಕುಟುಂಬದಲ್ಲಿ ನಿತ್ಯ ಸುಖವಿರುವುದು ಕೆಲವೇ ಸ್ಥಿತಿಗಳಲ್ಲಿ ಸಾಧ್ಯ. ಗಂಡ ಹೆಂಡತಿ ಇಬ್ಬರೂ ಸೌಜನ್ಯದವರಿರಬೇಕು. ಆಗ ಸುಖ. ನನ್ನ ಮನೆಯೊಳಗೆ ಹೆಂಡತಿಗೆ ಆ ಗುಣವು ಮಾತ್ರ ಲೋಪ. ಹೀಗಾದರೆ ಗಂಡನಾದರೂ ವ್ಯವಹಾರ ನಿಪುಣನಾಗಿರಬೇಕು. ವ್ಯವಹಾರವೆಂದರೆ, ಬಂದವರಿಗೆ ನಾಲ್ಕು ಉಪಚಾರ ವಾಕ್ಯಗಳನ್ನಾಡಿ ಕಳುಹಿಸುವುದೆಂಬ ಅಭಿಪ್ರಾಯವಲ್ಲ. ಬಂದವರು ಕೆಲವೇ ದಿವಸ ಇರುತ್ತಾರೆ ಹೋಗುತ್ತಾರೆ. ಮನೆಯೊಳಗೆ ಇರುವವರಾದರೂ ಬದುಕುತ್ತಿರಬೇಕಲ್ಲವೆ? ಹಾಗಾದರೆ ಹೆಂಡತಿಯು ಹೇಳಿದಂತೆ ಕೇಳದೆ ಗತ್ಯಂತರವೇನು? ಎರಡು ವ್ಯಕ್ತಿಗಳು ಒಂದಾಗಿ ಒಡಗೂಡಿ ಬಾಳವುದೆಂದರೆ ಸುಲಭವಲ್ಲ. ಪರಸ್ಪರ ಗುಣಗಳನ್ನು ಕಲಿತುಕೊಳ್ಳಬೇಕು. ಹೆಂಡತಿ ಗಂಡನ ಸ್ವಭಾವವನ್ನರಿಯದಿದ್ದರೆ ಗಂಡನಾದರೂ ಆಕೆಯ ವಿಶೇಷತೆಗಳನ್ನು ತಿಳಿದುಕೊಳ್ಳಬೇಡವೆ? ಗೃಹ ಪ್ರಪಂಚದಲ್ಲಿರಬೇಕಾದಷ್ಟು ಪ್ರತ್ಯುತ್ಪನ್ನ ಮತಿತ್ವವು ಬೇರೆಲ್ಲಿಯೂ ಅವಶ್ಯ ಬೀಳುವುದಿಲ್ಲ ಎಂಬುದು ನನಗೆ ವಿಚಾರಿಸಿದಂತೆ ಮಂದಟ್ಟಾಯಿತು. ನನ್ನಲ್ಲಿ ಆ ಗುಣ ಇಲ್ಲವೆಂದಲ್ಲ! ಉಂಟು. ಶಾಲೆಯ ಕೋಣೆಯೊಳಗೆ ವಿದ್ಯಾರ್ಥಿ ವೃಂದವನ್ನು ವಶಮಾಡುವ ಉಪಾಯವನ್ನು ಬಲ್ಲೆ. ಮನೆಯೊಳಗೆ ಯಜಮಾನಿಯನ್ನು ಒಲಿಸುವ ವಿದ್ಯೆಯನ್ನು ಕಲಿಯದಿದ್ದುದೇ ಇದುವರೆಗಿನ ಅಪರಾಧವೆಂದು ಭಾವಿಸಿಕೊಂಡೆ. ವಿಚಾರಿಸಿದರೆ, ಅನೇಕ ಶಾಸ್ತ್ರಸಾರಗಳನ್ನು ಕುಡಿದವರಿಗೆ ಇದೊಂದು ಕಷ್ಟವೇನೂ ಅಲ್ಲ. ಕೆಲವು ನಿಯಮಗಳನ್ನನುಸರಿಸಿಕೊಂಡರೆ ಸರಿ. ಎಲ್ಲವೂ ನೆಟ್ಟಗಾಗಿರುವುದು. ಇಂತಹ ಉಪಾಯವು ನನ್ನಲ್ಲಿರುವಾಗ, ಹೆಂಡತಿಯ ಮುನಿಸಿಗೆ ಹೆದರಿ ಮನೆಬಿಟ್ಟು ಹೊರಟು ಬೀದಿಯಲ್ಲಿ ಅಲೆದಾಡುವ ನನ್ನಂತಹ ಮೊದ್ದು ಪ್ರಾಣಿಗಳು ಮತ್ತೆಲ್ಲಿವೆ?

ಇಂತಹ ದೃಢ ನಿಶ್ಚಯವನ್ನು ಮಾಡುತ್ತಾ ಮಧ್ಯರಾತ್ರಿಯ ವರೆಗೆ ಸಮಯ ಕಳೆದೆ. ಆಗ ತಾನೆ ಚಂದ್ರೋದಯವಾಗಿದ್ದಿತು. ನನ್ನ ಜೀವನಾರಣ್ಯದ ಕಗ್ಗತ್ತಲೆಯಲ್ಲಿ ಅಂದೆ ಚಂದ್ರೋದಯವಾಯಿತೆಂದು ಭಾವಿಸಿಕೊಂಡು, ಹಿಂದಿನ ನಿರಾಶೆಗಳನ್ನೂ, ಕಷ್ಟಗಳನ್ನೂ ನಿಟ್ಟುಸಿರಿನಿಂದ ತೇಲಿಸಿಬಿಟ್ಟು ಮನೆಯ ಕಡೆಗೆ ಹೊರಟುಬಿಟ್ಟೆ.

ಮನೆಗೆ ಬರುವಾಗ ರಾತ್ರಿ ಒಂದು ಗಂಟೆಯಾಗಿದ್ದಿತು. ಮನೆಯಲ್ಲಿ ಎಲ್ಲೆಲ್ಲಿಯೂ ನಿಶ್ಶಬ್ದ. ಆದರೂ ನನ್ನಾಕೆಯ 'ಕಠೋರ ಸ್ವರ'—ಅಲ್ಲ ಕೋಮಲ ಸ್ವರವು (ಕಠೋರವೆಂದು ಹೇಳುವುದು ನನ್ನ ಮುಂದಣ ಕರ್ತವ್ಯ ಪದ್ಧತಿಗೆ ವಿರೋಧ) ಅಲ್ಲಲ್ಲಿ ಗೋಡೆಯ ಸಂದುಗಳಲ್ಲಿ, ಕೋಣೆಯ ಮೂಲೆಗಳಲ್ಲಿ, ಅಡಿಗೆ ಮನೆಯ ಬಾಗಿಲೆಡೆಯಿಂದ—ಪ್ರತಿಧ್ವನಿತವಾಗುತ್ತಿದ್ದಿತು. ಒಮ್ಮೊಮ್ಮೆ ಉದ್ದವಾದ ಗೊರಕೆಯ ಶಬ್ದವು ರಾತ್ರಿಯ ಶಾಂತಿಯನ್ನು ಗರಗಸದಂತೆ ಕೊರೆಯುತ್ತಿದ್ದಿತು. ಅಲ್ಲದೆ ಮತ್ತೇನೂ ಇಲ್ಲ.

ಬಾಗಿಲ ಬಳಿಯಲ್ಲಿ ನಿಂತೆ; ಯೋಚಿಸಿದೆ. ಹೆಂಡತಿಯನ್ನು ಎಬ್ಬಿಸಲೇ? ಬೇಡವೇ? ಎಂದು. ಎಬ್ಬಿಸಿದರೆ ಮಕ್ಕಳು ಎದ್ದಾವು. ಮಕ್ಕಳನ್ನೆಬ್ಬಿಸಿದ ಅಪರಾಧಕ್ಕಾಗಿಯೇ ನನಗೆ ಕಾಫಿಯಿಲ್ಲವೆಂದಾದುದು; ಮನೆ ಹೊರಡಬೇಕಾದುದು ತಪ್ಪೆಂದು ತಿಳಿದು ಅದನ್ನೇ ಮಾಡುವುದೇ? ಆ ದಿನ ರಾತ್ರಿಯು ನೆಲದ ಮೇಲೆ ಕಳೆದುಹೋಯಿತು. ಬೆಳಗಾಗುವಾಗ ಸ್ವಲ್ಪ ನಿದ್ದೆ ಹತ್ತಿ ಏಳುವಾಗ ಗಂಟೆ ಏಳು! ನನ್ನ ಬಳಿಯಲ್ಲೇನೋ 'ಗರಗರ,' ಶಬ್ದವಾಯಿತು. ಎಚ್ಚರವಾಯಿತು. ನೋಡುತ್ತೇನೆ ನನ್ನ ಹೆಂಡತಿ ರುದ್ರಮ್ಮ.

'ಏನ್ರೀ! ಹೀಗೆಲ್ಲಾ ತಮಾಷೆ, ಕೈಹಿಡಿದ ಹೆಂಡತಿಯನ್ನು ಬಿಟ್ಟು ಬಿಕಾರಿಯಂತೆ ಓಡುವುದು?'

'ಹಾಗೇನೂ ಇಲ್ಲ ರುದ್ರಮ್ಮ! ಏನೋ ಆಗಿ ಹೋಯಿತು.'

'ನಿಮಗೆ ಯಾವಾಗಲೂ ಹಾಗೆಯೇ ಆಗುವುದು.'

'ಇನ್ನು ಮುಂದೆ ಹಾಗೆ ಆಗುವುದಿಲ್ಲ ನೋಡು!'

'ಹಾಗಾದರೆ ಹೋಗಿ ಒಳಗೆ! ತೊಟ್ಟಿಲಲ್ಲಿ ಕೂಸು ಅಳುತ್ತಿದೆ. ಸ್ವಲ್ಪ ತೂಗಿರಿ. ಅಲ್ಲೇ ಜೊಂಪು ಹತ್ತಿ ಮಲಗೀತು! ಸ್ವಲ್ಪ ನೀರಿಟ್ಟು ಕಾಫಿಯನ್ನಾದರೂ ಮಾಡುತ್ತೇನೆ.'

ಬದುಕಿದೆ. ಕಾಫಿ ದೊರೆಯುವುದಂತೆ! ತಾನಾಗಿ ತಯಾರಿಸುತ್ತೇನೆಂದಳು. ದೈವವು ಕಣ್ತೆರೆಯಿತೇ?—ಆ ದಿನ ಶಾಲೆಯ ಸಮಯಕ್ಕೆ ೫ ನಿಮಿಷ ಮುಂಚೆ ಕಾಫಿ ಸಿಕ್ಕಿದ್ದಿತು. ಶಾಲೆಗೆ ಹೋಗುವಾಗ ಹುಡುಗರು ಕ್ಲಾಸಿಗೆ ಆಗ ತಾನೇ ಪ್ರವೇಶಮಾಡಿದ್ದರು. ಬೆಳಿಗ್ಗೆ ಮಕ್ಕಳನ್ನಾಡಿಸುತ್ತಾ ಕುಳಿತಿದ್ದರೂ ಶಾಲೆಗೆ ಹೋಗುವಾಗ ತಡವಾಗಿರಲಿಲ್ಲ.

ನನ್ನ ಪುಣ್ಯೋದಯ! ಅಂದಿನಿಂದ ಹೆಂಡತಿಗೆ ಮುನಿಸಿಲ್ಲ. ನನಗೂ ಅವಳಿಗೂ ಬಿರುಮಾತುಗಳಿಲ್ಲ. ಬೆಳಗ್ಗೆ ಎದ್ದೊಡನೆ ಮಕ್ಕಳ ಆರೈಕೆ ನನಗೆ. ಚಿಕ್ಕ ಪ್ರಾಯದಲ್ಲಿ ಜಾಗ್ರತೆ ತೆಗೆದುಕೊಂಡರೆ ತಾನೆ ದೊಡ್ಡವರಾಗುವಾಗ ಮಕ್ಕಳು ಶುಚಿಯಾಗಿರುವರು, ಚುರುಕಾಗುವರೆಂಬ ತತ್ವದಿಂದ—ಅವುಗಳ ಮುಖ ತೊಳೆಯುವುದು, ಮಾಯಿಸುವುದು, ಉಣ್ಣಿಸುವುದು, ತಿನ್ನಿಸುವುದು, ಇವೆಲ್ಲವನ್ನೂ ನಾನೇ ಮಾಡುತ್ತಿದ್ದೆ. ಮಧ್ಯೆ ಮಧ್ಯೆ ಬಿಡುವಿದ್ದಾಗ ಪಾಕ ಶಾಲೆಯ ಸಂದರ್ಶನ ಮಾಡುತ್ತಿದ್ದೆ. ಬಚ್ಚಲುಕೊಟ್ಟಗೆಯಲ್ಲಿ ಅಗ್ನಿಪ್ರತಿಷ್ಠೆ ಮಾಡುತ್ತಿದ್ದೆ. ಮನೆಯನ್ನು ಗುಡಿಸಿ, ಸಾರಿಸಿ, ಚೊಕ್ಕಟವಾಗಿಡುತ್ತಿದ್ದೆ. ಈ ಮೊದಲೆ ಹೆಂಗುಸರ ಅಥವಾ ನನ್ನಾಕೆಯ, ಜೀವನದ ಗುಣಗ್ರಹಣ (ಎಪ್ರಿಶಿಯೇಟ್) ಮಾಡುವಷ್ಟು ಸಹೃದಯತೆ ನನ್ನಲ್ಲಿ ಉಂಟಾದುದರಿಂದ ನನ್ನಾಕೆಗೆ ಬಾಯಾರಿಕೆಯಾದಾಗ ಮಾತ್ರ ನನಗೆ ಬಾಯಾರಿಕೆ. ಆಕೆಗೆ ಹಸಿವೆಯಾದರೆ ನನಗೂ ಹಸಿವೆ. ಆಕೆ ಸುಮ್ಮನೆ ಕುಳಿತರೆ ಮಾತ್ರ ನನಗೂ ವಿಶ್ರಾಂತಿ. ಸಿನೇಮಗಳಿಗೆ ನಾಟಕಗಳಿಗೆ ಒಮ್ಮೊಮ್ಮೆ ಹೋಗುತ್ತಿದ್ದೆವು. ಆ ದಿನಗಳಲ್ಲಿ ಮಾತ್ರ ಹೆಂಡತಿಗೂ—ನನಗೂ ಬೇಗನೇ ಹಸಿವೆ! ಹೊರಡುವುದಕ್ಕೆ ೫ ನಿಮಿಷಕ್ಕೆ ಮುಂಚೆಯಾದರೂ ಮಕ್ಕಳ ಮಂದೆಯನ್ನೆಲ್ಲಾ ಹೊರಡಿಸಿ ಅಂಗಳಕ್ಕಿಳಿದುಬಿಡುತ್ತಿದ್ದೆ. ನನ್ನಾಕೆ ಸೀರೆಯುಟ್ಟು, ಆಭರಣ ತೊಟ್ಟು, ಅಷ್ಟರಲ್ಲಿ ಹೊರಟುಬರುತ್ತಿದ್ದಳು. ಬೀದಿಯಲ್ಲಿ ಹೋಗುವಾಗ ಮಕ್ಕಳು ನಡೆಯುವುದಿಲ್ಲವೆಂದು ಚಂಡಿ ಹಿಡಿದರೆ ಒಂದನ್ನು ಹೆಗಲ ಮೇಲೆ ಒಂದನ್ನು ಕೌಂಕುಳೆಡೆ ಇರಿಸಿಕೊಂಡು—ಮಕ್ಕಳ ಶೇಷ ಮತ್ತೂ ಇದ್ದರೆ ಹೆಂಡತಿಯು ಸಹಾಯ ಮಾಡುತ್ತಿದ್ದಳು. ಇತ್ತಿತ್ತ ನನ್ನಾಕೆಗೆ ಮುನಿಸೇ ಇಲ್ಲ. ಎಂತಹ ಶಾಂತ ಮುಖ ಮುಖಮುದ್ರೆ! ನನಗೆ ತಾಂಬೂಲ ಸೇವಿಸುವ ಪದ್ಧತಿಯಿರಲಿಲ್ಲ. ಪೇಟೆಯಿಂದ ವೀಳ್ಯ ತರುವುದಕ್ಕೆ ಮರೆತುಬಿಟ್ಟಾಗ ಮಾತ್ರ ಆಕೆಗೆ ಸ್ವಲ್ಪ ಸಿಡುಕು. ಇದಕ್ಕೂ ಎಡೆಯಾಗದಂತೆ ನಾನೇ ತಾಂಬೂಲ ಸೇವನೆಯ ಪದ್ಧತಿಯನ್ನು ಕಲಿತುಕೊಂಡೆ. ವರ್ಷವೇರಿದಂತೆ ಮಕ್ಕಳ ಸಂಖ್ಯೆಯೇರುತ್ತಿದ್ದ ಸಂಸಾರಿ ಮಾನವರಲ್ಲಿ ಹಲವರು ನಮ್ಮ ಮನೆಯ ಶಾಂತಿಸುಖಗಳನ್ನು ಕಂಡು ಕೇಳಿ ಮತ್ಸರ ಪಡುತ್ತಿದ್ದರು. ಈಗ ರುದ್ರಮ್ಮನ ಹೆಸರನ್ನು ಕೇಳಿದರೆ ನನ್ನ ಮನಶ್ಚಕ್ಷುವಿಗೆ ಶಾಂತಿದೇವಿಯೇ ಪ್ರತ್ಯಕ್ಷಳಾಗುತ್ತಿದ್ದಾಳೆ!

---



## ಶ್ರೀ ಯಸ್. ವೆಂಕಟರಾಜರು, ಉಡುಪಿ

ಇವರು ಕವಿಗಳು ಮತ್ತು ಕತೆಗಾರರು. 'ಭಾವತರಂಗ ಮಾಲೆ'ಯ ಸಂಪಾದಕರು. ಇವರ ಕವಿತೆಗಳೂ ಕತೆಗಳೂ ಆಗಾಗ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುತ್ತವೆ. ಮಂಗಳೂರು ಮಿತ್ರಮಂಡಳಿಯ 'ನಮ್ಮ ಕತೆಗಳು' ಗ್ರಂಥದಲ್ಲಿ ಪ್ರಕಟವಾದ 'ಹಣೆಬರಹ'ವು ಒಂದು ಚಲೋ ಕತೆ ಜೀವನದಲ್ಲಿ ಸಾಮಾನ್ಯ ವಾಗಿ ಘಟಿಸತಕ್ಕ ವಿಷಯಗಳೇ ಇವರ ಕಥಾವಸ್ತುಗಳು. ಶೈಲಿಯು ಸುಂದರವಾಗಿ ಭಾವಪೂರ್ಣವಾಗಿದೆ. ಆದರೆ ಕೆಲವು ಬಾರಿ ಕತೆಯ ಬಿಗುವು ತಪ್ಪಿಹೋಗುವುದುಂಟು. ಇವರ ವಸ್ತುವಿನಲ್ಲಿ ನಾವೀನ್ಯವೂ ಕಲ್ಪನೆಯ ವೈಖರಿಯೂ ಕಡಿಮೆ ಯಾದರೂ ಹೇಳುವ ರೀತಿಯಲ್ಲಿ ಒಂದು ವೈಶಿಷ್ಟ್ಯವಿದೆ. ಕಥಾಲೇಖನದ ಮರ್ಮವು ಇವರಿಗೆ ಬೋಧೆಯಾಗಿದೆ.

# ಹಾಗಾದರೆ

ಯಸ್. ವೆಂಕಟರಾಜರು

೧

'ನಡೆ ನೋಡೋಣ ಆಚೆ! ಮನೆಯಿಂದ ಹೊರಗೆ ಕಾಲಿಡಲಿಕ್ಕಿಲ್ಲ; ಸರಿ! ಎದುರು ಬಂದಾಯ್ತು ಬೆಕ್ಕಿನ ಹಾಗೆ!' ಎಂದು ರಾಮಮೋಹನನು ಭಿಕ್ಷುಕಿಯೊಬ್ಬಳನ್ನು ಗದರಿಸುತಿದ್ದನು.

ಶನಿವಾರವಾದುದರಿಂದ ಮೋಹನನಿಗೆ ಶಾಲೆಗೆ ಹೋಗುವ ಕೆಲಸವೊಂದಿದ್ದಿರಲಿಲ್ಲ, ಆದುದರಿಂದ ಹೊತ್ತುಗಳೆಯಲೆಂದು ಶ್ರೀಧರನ ಮನೆಗೆ ಹೊರಟಿದ್ದನು. ಅಷ್ಟರಲ್ಲಿ ಭಿಕ್ಷುಕಿಯೊಬ್ಬಳು ಇದಿರು ಬಂದೇ ಬಿಟ್ಟಳು. ಅದರಿಂದ ಅವನಿಗೇನೂ ಬಾಧಕವಿರಲಿಲ್ಲ. ಕಾರಣ—ಆ ಹಾಳು ಪುರಾಣಗಳ ಶಕುನ ಶಾಸ್ತ್ರಗಳನ್ನು ನಂಬುವಷ್ಟು ಹಳೆಯ ಗೊಡ್ಡು ಅವನದ್ದಿರಲಿಲ್ಲ. ಆದರೂ ಮೋಹನನು ಭಿಕ್ಷುಕರ ಆಜನ್ಮ ದ್ವೇಷಿ. ಆದುದರಿಂದಲೇ ಅವನು ಹಲವೊಮ್ಮೆ, ಈ ಭಾರತವರ್ಷವು ತನ್ನ ಅಧೀನದಲ್ಲಿರುತ್ತಿದ್ದರೆ, ಇಂತಹ ಕೆಲಸಕ್ಕೆ ಬಾರದ ಮೈಗಳ್ಳ ತಿರುಕರನ್ನು ಅರಬೀ ಸಮುದ್ರಕ್ಕೆ ತಳ್ಳಿ ಬಿಡುತ್ತಿದ್ದೆನೆಂದು ದರ್ಪದಿಂದ ನುಡಿಯುತಿದ್ದನು.

ಭಿಕ್ಷುಕಿಯಾದರೂ ಅವನ ನುಡಿಯಿಂದ ಒಂದು ಕೂದಲೆಳೆಯಷ್ಟಾದರೂ ಹಿಂದೆ ಸರಿಯಲಿಲ್ಲ. ಹಾಗೆ ಹಿಂದೆ ಸರಿಯುವಷ್ಟು ಮರ್ಯಾದೆಯನ್ನು ಹೊತ್ತಿರುತಿದ್ದರೆ, ಅವಳು ಈ ಪ್ರಪಂಚದಲ್ಲಿ ಬದುಕುತ್ತಲೇ ಇರಲಿಲ್ಲ.

'ಸ್ವಾಮಿ! ಏನು ಮಾಡುವುದು? ಹೊಟ್ಟೆಗಾಗಿ........'

'ಹೊಟ್ಟೆ! ಕೆಲಸ ಮಾಡಲು ಮೈ ಬಗ್ಗುವುದಿಲ್ಲ; ಮತ್ತೆ ಬೇಡುವುದು. ಬಂದ ಹಾಗೆ ಕೊಡಲಿಕ್ಕೇನು ನಿನ್ನ ಅಪ್ಪಂದಿರು ಇಲ್ಲಿ ಗಂಟು ಕಟ್ಟಿಟ್ಟಿರುವರೆ?'

'ಕೆಲಸ ಮಾಡಲು ಕೂಡುವುದಿಲ್ಲ ಸ್ವಾಮಿ!'

'ಹಾಗಾದರೆ ಹೋಗು; ಅಲ್ಲೇ ಆಸ್ಪತ್ರೆಯಿದೆ.'

'ಸ್ವಲ್ಪ ಧರ್ಮಮಾಡಿ ಅಯ್ಯಾ! ಶನಿವಾರ!'

'ಹೌದು. ಬೇಡುವವರಿಗೆ ಯಾವಾಗಲೂ ಶನಿವಾರವೇ! ಕೊಡುವವರಿಗೆ ಮಾತ್ರ ಯಾವಾಗಲೂ ಶುಕ್ರವಾರ!'

ಮೋಹನನು ಮಾತಿನಲ್ಲೇನೋ ಬಹಳ ಚತುರ. ಕೋಲೇಜಿನ ತರ್ಕ ಸಭೆಯಲ್ಲಿ ಎಷ್ಟೆಷ್ಟೋ ವಾದಿಗಳನ್ನು ಸದೆಬಡಿದು, ವಿಜಯಭೇರಿಯನ್ನು ಮೊಳಗಿಸಿದ ಮಹಾಪ್ರವೀಣ! ಆದುದರಿಂದ ಇನ್ನೂ ಹೆಚ್ಚಿನ ಅಮೂಲ್ಯ ಶಬ್ದಗಳನ್ನು ಖರ್ಚು ಮಾಡಬೇಕೆಂದು ಹವಣಿಸುತ್ತಿದ್ದಾಗಲೇ ಭಿಕ್ಷುಕಿಯು ಹೊರಟು ಹೋದುದನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು. ಅಷ್ಟು ಸುಲಭವಾಗಿಯೇ ಬೇಡುವವರು ತಮ್ಮ ಸೋಲನ್ನು ಒಪ್ಪಿಕೊಂಡು ಹೋದುದನ್ನು ಅವನಿಷ್ಟರ ತನಕ ಕಂಡಿರಲಿಲ್ಲ. 'ಹೇಗೂ ಇರಲಿ; ರಗಳೆಯೊಂದು ತೊಲಗಿತಷ್ಟೆ' ಎಂದು ಅವನು ಹೊರ ಹೊರಟನು.

ಅಷ್ಟರಲ್ಲಿ 'ಏನು ಮೋಹನ! ಕೊನೆಗೆ ನೀನೇ ಜಯಿಸಿದೆಯೆ? ಭೇಷ್!' ಎಂದು ಶ್ರೀಧರನೇ ಇದಿರು ಬರುತಿದ್ದನು.

ಮೋಹನನು ನಕ್ಕು 'ಅದು ಹೋಗಲಿ. ನೋಡು! ನಿಮ್ಮ ಮನೆಯ ಕಡೆಗೇ ಹೊರಟಿದ್ದೆ.'

'ಏಕೆ?'

'ಸುಮ್ಮನೆ. ಇಲ್ಲಿ ಕುಳಿತು ಬೇಸರವಾಯ್ತು.'

'ಹಾಗಾದರೆ ಹೋಗೋಣ' ಎಂದು ಬೀದಿಗಿಳಿದು ಪುನಃ ಹಿಂದಿರುಗಿ ಶ್ರೀಧರನು 'ನೋಡು; ಅದಾರ ಗಾಡಿ?' ಎಂದನು.

ಕುದುರೆಯ ಗಾಡಿಯೊಂದು ಇದಿರು ಬರುತಿದ್ದಿತು. ಅದರಲ್ಲಿ ಕುಳಿತವಳೆಂದರೆ ಸುಮಾರು ಹದಿನೈದು ವರ್ಷ ವಯಸ್ಸಿನ ಹುಡುಗಿಯೊಬ್ಬಳು. ಹುಡುಗಿಯೇನೋ ಬಹಳ ಚಲುವೆ.

ಮೋಹನನು ಮುಗುಳು ನಗೆಯಿಂದ 'ನನಗೇನು ಗೊತ್ತು?' ಎಂದನು.

'ಓಹೋ! ಗೊತ್ತಾಯಿತು. ಏನೋ! ಇಷ್ಟು ಬೇಗನೆ ಹೆಸರು ಹೇಳಲು ಕೂಡ ನಾಚುಗೆ! ಅಥವಾ ಅದನ್ನು ಕೇಳುವ ಅಧಿಕಾರವು ನಮಗಿಲ್ಲವೆ?' ಎಂದು ಶ್ರೀಧರನು ಗೆಳೆಯನ ಬೆನ್ನು ತಟ್ಟಿ ನಗುತಿರಲು ಗಾಡಿಯು ಅವರನ್ನು ದಾಟಿ ಮುಂಬರಿಯಿತು.

ಮೋಹನನು ಅವನ ಮಾತಿಗೆ ಉತ್ತರ ಕೊಡದೆ 'ನೋಡಲ್ಲಿ! ಆ ಬೇಡುವವಳು!' ಎಂದು ಬೆಟ್ಟುತೋರಿಸಿದನು.

ಭಿಕ್ಷುಕಿಯು ಹುಚ್ಚಿಯಂತೆ ಬೀದಿಯ ಮಧ್ಯದಲ್ಲಿ ನಿಂತು ಗಾಡಿಗೆ ದಾರಿಬಿಡದೆ, ನಟ್ಟಗಣ್ಣಿನಿಂದ ಹುಡುಗಿಯನ್ನೇ ನೋಡುತ್ತಿದ್ದಳು—ಗಾಡಿಯಂತೂ ಮುಂದೆ ತೆರಳಿತು. ಅವಳು ಮಾತ್ರ ಅದರ ಬೆನ್ನುಬಿಡದೆ ಓಡತೊಡಗಿದಳು.

'ನೋಡಲಾಗದೆ? ಅದೇನು ನಿನ್ನ ಮೂಲಿ ಹಕ್ಕೆ? ಪಾಪ! ಅವಳು ಇಂದಿನ ತನಕ ಅಂತಹ ಹುಡುಗಿಯರನ್ನು ನೋಡಿಲ್ಲವೆಂದು ತೋರುವುದು.' ಎಂದು ಶ್ರೀಧರನು ಮೋಹನನನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

೨

ಹಂಪನಕಟ್ಟೆಯ 'ಆನಂದಕುಟೀರ'ದಲ್ಲಿಂದು ಬಹು ಗದ್ದಲ. ಆನಂದ ರಾಯರು ತಮ್ಮ ಅಪಾರವಾದ ಧನರಾಶಿಯನ್ನು ವಿನಿಯೋಗಿಸಲು ಮುಂದಿನ ಜೀವಿತದಲ್ಲಿ ಇನ್ನಿಂತಹ ಸುಸಂದರ್ಭವು ದೊರೆಯಲಾರದೆಂದು ಬಗೆದು, ಏಕ ಮಾತ್ರ ಪುತ್ರಿ ಸರಳೆಯ ವಿವಾಹಕಾರ್ಯದಲ್ಲಿ ಧಾರಾಳವಾದ ಮನಸ್ಸಿನಿಂದ ಕೈಯನ್ನು ಸಂಪೂರ್ಣವಾಗಿ ಸಡಿಲು ಬಿಟ್ಟಿರುವರು. ಕುಟೀರದಲ್ಲಿ ಎತ್ತ ನೋಡಿದರತ್ತ ಅರಳಿದ ನಗುಮೊಗಗಳು. ಅವುಗಳ ಮಧ್ಯದಲ್ಲಿ ಮೆರೆಯುವ ತೇಜಃಪೂರ್ಣವಾದ ಮುಖವೆಂದರೆ ನಮ್ಮ ಶ್ರೀಧರನದೇ! ನಚ್ಚಿನ ಗೆಳೆಯನಾದ ಮೋಹನನ ಮದುವೆಯಂತಹ ಸಮಾರಂಭದ ಸಮಯದಲ್ಲೂ ಒಂದಿಷ್ಟು ದರ್ಪದಿಂದ ಅತ್ತಿತ್ತ ಅಡ್ಡಾಡದಿರುತಿದ್ದರೆ, ನಿಜವಾಗಿಯೂ ಅವನ ಮೇಲೆ ಮಹತ್ತಾದ ಅಪವಾದದ ಹೊರೆಯೇ ಬಂದು ಬೀಳುತಿದ್ದಿತು. ಅಂತಹ ಕ್ಷುದ್ರ ಅಪವಾದವನ್ನು ಹೊರುವಷ್ಟರ ಅಪರಾಧಕ್ಕೆ, ನಮ್ಮ ಶ್ರೀಧರನೆಂದಿಗೂ ಅವಕಾಶವನ್ನು ಕೊಡಲಾರನು.

ಸಾಮಾನ್ಯತಃ ಐಶ್ವರ್ಯವಂತರ ಮದುವೆಯೆಂದರೆ ದುಂದುಗಾರಿಕೆಯ ಮೂಲ. ಅದರಲ್ಲಿಯೂ ಉಭಯ ಪಕ್ಷೀಯರೂ ಸಮಾನರಿದ್ದು ಸ್ಪರ್ಧೆಗೆ ಪ್ರಾರಂಭಿಸಿದರೆಂದರೆ ಮತ್ತೇನು? ಇಂತಹ ಸಂದರ್ಭದಲ್ಲಿ, ಒಂದಿಷ್ಟಾದರೂ ಸ್ವಪ್ರಯೋಜನವನ್ನು ಕಲ್ಪಿಸಿಕೊಳ್ಳುವ ಹವಣಿಕೆಯಿಂದ ಭಿಕ್ಷುಕರ ತಂಡವೇ ಬಂದು ಬೀಡುಬಿಟ್ಟು ಹೊರಬಾಗಿಲಲ್ಲಿ ಕಾಯುತಿರುವುದು ಸ್ವಾಭಾವಿಕವೇ ಸರಿ!

ಸಂಜೆಯ ಸಮಯ. ತಿರುಕರೆಲ್ಲರೂ ತಮ್ಮ ಪಾಲಿನ ತಿರುಪೆಗಳನ್ನು ಪಡೆದು ತೆರಳಿರುವರು. ಆದರೆ ಭಿಕ್ಷುಕಿಯೊಬ್ಬಳು ಮಾತ್ರ ವ್ಯಸ್ತಚಿತ್ತಳಾಗಿ

ನಿಂದಿರುವಳು. ಗಂಭೀರಗಳಾದ ಯೋಚನೆಯ ಆಲೆಗಳು ಅವಳ ತಲೆಯನ್ನು ಕದಡಿಬಿಟ್ಟಿರುವುವು. ಹಲವೊಮ್ಮೆ ಅವಳು ಕುಟೀರದ ದ್ವಾರದ ಕಡೆಗೆ ಧಾವಿಸುವಳು. ಪುನಃ ಏನೋ ಯೋಚಿಸಿ ಹಿಂದಿರುಗುವಳು. ವಧುವನ್ನು ಕಂಡೊಡನೆಯಂತೂ ಉನ್ಮಾದಿನಿಯಂತೆ ಉದ್ವಿಗ್ನಳಾಗಿ ಒಮ್ಮೆ ನಗುವಳು. ಪುನಃ ಯೋಚಿಸಿ ಅಳುವಳು. ಅಂತೂ ಹೆತ್ತ ತಾಯಿಯೇ ಆಗಲಿ, ತನ್ನ ಮಗಳ ಮದುವೆ ಸಂದರ್ಭದಲ್ಲಿಯೂ ಇಷ್ಟು ಕಾತರಗೊಂಡಿರಲಾರಳೆಂದು ತೋರುವದು.

ಕತ್ತಲಾಯಿತು. ರಾತ್ರಿಗೆ ಸಂದ ವಿವಾಹದ ಅಂಗಗಳು ಒಂದೊಂದಾಗಿ ಪ್ರಾರಂಭಿಸಿದುವು. ಬ್ರಾಹ್ಮಣವರ್ಗದ ಮಂತ್ರಘೋಷವು ವಾದ್ಯಧ್ವನಿಗಿಂತಲೂ ಇಮ್ಮಡಿಸಿ ಕೇಳುತಿದ್ದಿತು. ಭಿಕ್ಷುಕಿಯು ಅದನ್ನು ಕೇಳುತಿದ್ದಂತೆ ದೇಹದೆಚ್ಚರವಿಲ್ಲದೆ ಒಳಗೆ ನುಗ್ಗಿದಳು. ಅದೆಂತಹ ಭವ್ಯವಾದ ನೋಟ! ವಧೂವರರು ಏಕಾಸನದಲ್ಲಿ ಕುಳಿತಿರುವರು. ಹೆಂಗಳೆಯರು ಹಾಡುತ ಆರತಿಯನ್ನು ಬೆಳಗುತಿರುವರು. ಆ ದೃಶ್ಯವನ್ನು ಎಷ್ಟೊಂದು ಕಂಡರೂ ಭಿಕ್ಷುಕಿಯ ಹೃದಯವು ತಣಿಯಲಾರದು. ನಿಟ್ಟುಸಿರು ಬಿಡುತ್ತ ಕೊನೆಗೆಂತೋ ಅಲ್ಲಿಂದ ಹೊರಟಳು ಎಲ್ಲಿಗೆಂಬುದು ಅವಳಿಗೇ ತಿಳಿಯದು. ದೇಹದೆಚ್ಚರವಿಲ್ಲದೆ ಮುಂದೆ ಸಾಗಿದಳು. ಅದೊಂದು ಘನವಾದ ಪದಾರ್ಥವು ಅವಳನ್ನು ಕೆಡಹದಿರುತಿದ್ದರೆ ಅವಳ ಅಂದಿನ ಪ್ರಯಾಣವು ಅಷ್ಟರಲ್ಲೇ ಕೊನೆಗಾಣುವಂತಿರಲಿಲ್ಲ!

೩

ಭಿಕ್ಷುಕಿಯು ಕಣ್ದೆರೆದು ನೋಡಿದಾಗ, ಅಪರಿಚಿತವಾದ ಸುಸಜ್ಜಿತವಾದ ಕೋಣೆಯಲ್ಲಿ ಹಾಸುಗೆಯ ಮೇಲೆ ಮಲಗಿರುವಂತೆ ಭಾಸವಾಯಿತು. ಹತ್ತಿರದಲ್ಲೇ ಪರಿಚಾರಿಕೆಯೊಬ್ಬಳು ಕುಳಿತು ಶುಶ್ರೂಷೆಯನ್ನು ಮಾಡುತಿರುವಳು. ಅವಳು ನಿಷೇಧ ಮಾಡುತಿದ್ದರೂ, ಭಿಕ್ಷುಕಿಯು ಎದ್ದು ಕುಳಿತುಕೊಳ್ಳಲು ಯತ್ನಿಸಿದಳು, ಸಾಧ್ಯವಾಗಲಿಲ್ಲ. ಬಲ ಪಾರ್ಶ್ವವು ಸಂಪೂರ್ಣವಾಗಿ ಗಾಸಿಗೊಂಡಿರುವುದು. ಬಲ ತೋಳು ಜೋಲುತಿರುವುದು. ದೇಹದಲ್ಲಿ ಬಹಳ ನಿತ್ರಾಣ. ಮಾತನಾಡಲು ಶಕ್ತಿಯಿಲ್ಲ. ಆದರೂ ಕ್ಷೀಣ ಸ್ವರದಿಂದ 'ನೀನಾರಮ್ಮ? ನಾನಿಲ್ಲಿಗೆ ಹೇಗೆ ಬಂದೆನು?' ಎಂದು ಕೇಳಿದಳು.

ಪರಿಚಾರಿಕೆಯು 'ಮಾತಾಡದಿರು. ದೇಹದಲ್ಲಿ ಬಹಳ ನಿತ್ರಾಣವಿದೆ. ಮಾತಾಡಿದರೆ ನಿತ್ರಾಣವು ಹೆಚ್ಚುವುದು' ಎಂದು ಹೊರಗೆ ಹೋದಳು.

ಭಿಕ್ಷುಕಿಯು, ಸುತ್ತಲೂ ತನ್ನಂತಹ ರೋಗಿಗಳನೇಕರು ಮಲಗಿರುವುದನ್ನು ಕಂಡು ಅದು ಆಸ್ಪತ್ರೆಯಿರಬೇಕೆಂದು ಊಹಿಸದಿರಲಿಲ್ಲ. ಪುನಃ ಕುಳಿತುಕೊಳ್ಳಲು ಯತ್ನಿಸಿದಳು. ಆದರೆ ಆ ಪ್ರಯತ್ನದಿಂದ ದೇಹವು ಕುಲುಕಿದಂತಾಗಿ, ಗಾಯಗಳಿಂದ ರಕ್ತಧಾರೆಯು ಹೊರಹೊಮ್ಮತೊಡಗಲು ಪುನಃ ಮೂರ್ಛಿತಳಾದಳು.

ಪರಿಚಾರಿಕೆಯು ಡಾಕ್ಟರರನ್ನು ಕರೆತಂದಳು. ಡಾಕ್ಟರರು ಗಾಯಗಳಿಗೆಲ್ಲಾ ಮದ್ದಿಟ್ಟು ಬಿಗಿದು, ನಾಡಿಯನ್ನು ಪರೀಕ್ಷಿಸಿದರು. ದೇಹವು ಕಾದ ಕಬ್ಬಿಣದಂತೆ ಬಿಸಿಯೇರಿದ್ದಿತು. ಜ್ವರವು ವಿಪರೀತವಾಗಿ ತಲೆಗೇರತೊಡಗಿದ್ದಿತು. ಡಾಕ್ಟರರು ಪರಿಚಾರಿಕೆಯೊಡನೆ 'ಜಾಗ್ರತೆಯಾಗಿರು ಜ್ವರವು ವಿಷಮವಾಗಿರುವುದು. ಭಯಂಕರವಾದ ವಿಪತ್ತು' ಎಂದು ನುಡಿದು ಕೆಲವು ಔಷಧಗಳನ್ನು ಕೊಟ್ಟು ಹೊರಟುಹೋದರು.

ಸುಮಾರು ಒಂದು ಗಂಟೆಯನಂತರ, ಭಿಕ್ಷುಕಿಯು ಕಣ್ತೆರೆದಳು. ಅರಿವಾದೊಡನೆ ಪರಿಚಾರಿಕೆಯು ಔಷಧವನ್ನು ಕೊಡಲು ಹೋದಳು. ಆದರೆ ಅವಳು ತೆಗೆದುಕೊಳ್ಳಲಿಲ್ಲ. ಆದುದರಿಂದ ಡಾಕ್ಟರರನ್ನೆ ಪುನಃ ಕರೆತಂದಳು. ಡಾಕ್ಟರರು ನಾಡಿಯನ್ನು ಹಿಡಿದು ನೋಡಿ 'ಮದ್ದನ್ನೇಕೆ ತೆಗೆದುಕೊಳ್ಳುವುದಿಲ್ಲ?' ಎಂದರು.

'ಏಕಿಲ್ಲ. ನಾನಿಲ್ಲಿಗೆ ಹೇಗೆ ಬಂದುದು?'

'ಮೋಟರ್‌ಕಾರಿನ ಅಡಿಗೆ ಬಿದ್ದು. ನಿನ್ನ ಹೆಸರೇನು?'

'ರಾಧಾ.'

'ಊರಾವುದು?'

'ಗುರುಪುರ.'

'ಮತ್ತೆ ಈ ಊರಿಗೆ ಏಕೆ ಬಂದೆ?'

'ಹೀಗೆ'

'ನಿನ್ನ ಸಂಬಂಧಿಕರು ಯಾರಾದರೂ ಇಲ್ಲಿರುವರೆ?'

'ಹೌದು' ಎಂದು, ಸ್ವಲ್ಪ ಹೊತ್ತು ಯೋಚಿಸಿ 'ಇಲ್ಲ ಇಲ್ಲ; ಯಾರೂ ಇಲ್ಲ' ಎಂದಳು.

'ಅದೇನು ಸಂಶಯ?'

'ಇಲ್ಲ, ಯಾರೂ ಇಲ್ಲ.'

'ಇದ್ದರೆ ತಿಳಿಸು. ಬೇಕಾದರೆ ನಾವು ಅವರಿಗೆ ಹೇಳಿಕಳಿಸುವೆವು.'

'ಹಾಗಾದರೆ—'

'ಹಾಗಾದರೇನು?'

'ಹಾಗಾದರೆ ಆನಂದರಾಯರ ಮಗಳನ್ನು ನೋಡಬೇಕೆಂದಿದೆ.'

'ಯಾವ ಆನಂದರಾಯರು?'

'ಹಂಪನಕಟ್ಟೆ.'

'ಅವರೇನು ನಿನ್ನ ಸಂಬಂಧಿಕರೆ?'

ಭಿಕ್ಷುಕಿಯು ಉತ್ತರವನ್ನು ಕೊಡಲಾರದೆ ಚಿಕ್ಕ ಮಗುವಿನಂತೆ ಅಳ ತೊಡಗಿದಳು.

'ಹೇಳಿ ಕಳಿಸಿದರೆ ಅವರು ಬರುವರೆ?'

'ಬರಲಿಕ್ಕಿಲ್ಲ.'

'ಹಾಗಾದರೆ?'

'ಬರದಿದ್ದರೆ—'

'ಏನು?'

'ಸಾಯ ಹೊರಟ ಭಿಕ್ಷುಕಿಯೊಬ್ಬಳು ನಿನ್ನನ್ನು ನೋಡ ಬಯಸುವ ಳೆಂದೂ, ನಿನ್ನನ್ನು ಒಂದು ತಡವೆ ನೋಡಿ ಸಂತೋಷದಿಂದ ಪ್ರಾಣ ಬಿಡ ಲಿಚ್ಛಿಸುವಳೆಂದೂ ಹುಡುಗಿಗೆ ಹೇಳಿದರೆ ಬರಲೂ ಸಾಕು.'

'ಸರಿ' ಎಂದು ಡಾಕ್ಟರರು ಹೊರಟುಹೋದರು.

೪

ಇಂದು ಟೀಪಾರ್ಟಿಯ ಸಲುವಾಗಿ ಊರ ಸಭ್ಯಗೃಹಸ್ಥರೆಲ್ಲರೂ ಆನಂದ ರಾಯರಿಂದ ಆಮಂತ್ರಿತರಾಗಿರುವರು. ಅಂತೆಯೇ ಎಷ್ಟೋ ಜನ ಪದ ವೀಧರರು, ಘನಸ್ಥರು ಬಂದು ಹೋಗುತಿರುವರು. ರಾಯರಿಗೆ ಬಂದವರನ್ನು ಆದರಿಸುವ ಗಲಭೆಯಲ್ಲಿ ಒಂದಿಷ್ಟೂ ವಿರತಿಯಿಲ್ಲ. ಒಂದು ಕಡೆಯಲ್ಲಿ ಮೋಹನನು, ತನ್ನ ಸಮಾನಕಕ್ಷೆಯವರೊಡನೆ ಕುಳಿತು ಹರಟೆಹೊಡೆಯು ತಿರುವನು. ಇನ್ನೊಂದು ಕಡೆ ಸರಳೆಯು ತನ್ನ ಗೆಳತಿಯರನ್ನು ಸತ್ಕರಿಸು ತಿರುವಳು.

ಆಮಂತ್ರಿಸಲ್ಪಟ್ಟವರಲ್ಲಿ ಆಸ್ಪತ್ರೆಯ ಸರ್ಜನರೂ ಒಬ್ಬರು. ಸರ್ಜನರು ರಾಯರಿಂದ ಉಪಚರಿಸಲ್ಪಟ್ಟು ಹೊರಡುವ ಸಮಯದಲ್ಲಿ 'ರಾಯರೇ! ನಿಮ್ಮ ಮಗಳನ್ನು ನಮ್ಮ ಆಸ್ಪತ್ರೆಯಲ್ಲೊಬ್ಬಳು ನೋಡ ಬಯಸುವಳು. ಸ್ವಲ್ಪ ಕಳುಹಿಸಿಕೊಡೋಣಾದೀತೆ? ಎಂದು ಕೇಳಿದರು.

ರಾಯರು ಆಶ್ಚರ್ಯದಿಂದ—'ಏಕಂತೆ?'

'ಏಕೋ ತಿಳಿಯದು; ನೋಡಬೇಕಂತೆ.'

'ಎಲ್ಲಿಯವಳು?'

'ಗುರುಪುರವಂತೆ.'

'ಏನಾದರೂ ಅಂಟುರೋಗವಿದೆಯೆ?'

'ಹಾಗೇನೂ ಇಲ್ಲ. ಮೊನ್ನೆ ಒಂದು ಕಾರಿನ ಅಡಿಗೆ ಬಿದ್ದು ಜಖಂ ಆಗಿರುವಳಷ್ಟೆ.'

'ಹಾಗಾದರೆ ಅವಳೊಡನೆ ಕೇಳುವೆನೆ'ಂದು ಮಗಳನ್ನು ಕರೆದು ಸರ್ಜನರ ಪರಿಚಯುವನ್ನು ಮಾಡಿಸಿ, ವಿಷಯವನ್ನು ತಿಳಿಸಿ 'ಹೋಗಿ ಬರುವೆಯಾ?' ಎಂದು ಕೇಳಿದರು.

'ಯಾರವಳು?'

'ಅವಳೊಬ್ಬಳು ಭಿಕ್ಷುಕಿಯೆಂದು ತೋರುವುದು' ಎಂದು ಸರ್ಜನರು ನುಡಿದರು.

'ಎಷ್ಟು ವಯಸ್ಸು?'

'ಸುಮಾರು ನಲ್ವತ್ತೈದು ಇರಬಹುದು.'

'ಸರಿ. ಹಾಗಾದರೆ ಬರುವುದಿಲ್ಲ. ಅವಳೊಬ್ಬಳು ಹುಚ್ಚಿ. ಕೆಲವು ದಿನಗಳ ಹಿಂದೆ ನಾನು ಗಾಡಿಯಲ್ಲಿ ಹೋಗುವಾಗ ನಮ್ಮ ಗಾಡಿಯ ಹಿಂದೆ ಒಬ್ಬಳು ಓಡಿ ಬಂದಿದ್ದಳು. ಅವಳೇ ಇವಳಿರಬಹುದು.'

'ಅದೇನೋ ತಿಳಿಯದು. ಆದರೆ ಔಷಧಿಯನ್ನು ತೆಗೆದುಕೊಳ್ಳಲು ಕೇಳುವುದಿಲ್ಲ. ನೀನು ಬರಲೊಪ್ಪದಿದ್ದರೆ 'ಸಾಯಲು ಹೊರಟ ಬಡವಳೊಬ್ಬಳು, ಒಂದು ತಡವೆ ನಿನ್ನನ್ನು ನೋಡಿ ಸಂತೋಷದಿಂದ ಪ್ರಾಣಬಿಡಲು ಇಚ್ಛಿಸುವಳು' ಎಂದು ಹೇಳಿ ಹೇಗಾದರೂ ಕರೆದುಕೊಂಡು ಬರಬೇಕೆಂದು ನುಡಿದಳು.'

'ನನ್ನನ್ನು ನೋಡುವುದರಿಂದ ಅವಳ ಮನಸ್ಸಿಗೆ ಅಷ್ಟು ಶಾಂತಿಯು ಸಿಗುವುದಾದರೆ, ನಾನೇಕೆ ಅವಳ ಮನಸ್ಸನ್ನು ನೋಯಿಸಬೇಕೆ'ಂದು ಯೋಚಿಸಿ ಸರಳೆಯು ಬರಲೊಪ್ಪಿದಳು. ಅವಳು ಹೊರಟದ್ದೆ ತಡ—'ಇದೇನೋ ವಿಚಿತ್ರ ವಿಷಯವಿರಬೇಕೆಂದೆಣಿಸಿ ಎಷ್ಟೋ ಕುತೂಹಲಿಗಳು ಅವಳ ಬೆನ್ನು ಹಿಡಿಯ ದಿರಲಿಲ್ಲ. ಆದರೆ ಇದರಿಂದ ಅವರ ಕುತೂಹಲವೇನೂ ನಿವೃತ್ತಿಯಾಗಲಿಲ್ಲ. ಕಾರಣ—ಭಿಕ್ಷುಕಿಯು, ಹುಡುಗಿಯೊಡನೆ ಸ್ವಲ್ಪ ಮಾತಾಡುವ ಕೆಲಸವಿರು ವುದರಿಂದ ಮತ್ತಾರೂ ಇರಲಾಗದೆಂದು ನಿಷೇಧಿಸಿದುದರಿಂದ, ಕುತೂಹಲಿಗಳಿಗೆ ಪ್ರಾಪ್ತವಾದುದೆಂದರೆ—ಸರಳೆಯು ಬರುವ ತನಕ ಜೋಲು ಮೊಗದಿಂದ ಹೊರಗೆ ಕಾದು ನಿಲ್ಲುವ ಒಂದು ಶಿಕ್ಷೆ ಮಾತ್ರ!

ಭಿಕ್ಷುಕಿಯನ್ನು ಕಂಡೊಡನೆಯಂತೂ ಅದೇ ಹುಚ್ಚಿಯಿವಳೆಂದು ಸರಳೆಯು ಅರಿತಳಾದರೂ ಅವಳ ಅಂದಿನ ಆ ಶೋಚನೀಯ ಸ್ಥಿತಿಗಾಗಿ ಮನ ಗರಗಿ ಮರುಗಿದಳು. ಭಿಕ್ಷುಕಿಯು ಮಾತಿಲ್ಲದೆ ಮರುಗುತಿದ್ದಳು. ಅವಳ ಕಣ್ಣುಗಳಿಂದ ಕಾರ್ಗಾಲದ ಸೋರುಮಳೆಯಂತೆ ಬಾಷ್ಪಧಾರೆಯು ಒಂದೇ ಸವನೆ ಸುರಿಯುತಿದ್ದಿತು. ಅಳಲು ಅವಳ ಕಂಠವನ್ನು ಬಿಗಿಹಿಡಿದಿದ್ದಿತು. ಕೊನೆಗೆ ಆ ಮೌನ ಭಾಷೆಯನ್ನು ಸರಳೆಯೇ ಭೇದಿಸಿ ನುಡಿದಳು—

'ಅಳುವುದೇಕಮ್ಮಾ?' ಎಂದು.

ಭಿಕ್ಷುಕಿಯು ಕ್ಷಣಕಾಲ ಹುಡುಗಿಯನ್ನು ನೋಡುತಿದ್ದು 'ಅತ್ತಾದರೂ ಬೆಂದಹೃದಯವನ್ನು ತಣಿಸಿಕೊಳ್ಳದಿರಲೆ? ಮಗೂ! ನಿನ್ನನ್ನು ಕಂಡೊಡನೆಯೇ ಹಿಂದಿನ ಒಂದೊಂದೇ ದುರ್ದಿನಗಳ ಚಿತ್ರ ಕಣ್ಣ ಮುಂದೆ ಬಂದು ನಲಿಯ ತೊಡಗುವುದು. ನಿನ್ನ ಹೆಸರೇನಮ್ಮಾ?' ಎಂದು ಕೇಳಿದಳು.

'ಸರಳಾ'

'ನಿನ್ನ ತಾಯಿಯ ಹೆಸರು?'

ಭಿಕ್ಷುಕಿಯ ಪ್ರಶ್ನೆಗೆ ಹುಡುಗಿಯಿಂದ ಒಮ್ಮಿಂದೊಮ್ಮೆಗೆ ಉತ್ತರ ಕೊಡ ಲಾಗಲಿಲ್ಲ. ಕಾರಣ—ತನ್ನ ತಾಯಿ ಯಾರೆಂಬುದು ಅವಳಿಗೇ ತಿಳಿಯದು. ಆನಂದರಾಯರ ಹೆಂಡತಿ ಕಮಲಮ್ಮನು ತನ್ನ ಸಾಕು ತಾಯಿ ಎಂದು ಮಾತ್ರ ಗೊತ್ತು. ಆದರೂ ಆ ವಿಚಾರಗಳೆಲ್ಲ ಈಗೇಕೆ ಎಂದು ಬಗೆದು ಸರಳೆಯು 'ತಾಯಿಯ ಹೆಸರೇ? ಕಮಲಮ್ಮ' ಎಂದು ನುಡಿದೇ ಬಿಟ್ಟಳು.

'ನಿನ್ನ ಹುಟ್ಟೂರು ಮಂಗಳೂರೆಯೇ?'

'ಅಲ್ಲ. ಯಾವುದೋ ಒಂದು ಹಳ್ಳಿಯಂತೆ.'

ಭಿಕ್ಷುಕಿಯು ಸ್ವಲ್ಪ ಹೊತ್ತು ಸುಮ್ಮನಿದ್ದು ಅಳುತ ನುಡಿದಳು. 'ಮಗೂ! ನನಗೂ ಒಬ್ಬಳು ಮಗಳಿದ್ದಳು....ಇದ್ದಳು! ಆದರೆ.......ಆದರೆ ನನ್ನ ಆ ಮುದ್ದು ಮಗು........'

'ಏನಾಯಿತಮ್ಮಾ?'

'ಅಂದಿನ ಆ ಭಯಂಕರ ದಿವಸ, ನೆರೆಯ ಸಮಯ ಎಷ್ಟೋ ಮಂದಿ ಹೊರಟುಹೋದರಂತೆ. ಆ ದಿನ ನನ್ನ ಎಳೆಗೂಸು ಹೊರಟುಹೋಯ್ತು; ನನ್ನೊಬ್ಬಳನ್ನೇ ಬಿಟ್ಟು ಹೊರಟೇ ಹೋಯ್ತು!'

ಭಿಕ್ಷುಕಿಯು ನುಡಿಯುತ್ತಿದ್ದಂತೆ ಸರಳೆಯ ಮನಸ್ಸು ದೂರ—ಬಹು ದೂರ ಸರಿದಿದ್ದಿತು. ಅದಾವುದೋ ಒಂದು ಅವ್ಯಕ್ತ ಮಧುರವಾದ ಸಂಗೀತದ ಮೂರ್ಛನೆಯು ಅವಳ ಹೃದಯವನ್ನು ತುಂಬ ತೊಡಗಿದ್ದಿತು. 'ಅಹುದು; ಸಣ್ಣ ಮನೆ. ನೀರು! ತುಂಬ ನೀರು! ಎಂದವಳು ತನ್ನಲ್ಲೇ ಗುಣಿಸಿಕೊಳ್ಳುತಿದ್ದಳು. ಅರಿವಿಲ್ಲದ ಭಾವನಾಪ್ರಪಂಚದ ವೀಣೆಯ ಕಡಿದ ತಂತಿಯನ್ನು, ಮಗುಳೆ ಜೋಡಿಸ ತೊಡಗಿದ್ದಳು!

'ಆದರೆ ನನ್ನನ್ನು ಯಾರೂ ಮುಟ್ಟಲಿಲ್ಲ. ಆ ಯಮನಿಗೂ ನಾನು ಬೇಡವಾದೆ! ನನ್ನ ಕಳೆದ ರತ್ನಕ್ಕಾಗಿ ಎಷ್ಟೋ ಊರುಗಳನ್ನು ತಿರುಗಿದೆ. ಕಂಡ ಕಂಡವರನ್ನು ಕೇಳಿದೆ. ಎಲ್ಲರೂ 'ನಿನ್ನ ರತ್ನ ಈ ಲೋಕದಲ್ಲಿಲ್ಲ' ಎಂದರು. ಆದರೆ ನನ್ನ ರತ್ನ—ಎನ್ನುತಿದ್ದಂತೆ ಅವಳ ಮುಖವು ಅರಳ ತೊಡಗಿತು. ನನ್ನ ರತ್ನ ಕಳೆದು ಹೋಗಿಲ್ಲ. ನನ್ನ ರತ್ನ ಅರಮನೆಯಲ್ಲಿ!'

ಸರಳೆಯು ಕುತೂಹಲದಿಂದ ಕೇಳಿದಳು 'ಏನು! ಸಿಕ್ಕಿತೆ?'

'ಹೌದಮ್ಮ; ಸಿಕ್ಕಿತು. ದೇವರು ನನ್ನ ರತ್ನವನ್ನು ಕದ್ದುಕೊಳ್ಳಲಿಲ್ಲ. ಆದರೆ ನಾನು ಭಿಕಾರಿ! ಅವಳು ರಾಣಿ! ನಾನು ಹುಚ್ಚಿ. ಅದು ನನ್ನದೆಂದರೆ ಯಾರೂ ನಂಬಲಾರರು. ಹೇಗೂ ಆಗಲಿ; ಚೆನ್ನಾಗಿದ್ದರೆ ಸರಿ! ಎಂದುಕೊಂಡೆ.'

'ಅದೇಕೆ? ಜನರು ನಂಬದಿದ್ದರೂ ಮಗಳು ತಾಯಿಯನ್ನು ನಂಬಲಾರಳೆ?'

'ಇಲ್ಲಮ್ಮ. ನನ್ನ ಮಗು ಚಿಕ್ಕಂದಿನಲ್ಲೇ ಕಳೆದು ಹೋಗಿತ್ತು. ನನ್ನ ತೊಡೆಯಲ್ಲಿ ಬಹುಕಾಲ ನಲಿದಿರಲಿಲ್ಲ. ನನ್ನನ್ನು ಅದು ತಿಳಿಯಲಾರದು.

ಆದರೂ—ಸಾಯುವ ಮುಂಚೆ ಒಂದು ತಡವೆ—ಒಂದೇ ತಡವೆಯಾದರೂ ಕಣ್ಣು ತುಂಬ ನೋಡಬೇಕೆಂದು ಬಯಸಿದೆ.'

'ಕೊನೆಗೆ ಬಂದಳೇ?'

'ಬಾರದೆ? ನೋಡು! ನನ್ನೆದುರೇ ಇರುವಳು.'

'ಎಲ್ಲಿ?'

ಭಿಕ್ಷುಕಿಯು ಸರಳೆಯೆಡೆಗೆ ನಗುತೆ ಕೈತೋರಿದಳು.

'ಏನು? ನಾನೆ!'

ಕಳೆಗುಂದಿದ್ದರೂ ದರ್ಪಪೂರ್ಣವಾದ ಭಿಕ್ಷುಕಿಯ ನೋಟವು ಅಹುದೆಂದು ಸಾರುವಂತಿದ್ದಿತು.

ಭಿಕ್ಷುಕಿಯು ಮತ್ತೂ ಹೇಳತೊಡಗಿದಳು—'ಮಗೂ—ನೀನು ಚಿಕ್ಕವಳು. ನಾಲ್ಕು ವರ್ಷಗಳಿನ್ನೂ ಕಳೆದಿದ್ದಿಲ್ಲ. ಒಂದು ದಿನ ನಾನು ನೀರು ತರಲು ಹೊರಗೆ ಹೋಗಿದ್ದೆ. ಹಿಂದಿರುಗಿ ಬರುವಷ್ಟರಲ್ಲಿ ನೀನು ಮನೆಯ ಜಗಲಿಯಿಂದ ಅಂಗಳಕ್ಕೆ ಬಿದ್ದು, ತೊಡೆಯಲ್ಲೊಂದು ಗಾಯವನ್ನು ಮಾಡಿಕೊಂಡು ಅಳುತಿದ್ದೆ. ಕೊನೆಗೆಂತೊ ಸಮಾಧಾನಪಡಿಸಿ "ಇಂದೀ! ದೇವರು ಕೊಟ್ಟ ಮಚ್ಚೆ ಸಾಲದೆಂದು ಗಾಯವೊಂದನ್ನು ಮಾಡಿಕೊಂಡೆಯಾ?" ಎಂದು ಕೇಳಿದ್ದಕ್ಕೆ ನಗತೊಡಗಿದೆ.'

ಸರಳೆಯ ಹೃದಯದ ಹಾಡು ಸ್ಫುಟವಾಯಿತು. ಭಿಕ್ಷುಕಿ ಹೇಳಿದುದು ಸುಳ್ಳಾಗಿರಲಿಲ್ಲ. ತಾಯ ಕೊರಳನ್ನು ಬಿಗಿದಪ್ಪಿ ಚಿಕ್ಕ ಮಗುವಿನಂತೆ ಅಳುತ ನುಡಿದಳು—'ಅಮ್ಮಾ—'

ಸಂತೋಷದಿಂದ, ಭಿಕ್ಷುಕಿಯ ಗಂಟಲು ಬಿಗಿದುಬಂದು ಮಾತು ಹೊರಡದಂತಾಯಿತು. ಕಳೆದ ಬೆಳಕು ಪುನಃ ತೋರಿ ಬೆಳಗುವಂದು ಹೆತ್ತಬ್ಬೆಯ ಹೃದಯವು ಎಷ್ಟು ಅಭಿಮಾನ ಪಡಲಿಕ್ಕಿಲ್ಲ?

'ಅಮ್ಮಾ! ನನಗೇಕೆ ಇದನ್ನು ಆ ದಿನವೇ ತಿಳಿಸಲಿಲ್ಲ?'

'ಆ ದಿನವಿರಲಿ, ಇಂದೂ ತಿಳಿಸುತಿರಲಿಲ್ಲ. ಉಪ್ಪರಿಗೆಯ ಸುಂದರ ವಸ್ತುವನ್ನು ತಿಪ್ಪೆಯಲ್ಲಿ ತಂದು ಕೆಡಹಲು ಇಷ್ಟ ಪಡುತಿರಲಿಲ್ಲ. ಆದರೂ ಹೆತ್ತ ಮಗಳ ಮೊಗವನ್ನು ಅಡಗಿಸಿಡಲು ತಾಯಿಯ ಮನಸ್ಸು ಎಂದಿಗೂ ಕೇಳಲಾರದು.'

‘ಅದೇನಮ್ಮಾ? ನಾನು ಎಂದಿಗೂ ನಿನ್ನವಳೇ ಅಲ್ಲವೆ?’

‘ಅಹುದು ಮಗು! ಆದರೆ............ನಿನ್ನನ್ನು ನನ್ನವಳೆನ್ನುವಷ್ಟು ಯೋಗ್ಯತೆಯು ನನಗಿಲ್ಲ. ನಾನು ಬೀದಿಯ ಭಿಕಾರಿ. ನೀನಾದರೂ........’

‘ತಾಯಿಗಿಂತಲೂ ಈ ಸುಖ ಸಂಪತ್ತುಗಳೆಲ್ಲಾ ಹೆಚ್ಚಿನವೆ? ಬಾಮ್ಮ! ಮನೆಗೆ ಹೋಗೋಣ. ನಾನು ಪಪ್ಪನಿಗೆಲ್ಲಾ ಹೇಳಿಬಿಡುವೆನು.’

ಭಿಕ್ಷುಕಿಯು ಅಳುತ—‘ಬೇಡ. ಆ ಯೋಗ್ಯತೆಯು ನನಗಿಲ್ಲ. ನಾನು ಜಾತಿಯಿಲ್ಲದವಳು—’ಎಂದಳು.

ಹುಡುಗಿಯ ತಲೆಗೆ ಸಿಡಿಲು ಬಡಿದಂತಾಯಿತು. ಅವಳು ಗಾಬರಿ ಯಿಂದ ‘ಏನು ಜಾತಿಯಿಲ್ಲವೆ?’ ಎಂದು ಕೇಳಿದಳು.

‘ಇಲ್ಲ. ನಿನ್ನ ಅಜ್ಜಿ ಜಾತಿಗೆಟ್ಟ ನಂತರ ನಾನು ಹುಟ್ಟಿದೆನು. ನನಗಂತೂ ಈ ಭೂಮಿಯ ಋಣವು ಬಹಳವಾಗಿ ಸಂದಿರುವುದು ಇನ್ನು ಬಹು ದಿನಗಳ ತನಕ ಬಾಳಲಾರೆನು. ನೀನಂತೂ ಚೆನ್ನಾಗಿರು ಮಗೂ!’

‘ಅಮ್ಮಾ! ನಾನೂ ಜಾತಿಯಿಲ್ಲದವಳೆ? ಹಾಗಾದರೆ ನಾನು ಅವರನ್ನು.... ಅವರನ್ನು ವಂಚಿಸಿದೆನೇ?’

ಆ ಮಾತು ಭಿಕ್ಷುಕಿಯ ಕಿವಿಗೆ ಬೀಳಲಿಲ್ಲ. ಬಹಳವಾಗಿ ಮಾತಾಡಿ ದುದರಿಂದ ಬಾಯಾರಿ, ತ್ರಾಣಗುಂದಿ ಅವಳು ಮೂರ್ಛೆಗೊಳ್ಳುವ ಸ್ಥಿತಿಯಲ್ಲಿ ದ್ದಳು. ಸರಳೆಯು ಸರ್ಜನರನ್ನು ಕರೆತರಲು ಪರಿಚಾರಿಕೆಯನ್ನು ಕಳುಹಿ, ಇಂದಾದರೂ ಮಾತೃಸೇವೆಯು ತನಗೆ ದೊರೆಯಿತಷ್ಟೆ! ಎಂದು ಭಾವಿಸಿ ಉಪ ಚರಿಸತೊಡಗಿದಳು. ಅಷ್ಟರಲ್ಲಿ ಸರ್ಜನರು ಬಂದು ಸರಳೆಯನ್ನು ಕಳುಹಿಸಿ, ಭಿಕ್ಷುಕಿಯನ್ನು ಪರೀಕ್ಷಿಸತೊಡಗಿದರು.

ಸರಳೆಯು ಹೊರಟುಹೋದಳು. ಆದರೆ ತಾನು ಅವರನ್ನು ವಂಚಿಸಿ ದೆನೇ ಎಂಬೊಂದು ಭೀತಿಯು ಮಾತ್ರ, ಅವಳ ಹೃದಯದಲ್ಲಿ ತನ್ನ ಪ್ರಭುತ್ವ ವನ್ನು ಸಂಪೂರ್ಣವಾಗಿ ಸ್ಥಾಪಿಸಿಯೇ ಬಿಟ್ಟಿತು!

೫

ಸರಳೆಯು ಬಂದೊಡನೆ ಅವಳ ಬಾಡಿದ ಮುಖವನ್ನು ನೋಡಿ, ಹೊರಗೆ ಕಾದು ನಿಂತಿದ್ದ ಕುತೂಹಲಿಗಳೆಲ್ಲಾ ಆಶ್ಚರ್ಯಗೊಂಡು ‘ಏನು ವಿಚಾರ ಇಷ್ಟು ಹೊತ್ತು?’ ಎಂದು ಕೇಳದಿರಲಿಲ್ಲ. ಆದರೆ ಹುಡುಗಿ ಬಹು ಜಾಣೆ!

ಒಮ್ಮೆಗೇನೇ ಗುಟ್ಟುಗಳನ್ನೆಲ್ಲಾ ತಿಳಿಸಿಬಿಡಲು ಅವಳೇನು ಹಳ್ಳಿಯ ಕೋಡಗ ವಲ್ಲ. ಆದುದರಿಂದಲೇ ವಸ್ತು ಸ್ಥಿತಿಯನ್ನರುಹದೆ, 'ಭಿಕ್ಷುಕಿಗೆ ನನ್ನಷ್ಟೇ ವಯಸ್ಸಿನ ಒಬ್ಬಳು ಮಗಳಿದ್ದಳಂತೆ. ಅವಳು ಕೆಲವು ಸಮಯಗಳ ಹಿಂದೆ ತೀರಿ ಹೋದಳಂತೆ. ಅವಳು ನನ್ನ ಹಾಗೆಯೇ ಇದ್ದಳಂತೆ. ಆದುದರಿಂದ ಒಮ್ಮೆ ನನ್ನನ್ನಾದರೂ ನೋಡಬೇಕೆಂದು ಕರೆಯಿಸಿದುದಂತೆ' ಎಂದು ಮುಂತಾಗಿ ಅಂತೆಗಳ ಸಂತೆಯನ್ನೇ ಪೋಣಿಸಿ ನುಡಿದುಬಿಟ್ಟಳು. 'ಇರಬಹುದು, ಒಬ್ಬರನ್ನು ಇನ್ನೊಬ್ಬರು ಹೋಲುತಿರಬಹುದು' ಎಂದು ಭಾವಿಸಿ ಅವರೂ ಸರಳೆಯ ಮಾತನ್ನು ನಂಬದಿರಲಿಲ್ಲ.

ಸರಳೆಯ ತಾಯಿಯು ಈ ಸಮಾಧಾನವನ್ನು ಮೊತ್ತ ಮೊದಲು ನಂಬಿದಳು. ಆದರೆ ಆ ನಂಬುಗೆಯು ಬಹುಕಾಲ ಬಾಳಲಿಲ್ಲ. ಸರಳೆಯು ವಿಹ್ವಲಚಿತ್ತಳಾಗಿ ಕ್ಷೀಣ ಸ್ವರದಿಂದ 'ನನ್ನ ತಾಯಿ ಯಾರಮ್ಮಾ' ಎಂದು ಕೇಳಿ ದೊಡನೆ ಕಮಲಮ್ಮನು ಆಶ್ಚರ್ಯಗೊಂಡು ಇದರಲ್ಲೇನೋ ಗೂಢ ತತ್ವವಿರ ಬೇಕೆಂದು ಊಹಿಸದಿರಲಿಲ್ಲ.

'ಅದೇಕೆ ಈಗ ನೆನಪಾಯಿತು?'

'ಏಕಿಲ್ಲ; ಹೀಗೆ.'

'ಅದೊಂದು ದೊಡ್ಡ ವಿಚಾರ. ಅದು ನಿನಗೆ ಬೇಡ ಮಗು! ಈಗಂತೂ ನಾನೇ ತಾಯಿ. ಆಯಿತಷ್ಟೆ?'

'ಅದು ಸರಿ. ಆದರೆ ಆ ವಿಚಾರವನ್ನು ನಾನು ತಿಳಿಯಲಾಗದೆ?'

'ತಿಳಿಯದೇನು? ಆದರೆ ಅದು ನನಗೂ ಗೊತ್ತಿಲ್ಲ ಮಗು. ಅಂದು ಆ ಇಪ್ಪತ್ತಮೂರನೆ ಇಸ್ವಿಯ ದೊಡ್ಡ ನೆರೆಯ ಸಮಯ. ಆಗ್ಗೆ ನಿನಗೆ ಸುಮಾರು ಐದಾರು ವರ್ಷಗಳಷ್ಟೆ. ಆ ದಿವಸ ನಮ್ಮ ಕೂಳೂರು ರಾಮರಾಯರು ತಮ್ಮ ಆಸ್ತಿಪಾಸ್ತಿಗಳ ವಿಚಾರ ತೆಗೆದುಕೊಳ್ಳಲು ಗುರುಪುರದತ್ತಕಡೆ ಹೋಗಿದ್ದವರು ಹೊಳೆಯಲ್ಲಿ ತೇಲಿ ಬರುತಿದ್ದ ನಿನ್ನನ್ನು ಹೇಗೋ ಬಚಾವು ಮಾಡಿದರಂತೆ, ಅಷ್ಟೆ ನನಗೆ ಗೊತ್ತು.'

'ಮತ್ತೆ ನಾನಿಲ್ಲಿಗೆ ಹೇಗೆ ಬಂದೆ?'

'ಅವರು ನಮ್ಮ ಸಂಬಂಧಿಕರು. ಒಂದು ಸಾರಿ ನಮ್ಮವರು ಅಲ್ಲಿಗೆ ಹೋದಾಗ ಈ ವಿಚಾರ ತಿಳಿದು ನಿನ್ನನ್ನು ತಮ್ಮೊಡನೆ ಕರೆದುಕೊಂಡೆ ಬಂದರು.

ರಾಮರಾಯರಿಗೂ ತುಂಬ ಮಕ್ಕಳಿದ್ದರು. ಆದುದರಿಂದ ಅವರು ಅದಕ್ಕೆ ಆಕ್ಷೇಪ ಹೇಳಲಿಲ್ಲ. ಅದರ ಮೇಲೆ ನಾನೇ ನಿನ್ನ ತಾಯಿ. ಆ ವಿಚಾರ ಈಗೇಕೆ?'

'ಏಕಿಲ್ಲ' ಎಂದು ಸರಳೆಯು ಅಲ್ಲಿಂದೆದ್ದು ತನ್ನ ಕೋಣೆಯನ್ನು ಸೇರಿ ಬಾಗಿಲನ್ನು ಹಾಕಿಕೊಂಡು ಕುಳಿತಳು. ಅನೇಕ ಕೊನೆಮೊದಲಿಲ್ಲದ ಯೋಚನೆಗಳು ಅವಳ ತಲೆಯನ್ನು ಸುತ್ತಿಕೊಂಡು ಪ್ರಳಯಕಾಲದ ಸಾಗರ ತರಂಗಗಳಂತೆ ಸಂಘರ್ಷಿಸುತಿದ್ದುವು.

'ನಾನಂತೂ ಜಾತಿಯಿಲ್ಲದವಳು. ಈ ವಿಷಯವು ಯಾರಿಗೂ ತಿಳಿಯದು ತಿಳಿದಿದ್ದರೆ, ನನ್ನನ್ನೆಂದಿಗೂ ಅವರು ಮದುವೆಯಾಗುತ್ತಿರಲಿಲ್ಲ. ಈ ವಿಚಾರ ತಿಳಿದ ಮೇಲೂ, ಮತ್ತೇಕೆ ನಾನವರೊಂದಿಗೆ ಕೂಡಿರಬೇಕು? ಇಲ್ಲವಾದರೆ ನಾನವರನ್ನು ವಂಚಿಸಿದಂತಾಗದೆ? ನನ್ನ ವಿಷಯವನ್ನು ಇನ್ನಾದರೂ ತಿಳುಹದೆ ನಾನು ಅಡಗಿಸಿದರೆ ಅದೆಂತಹ ಆತ್ಮದ್ರೋಹಿ? ಹಾಗಾದರೆ ತಿಳುಹಲೆ? ಆದರೆ-ಅವರು ನನ್ನನ್ನು ಬಿಟ್ಟುಬಿಟ್ಟರೆ?'

ಸರಳೆಯ ಹೃದಯವು ಬಿರುಗಾಳಿಗೆ ಸಿಲುಕಿದ ಹಡಗಿನಂತೆ ನಡುಗತೊಡಗಿತು. ಯೋಚನೆಯು ಮುಂದೆ ಹರಿಯಲೊಲ್ಲದು. ಅದು ಒಂದೇ ಸವನೆ ಸುರಿಯುತಿರುವ ಕಂಬನಿಯಿಂದ, ತೋಯ್ದು ಹೋಯಿತು.

ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿ 'ಸರಳಾ' ಎಂದು ಕರೆದರು. ಸರಳೆಯು ಬೇಗ ಬೇಗನೆ ಕಣ್ಣೀರನ್ನು ಒರಸಿಕೊಂಡು ಬಾಗಿಲು ತೆರೆದಳು. ಕಮಲಮ್ಮನು ಒಳಗೆ ಬಂದು—'ಏನು ಸರಳ! ಒಬ್ಬಳೇ ಕುಳಿತಿರುವಿ! ಏಕೆ ಅಳುತಿರುವೆ!' ಎಂದಳು.

'ಏನಿಲ್ಲ.—ನಾನು ಅವರಲ್ಲಿಗೆ ಯಾವಾಗ ಹೋಗುವುದಮ್ಮಾ?' ಪಾಪ! ಹುಡುಗಿಯು ನಮ್ಮನ್ನೆಲ್ಲಾ ಅಗಲಬೇಕಾಗುದಲ್ಲಾ ಎಂದು ಮರುಗುವಳೆಂದು ಭಾವಿಸಿ ಕಮಲಮ್ಮನು, 'ಏನು ಮಾಡುವುದು ಮಗು! ಹೆಣ್ಣಾಗಿ ಹುಟ್ಟಿದ ಮೇಲೆ ಅವುಗಳನ್ನೆಲ್ಲಾ ಸಹಿಸಲೇ ಬೇಕು. ಮರುಗಿದರೆ ಆಗುವುದೆ? ಇಲ್ಲ; ಅವರು ಸದ್ಯ ನಿನ್ನನ್ನು ಕರೆದುಕೊಂಡು ಹೋಗುವುದಿಲ್ಲ. ನಿನ್ನ ಪಪ್ಪ ಹೇಳಿದರು; ಆದಕ್ಕೆ ಒಂದೆರಡು ವರ್ಷ ಇಲ್ಲಿಯೇ ಕಲಿಯುತಿರಲಿ, ಅವಸರವೇನು? ಎಂದರಂತೆ, ಆ ಮೇಲೆಯಷ್ಟೆ? ನೋಡಿಕೊಂಡ!' ಎಂದು ಮುಂತಾಗಿ ಸಮಾಧಾನ ಹೇಳಿ ಹೊರಟು ಹೋದಳು.

ಸರಳೆಗೆ ತಾಯಿಯ ಆ ಪುರಾಣಗಳೆಲ್ಲಾ ಅಗತ್ಯವಿರಲಿಲ್ಲ. ಅವಳು ತನ್ನ ಮುಂದಿನ ಕರ್ತವ್ಯದ ಕುರಿತು ಯೋಚಿಸುತ್ತಿದ್ದಳು. ಅಂತಹ ಅಗಾಧ ವಾದ ಯೋಚನೆಯಲ್ಲೇ ರಾತ್ರಿ ಕಳೆದುಹೋಯಿತು. ಆದರೂ ಏನೂ ನಿರ್ಧಾರವಾಗಲೊಲ್ಲದು.

'ವಿಚಾರಗಳನ್ನೆಲ್ಲಾ ಅವರಿಗೆ ತಿಳಿಸಿಬಿಡಲೆ? ಇನ್ನು ಬಿಡುವುದು ಸ್ವೀಕರಿಸುವುದು ಅವರ ಇಷ್ಟ. ಬಿಡಲಾರರು! ಕೈಹಿಡಿದವಳನ್ನು ಎಂದಿಗೂ ಅವರು ಬಿಡಲಾರರು! ಜಾತಿ! ಜಾತಿಯಿದ್ದರೇನು ಇಲ್ಲವಾದರೇನು? ಅದ ರಿಂದೇನು ಉಪಯೋಗ? ಎಂದೊಮ್ಮೆ ಯೋಚಿಸುವಳು. ಉತ್ತರ ಕ್ಷಣದಲ್ಲೇ 'ಅವರು ತೊರೆಯಲಾರರೇನೋ ನಿಜ. ಆದರೆ ಅವರ ಹಿರಿಯರು, ಅದಕ್ಕೆಂದೂ ಸಮ್ಮತಿಸಲಾರರು. ಹಿರಿಯರ ಮಾತನ್ನು ಮೀರುವುದರಿಂದ ಏನಾದರೂ ಗೃಹಚ್ಛಿದ್ರಗಳು ಸಂಭವಿಸಿದರೆ ಅದಕ್ಕೆ ನಾನೇ ಕಾರಣಳಾಗುವೆನು. ಹಾಗೆಂದ ಮೇಲೆ, ನಾನೇಕೆ ಅವರ ತಲೆಯ ಮೇಲೆ ಅಂತಹ ಗಂಡಾಂತರಗಳನ್ನು ತಂದೊಡ್ಡಬೇಕು?' ಎಂದು ಭಾವಿಸುವಳು.

ಸರಳೆಗೆ ಮುಂದೋರುತಿರುವ ಮಾರ್ಗಗಳೆಂದರೆ ಅವೆರಡೇ! ಆತ್ಮಸುಖ ಕ್ಕಾಗಿ ಪರರನ್ನು ವಂಚಿಸಬೇಕು. ಅಥವಾ ಪರರಿಗಾಗಿ ಆತ್ಮಸುಖದಿಂದ ವಂಚಿತಳಾಗಬೇಕು! ಇವುಗಳಲ್ಲಿ ಯಾವುದು ಅನುಕರಣೀಯ?

ತನಗಾಗಿ ಪರರನ್ನು ವಂಚಿಸುವುದಕ್ಕಿಂತ ಪರರಿಗಾಗಿ ಆತ್ಮವಂಚನೆಯೇ ಶ್ರೇಯಸ್ಕರವೆಂದು ಯೋಚಿಸಿ ಸರಳೆಯು ದ್ವಿತೀಯ ಮಾರ್ಗದಲ್ಲೇ ಮುನ್ನಡೆ ಯಲು ನಿರ್ಧರಿಸಿದಳು.

ಮುಂಜಾನೆ ಐದು ಗಂಟೆಯ ಸಮಯ. ಉಷಃಕಾಲದ ಸೌಂದರ್ಯ ರಾಶಿಯಿಂದ ಪ್ರಕೃತಿಯು ಮುಗ್ಧವಾಗಿದ್ದಿತು. ಆ ಶಾಂತಿಮಯವಾದ ವಾತಾವರಣವನ್ನು ಭೇದಿಸಿ, ಅಶಾಂತಿಯ ಕೋಲಾಹಲವು ಅಲ್ಲಲ್ಲಿ ತಲೆ ದೋರುತಿದ್ದಿತು.

ಸರಳೆಯು ದೃಢಮನಸ್ಸಿನಿಂದ ತನ್ನ ವಿಚಾರ ನಿರ್ಧಾರಗಳ ಕುರಿತು ಪತ್ರವೊಂದನ್ನು ಬರೆದು ಅದನ್ನು ಪತಿಯ ನಿತ್ಯೋಪಯೋಗದ ಪುಸ್ತಕದಲ್ಲಿಟ್ಟು ಹೊರಹೊರಟಳು. ಹೊರಡುವಂದು ಅವನ ಭಾವ ಚಿತ್ರವೊಂದನ್ನು ಬಚ್ಚಿಟ್ಟು ಕೊಳ್ಳಲು ಮಾತ್ರ ಮರೆಯಲಿಲ್ಲ.

ಹೊರಗೆ ಬಂದೊಡನೆಯೇ ಕಮ್ಮಲಮ್ಮನು 'ಏನು ಸರಳ! ಇಷ್ಟು ಬೇಗ ಎದ್ದು ಬಿಟ್ಟೆ! ರಾತ್ರಿ ನಿದ್ದೆ ಬರಲಿಲ್ಲವೆ? ಕಣ್ಣೆಲ್ಲಾ ಕೆಂಪಾಗಿರುವುದು' ಎಂದು ಕೇಳಿದಳು.

ಹೌದು. ನಿನ್ನೆ ಸಂಜೆ ಕುಡಿದ ಕಾಫಿ ಬಹಳ 'ಸ್ಟ್ರೋಂಗ್' ಇತ್ತು. ಆದುದರಿಂದ ನಿದ್ದೆ ಸರಿ ಬರಲೇ ಇಲ್ಲ. ಜಯೆಯ ಮನೆಗೆ ಹೋಗಿಬರುತ್ತೇನೆ.

ಜಯೆಯು ಸರಳೆಯ ಪ್ರಾಣದ ಗೆಳತಿ. ಅವಳ ದಿನ ಚರ್ಯೆಯಲ್ಲಿ ಜಯೆಯ ಸಂದರ್ಶನವೇ ಮೊತ್ತಮೊದಲಿನ ಕೆಲಸ. ಆದುದರಿಂದ ತಾಯಿಯು ಇದೇ ಮಗಳ ಕೊನೆಯ ದರ್ಶನವೆಂಬುದನ್ನು ತಿಳಿಯಲಾರದೆ ಹೋದಳು.

ಸರಳೆಯು ಪ್ರಥಮತಃ ಆಸ್ಪತ್ರೆಯ ಕಡೆಗೆ ನಡೆದು ಭಿಕ್ಷುಕಿಯನ್ನು ವಿಚಾರಿಸಿದಳು. ಆದರೆ ಪರಿಚಾರಿಕೆಯ ಹೇಳಿಕೆಯಿಂದ, ಅವಳು ಆ ರಾತ್ರಿಯಲ್ಲೇ ಸ್ಮಶಾನ ಯಾತ್ರೆಯನ್ನು ಕೈಗೊಂಡಳೆಂದು ತಿಳಿದು ಬಂದಿತು. ಹುಡುಗಿಯ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಸರಿ! ಇಂದಿಗೆ ಅವಳ ಒಂದೇ ಒಂದಾದ ಸ್ವಕೀಯ ಭಾವನೆಯ ಕುಡಿಯು ನಾಶಗೊಂಡಿತು. ಇನ್ನು ಮುಂದಿನ ಪ್ರಪಂಚವೆಂದರೆ ಸರಳೆಗೆ ಸಂಪೂರ್ಣವಾಗಿ ಪರಕೀಯ!

ನಿಟ್ಟುಸಿರು ಬಿಡುತ್ತ ಹುಡುಗಿಯು ಮುನ್ನಡೆದಳು. ಎಲ್ಲಿಗೆ? ಹೊಗೆ ಬಂಡಿಯ ನಿಲ್ದಾಣದ ಕಡೆಗೆ! ಮಿಕ್ಸೆಡ್ ಬಂಡಿಯು ಹೊರಡಲನುವಾಗಿ ಯಾತ್ರಿಕರನ್ನು ಕೂಗಿ ಕರೆಯುತಿದ್ದಿತು. ಆ ಕರೆಯೇ ಸರಳೆಯ ಪಾಲಿಗೆ ಪ್ರೇಮಪೂರ್ಣ ಆಹ್ವಾನ!

ಆ ಕರೆಯನ್ನು, ಆ ಪ್ರೇಮಪೂರ್ಣ ಆಹ್ವಾನವನ್ನು ಸರಳೆಯು ವ್ಯರ್ಥ ಗೊಳಿಸಲಿಲ್ಲ. ಟಿಕೇಟು ತೆಗೆದುಕೊಳ್ಳಲೆಂದು ಮುಂದರಿದಳು. ಆದರೆ— ಎಲ್ಲಿಗೆ? ಜಗತ್ತನ್ನು ಕೂಗಿ ಕರೆದೆಬ್ಬಿಸುವ ಆ ಹಾಳು ಸೌಂದರ್ಯವನ್ನು ಹೊತ್ತುಕೊಂಡು ಹೋಗುವುದಾದರೂ ಎಲ್ಲಿಗೆ? ಹುಡುಗಿಯ ಹೃದಯವು ನಡುಗಿತು! ಅಶ್ರುಧಾರೆಯು ಹೊರಸೂಸ ತೊಡಗಿ, ಕರ್ತವ್ಯಮಾರ್ಗವನ್ನು ಸಂಪೂರ್ಣವಾಗಿ ಅಳಿಸಿಬಿಟ್ಟಿತು!

* * * * * *

ಆ ದಿನ ಸಂಜೆ ಸ್ಥಳೀಕ ಪತ್ರಿಕೆಯೊಂದರಲ್ಲಿ 'ಆತ್ಮಹತ್ಯೆ'—ಎಂಬ ಶಿರೋ ನಾಮದಿಂದ 'ವಿಶೇಷ ವರ್ತಮಾನ'ವೊಂದು ಪ್ರಕಟವಾಗಿದ್ದಿತು.

—ಅಂದು ಮುಂಜಾನೆ ಮಿಕ್ಸೆಡ್ ಬಂಡಿಯು ಹೋಗುತಿದ್ದಾಗ ನಿಲ್ದಾಣ ದಿಂದ ಅನತಿದೂರದಲ್ಲೇ ಕಂಬಿಯ ಬದಿಯಲ್ಲಿ ಹೋಗುತಿದ್ದ ಸುಮಾರು ಹದಿನಾರು ಹದಿನೆಂಟು ವರ್ಷದ ಹುಡುಗಿಯೊಬ್ಬಳು ಅಡ್ಡಹಾಯ್ದು ಮೃತ್ಯುವಿಗೀಡಾದಳಂತೆ! ಹುಡುಗಿಯ ಬಳಿ ಸುಂದರ ಯುವಕನೊಬ್ಬನ 'ಫೋಟೋ'ವಿನ ಹೊರತು ಮತ್ತೇನೂ ಇದ್ದಿರಲಿಲ್ಲವಂತೆ!—

**ಹಾಗಾದರೆ——?**

---



## ಶ್ರೀ ಕೆ. ಕಾಂತಪ್ಪ ಶೆಟ್ಟರು, ಮಂಗಳೂರು

ಇವರು 'ನವಯುಗ' ಪತ್ರಿಕೆಯ ಸಂಪಾದಕರಾಗಿದ್ದಾರೆ. ಶಾಂತಿ ನಿಕೇತನದ ವಿದ್ಯಾರ್ಥಿಗಳಾಗಿದ್ದರು. ಉಗ್ರ ಸುಧಾರಕ ಪಕ್ಷದವರು. ಆದರೂ ಸುಧಾರಕ ಪಕ್ಷದವರೆಲ್ಲರೂ ಮಾಡುವುದನ್ನು ಸರಿಯೆನ್ನುವ ಹಟವಾದಿಗಳಲ್ಲ. ಸಮಾಜ, ಅಂಧಶ್ರದ್ಧೆ, ಧರ್ಮ, ಆಚಾರನಿಷ್ಠೆ ಗಳ ಕುರಿತು ಕತೆಗಳಲ್ಲಿ ನಿರ್ಭೀತ ಅಭಿಪ್ರಾಯಗಳನ್ನು ಕೊಡು ವವರು. ಇವರು ನಾಟಕಕಾರರು ಮತ್ತು ಕತೆಗಾರರು. ಮೊತ್ತ ಮೊದಲು ಕವಿತೆಗಳನ್ನೂ ಬರೆಯುತ್ತಿದ್ದರು. ಆದರೆ ನಿಯಮಬದ್ಧ ವಾಗಿ ಯಾವುದನ್ನೂ ಬರೆಯುವವರಲ್ಲ. 'ಹಲಗೆ ಬಳಪವ ಹಿಡಿಯ ದೊಂದೆಗ್ಗಳಿಕೆ' ಇವರದು. ಅಂದರೆ ಒಮ್ಮೆ ಬರೆದುದನ್ನು ಹಿಂದಿರುಗಿ ನೋಡುವ ಸ್ವಭಾವ ಕಡಿಮೆ. ಆದರಿಂದಲೇ ಇವರ ಕತೆ, ನಾಟಕ ಗಳಲ್ಲಿ ಬಿಗುವು ಕಡಿಮೆ. 'ನಿಜದಾಂಪತ್ಯ' 'ಸಂಶಯ ಪಿಶಾಚಿ' 'ಕುಶ ಲವ' ಮೊದಲಾದ ನಾಟಕಗಳು ಪ್ರಕಟವಾಗಿವೆ. ಸಿಕ್ಕ ಸಿಕ್ಕ ಗುಪ್ತ ನಾಮಗಳಿಂದ ತುಂಬ ಸಾಮಾಜಿಕ ಕತೆಗಳನ್ನು ಬರೆದಿದ್ದಾರೆ.

## ಕೀರ್ತನ ಕಂಠೀರವ

ಕೆ. ಕಾಂತಪ್ಪ ಶೆಟ್ಟರು

Starting to-morrow. Await arrival station. Ramacharya. (ನಾಳೆ ಹೊರಡುವೆನು. ಸ್ಟೇಶನಿನಲ್ಲಿ ಕಾದಿರಿ. ರಾಮಾಚಾರ್ಯ.)

ಅಂಕೋಲೆಯಿಂದ ಬಂದ ಈ ತಂತಿಯನ್ನು ನೋಡಿ, ಮಂಗಳೂರ 'ಕಾಂಗ್ರೆಸ್ ಜನರು' ಆನಂದೋತ್ಸಾಹದಿಂದ ತುಂಬಿದರು. ಜನಸಾಮಾನ್ಯರನ್ನು ರಾಜಕೀಯ ವಿಚಾರದಲ್ಲಿ ಹುರಿದುಂಬಿಸಲು ಆಚಾರ್ಯರ ಹರಿಕೀರ್ತನೆಗಳೇ ಪಂಚಾಕ್ಷರೀ ಮಂತ್ರವೆಂದು ಅವರು ದೃಢ ನಂಬಿದ್ದರು. ರಾಮಾಚಾರ್ಯರು ಇತರ ಕೀರ್ತನಕಾರರಂತೆ ಜರಿ ಪೇಟಾ ಕಟ್ಟಿಕೊಂಡು, ಥಳಥಳಿಪ ಆಲ್ಪಾಕು ನಿಲುವಂಗಿಯ ಮೇಲೆ ಮಿರಿಮಿರಿ ಶಾಲನ್ನು ಪಾದಗಳ ತನಕ ಬಿಟ್ಟು, ಪಟ್ಟೆ ಧೋತ್ರವುಟ್ಟು, ಆಡಂಬರದಿಂದ ಸುಂದರ ರಾವಣನಂತೆ ಮೆರೆದು, ಗಂಧಾಕ್ಷತೆ, ಪುಷ್ಪ ಮಾಲಾಲಂಕೃತರಾಗಿ, ಆರತಿ ಪಾದಪೂಜೆಗಳನ್ನು ಸ್ವೀಕರಿಸಿ, ನೀರಸ ಧಾರ್ಮಿಕ ತತ್ವಗಳಿಗೆ ಕಟ್ಟುಕಥೆಗಳ ಉಪ್ಪುಕಾರ ಹಚ್ಚಿ, ಹರಕೆ ಸಲ್ಲಿಸಿ ಜನರಿಗೆ ಪುಣ್ಯ ಹಂಚುವವರಲ್ಲ.

"ಒಂದೇ ನಾಮವು ಸಾಲದೇ । ಶ್ರೀ ಹರಿಯೆಂಬ ।
ಒಂದೇ ನಾಮವು ಸಾಲದೇ ॥
ಒಂದೇ ನಾಮವು ಭವ । ಬಂಧನ ಬಿಡಿಸುವ- ।
ದೆಂದು ವೇದಗಳು ಆ । ನಂದದಿ ಸಾರ್ವವು ॥"

ಎಂಬ ಪೀಠಿಕೆಯಿಂದ ತನ್ನಷ್ಟಕ್ಕೆ ಒಂದೆಡೆ ಕುಳಿತು "ರಾಮ, ರಾಮ, ರಾಮ" ಅಥವಾ "ನಾರಾಯಣ, ನಾರಾಯಣ, ನಾರಾಯಣ" ಇಲ್ಲವೆ ಒಬ್ಬರ ಹೆಸರನ್ನೇ ಹೇಳುವುದರಿಂದ ಇನ್ನೊಬ್ಬರಿಗೆ ಕೋಪವುಂಟಾಗುವುದಾದರೆ ಬೆಳಿಗ್ಗೆ ನಾರಾಯಣ, ಸಂಜೆ ರಾಮನಾಮ ಸ್ಮರಣೆಯನ್ನು ಮಾಡಿದ ಕೂಡಲೆ ಪಾಪವೆಲ್ಲವೂ ದೂರವಾಗುವುದೆಂಬ ಜಡ ತತ್ವವನ್ನು ಗಿಳಿ ಬಾಯಿಪಾಠ ಹೇಳುವವರಲ್ಲ. ಪ್ರಕೃತದ ವಿದ್ಯಮಾನಗಳಿಗನುಗುಣವಾಗಿ ಧಾರ್ಮಿಕಕ್ಕೆ ರಾಜಕೀಯ ಬಣ್ಣವನ್ನು ಚಿತ್ತಾಕರ್ಷಕವಾಗಿ ಕೊಟ್ಟು, ನೂಲುವ ಚರಕವನ್ನು ಸುದರ್ಶನ ಚಕ್ರಕ್ಕೆ ಸರಿಹೋಲಿಸಿ, ಗಾಂಧಿ, ದಾಸ, ತಿಲಕರನ್ನು ಬ್ರಹ್ಮ, ವಿಷ್ಣು,

ಮಹೇಶ್ವರರೆಂದು ಚಿತ್ರಿಸಿ, ಖಾದಿಯನ್ನು ಕಾಮಧೇನುವಿಗೆ ತುಲನೆಮಾಡಿ, ಜನರಲ್ಲೆಲ್ಲಾ ತಾತ್ಕಾಲಿಕವಾದ ಕ್ಷೋಭೆಯನ್ನುಂಟುಮಾಡುವವರು. ಇಂತಹ ಹರಿದಾಸರು ಬರುವುದೆಂದರೆ ಮಂಗಳೂರ ಕಾಂಗ್ರೆಸ್ ಕೆಲಸಗಾರರು ತಮ್ಮ ಪಾಲಿನ ಭಾಗ್ಯೋದಯವೆಂದೇ ಭಾವಿಸಿಕೊಂಡು ಹಿರಿಹಿರಿ ಹಿಗ್ಗಿದರು.

ಮರುದಿವಸ ಇನ್ನೊಂದು ತಂತಿ! Started today. Arrange procession with elephants and band.—Ramacharya. (ಇಂದು ಹೊರಟಿರುವೆನು. ಆನೆ ಮತ್ತು ಬೇಂಡಿನಿಂದ ಮೆರವಣಿಗೆಯ ವ್ಯವಸ್ಥೆ ಮಾಡಿರಿ.—ರಾಮಾಚಾರ್ಯ.) ಎಂದೇ ತಂತಿಯ ವರ್ತಮಾನ. ಕೂಡಲೆ ಕಾಂಗ್ರೆಸ್ ಕೆಲಸಗಾರರು ಮೆರವಣಿಗೆಯ ಸನ್ನಾಹ ಮಾಡಿದರು. ಸ್ವಯಂ ಸೇವಕರ ಆವೇಶ, ಕಾಂಗ್ರೆಸ್ ಕಡೆಯವರ ಉತ್ಸಾಹ, ಜನರ ಉತ್ಸುಕತೆಯ ಮಧ್ಯೇ ಆಚಾರ್ಯರ ಸವಾರಿ ಬಂದಿಳಿಯಿತು ಸ್ವಯಂಸೇವಕರ ಗಡಣದಿಂದ ಮೆರವಣಿಗೆಯು ಬಹು ಸಂಭ್ರಮದಿಂದ ನಡೆಯಿತು. ಇದೇ ಸುಸಂದರ್ಭ ವೆಂದು ಸ್ವಯಂಸೇವಕರು ನೂರಾರು ಗಾಂಧಿಟೊಪ್ಪಿಗಳನ್ನು ಬಲವಂತದಿಂದ ಸಿಕ್ಕಸಿಕ್ಕವರ ತಲೆಗಿಟ್ಟರು. ನಾನೂ ಒಬ್ಬ ಸ್ವಯಂಸೇವಕನಾಗಿದ್ದು ಮೌನ ವಾಗಿ ಎಲ್ಲವನ್ನೂ ನೋಡುತ್ತಿದ್ದೆನು. ಕೆಲವು ಸ್ವಯಂಸೇವಕರು ಆವೇಶ ಭರದಿಂದ ಆಚಾರ್ಯರನ್ನು ಹೊತ್ತುಕೊಂಡು ಹೋಗಲೂ ತಯಾರಿದ್ದರು. ಆಚಾರ್ಯರು ಓರ್ವ ಸದ್ಗೃಹಸ್ಥರ ಖಾಸಗೀ ಮನೆಯಲ್ಲುಳಿಯುವುದೆಂದು ನಿಶ್ಚಿತವಾಗಿತ್ತು. ಅಂತೆಯೇ ಮೆರವಣಿಗೆಯು ಆ ಮನೆಗೆ ನಡೆಯಿತು. ಆಚಾರ್ಯರು ತನಗೆ ಸಿದ್ಧವಾದ ನಿವಾಸಕ್ಕೆ ಹೋಗಿ, ಅವರನ್ನು ಒಂದೊಮ್ಮೆ ನೋಡಲು ನುಗ್ಗಿ ನುಸುಳುತ್ತಿದ್ದ ಜನರನ್ನು, ರುಕ್ಷ ಸ್ವರದಿಂದ ಸಂಬೋಧಿಸಿ, "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ........." ಎಂಬ ಪುರಾಣವಾದಿ ರಾಜಕೀಯ ಪ್ರಮುಖರ ಪಲ್ಲವಿಯನ್ನೆತ್ತಿ ಹಿಡಿದು, ಉದ್ವೇಗ ಪೂರ್ವಕವಾದ ಎರಡು ಮಾತು ಹೇಳಿ, ತನ್ನ ಸ್ವರ ಬಿದ್ದುಹೋದುದರಿಂದ ಹೆಚ್ಚು ಮಾತಾಡಲಾಗುವುದಿಲ್ಲೆಂದು ಹೇಳಿ ಜನರನ್ನು ಅಂದಿಗೆ ಬೀಳ್ಕೊಟ್ಟರು.

ನಾನೊಬ್ಬ ಸ್ವಯಂಸೇವಕನಾಗಿದ್ದುದರಿಂದ ಆಚಾರ್ಯರ ಬಳಿ ಹೋಗುವ 'ಪ್ರಿವಿಲೆಜು' ನನಗಿದ್ದಿತು. ಆದುದರಿಂದ ನಾನು ರಾಮಾಚಾರ್ಯರ ಹತ್ತಿರ ಹೋಗಿ ಅವರ ಉಡುಪನ್ನು ಪರೀಕ್ಷಿಸಿದೆನು. ಅವರ ಹೆಂಡತಿ

ಮಕ್ಕಳ ಉಡುಗೆಯನ್ನೂ ಲಕ್ಷ್ಯವಿಟ್ಟು ನೋಡಿದೆನು. ಆಚಾರ್ಯರ ಖದ್ದರಿನ ಜಿಬ್ಬವೊಂದು ಮತ್ತು ಗಾಂಧಿಟೊಪ್ಪಿಯ ಹೊರತು ಉಳಿದ ವಸ್ತ್ರವೆಲ್ಲಾ ಗಿರಣಿ ಅಥವಾ ವಿದೇಶಿಯಾಗಿದ್ದಿತು. ನಾನು ಮನಸ್ಸಿನೊಳಗೇನೇ ನಕ್ಕು ಹೊರ ನಡೆದೆನು.

ಕೀರ್ತನ ಕಂಠೀರವ ರಾಮಾಚಾರ್ಯರ ಹರಿಕೀರ್ತನೆಗಳು ನಡೆಯ ತೊಡಗಿದವು. ಈ ಬಿರುದು ಈಗ ಕೆಲವರಿಟ್ಟುಕೊಳ್ಳುವಂತೆ ಸ್ವಯಂದತ್ತ ವಾದುದೋ ಎಂಬೀ ಸಂಶಯವೇ ನನ್ನಲ್ಲಿ ಪ್ರಬಲವಾಗಿದ್ದರೂ, ನಾನು ಆಚಾರ್ಯರನ್ನಿಲ್ಲಿ ಕೀರ್ತನ ಕಂಠೀರವರೆಂದೇ ಸಂಬೋಧಿಸುವೆನು. ಜನರ ಉತ್ಸಾಹವೇ ಉತ್ಸಾಹ! ಹಳ್ಳಿ ಪಳ್ಳಿಗಳಿಂದಲೂ ಜನರು ಬಂದು ಕಿಕ್ಕಿರಿದು ನೆರೆದು ಆಚಾರ್ಯರ ಹರಿಕಥೆ ಕೇಳಿ ಮೆಚ್ಚಿಹೋಗುತ್ತಿದ್ದರು.

"ಬಂದನು ಸಿ. ಆರ್. ದಾಸನು ಭರದಲಿ।
ಇಳಿದನು ಜಬಲ್‌ಪುರ ಸ್ಟೇಶನಲ್ಲಿ ॥"

ಎಂದು ಸ್ಫೂರ್ತಿಯಿಂದ ಹೇಳಿದೊಡನೆಯೇ ಜನರು ಮೆಚ್ಚಿ ಕೈಚಪ್ಪಾಳೆ ಹೊಡೆದು ಬಿಡುತ್ತಿದ್ದರು. ಅನಂತರ ಆಚಾರ್ಯರು ಏನು ಹೇಳುವರೆಂಬ ಗೊಡವೆಯೇ ಅವರಿಗಿದ್ದಿಲ್ಲ. ಆಚಾರ್ಯರೂ ಮುಂದಿನ ಸೊಲ್ಲನ್ನು ಪೂರ್ತಿಗೊಳಿಸುವ ದಾರಿಗಾಣದೆ,

"ತಾನ ತಾನನ ತಾನನ ತಾನನ ತಾನನ ತಾನನ ತಾನನ ॥
ರಾಮರಮಾ ರಮ ರಾಮರಮಾ ರಮ ರಾಮರಮಾ ॥"

ಎಂದು ಕೊನೆಗೊಳಿಸಿ ಬಿಡುತ್ತಿದ್ದರು. ಆಚಾರ್ಯರ ಹಾಡುಗಳು ಹೆಚ್ಚಾಗಿ ಇಂತಹವೇ. ಏನೆಂದರೂ ಒಮ್ಮೆಗೆ ತನ್ನ ವಾಕ್ಚಮತ್ಕಾರದ ಪ್ರವಾಹದಲ್ಲಿ ಜನರನ್ನೆಲ್ಲಾ ಮುಳುಗಿಸಿ ಸೆಳೆದೊಯ್ಯುವ ಶಕ್ತಿಯೊಂದು ಕೀರ್ತನ ಕಂಠೀರವರಲ್ಲಿದ್ದಿತು.

ಸ್ತ್ರೀಯರೆಂದರೆ ಆಚಾರ್ಯರಿಗೆ ವಿಶೇಷ ಪಕ್ಷಪಾತ. ಕೀರ್ತನೆ ಮುಗಿದ ಕೂಡಲೆ ಸ್ವರಾಜ್ಯಫಂಡಿಗೆ ಹಣ ಆಭರಣ ಕೂಡಿಸಲು ಆಚಾರ್ಯರೇ ತೊಡಗುತ್ತಿದ್ದರು. ಸ್ತ್ರೀಯರು ತಮ್ಮ ಆಭರಣಗಳನ್ನು ಕೊಡಬೇಕೆಂದು ಪ್ರತ್ಯೇಕವಾಗಿ ಉತ್ತೇಜಿಸುತ್ತಿದ್ದರು. ಆಚಾರ್ಯರ ಉತ್ತೇಜಕ ವಾಕ್ಸರಣಿಯ ಬಲೆಯಲ್ಲಿ ಸಿಕ್ಕಿದ ಎಂತಹ ಲೋಭಿಯ ಮನಸ್ಸೂ ಒಮ್ಮೆಗೆ ತಲ್ಲಣವಾಗುತ್ತಿತ್ತು.

ಹಣಮಾತ್ರವಲ್ಲದೆ ಉಂಗುರ, ಬಳೆ, ಸರ, ಒಂಟಿ ಮೊದಲಾದ ಆಭರಣಗಳೂ ಸ್ವರಾಜ್ಯಫಂಡಿಗೆ ಅರ್ಪಿತವಾದವು. ಕೊನೆಯಲ್ಲಿ ಆಚಾರ್ಯರೇ ಅವುಗಳನ್ನೆಲ್ಲಾ ಏಲಂ ಹಾಕಿ ಸ್ಫೂರ್ತಿಯ ಮಾತುಗಳಿಂದ ಮೇಲಾಟವೆಬ್ಬಿಸಿ ಆದಷ್ಟು ಹೆಚ್ಚಿನ ಹಣ ಪಡೆಯುತ್ತಿದ್ದರು. ಹೊಸತಾಗಿ ಹೊರಟ ಭೂತದ ಪ್ರಭಾವದಂತೆ ಕೀರ್ತನ ಕಂಠೀರವರ ಪ್ರಭಾವ ಹಬ್ಬಿಬಿಟ್ಟಿತು. ಆಚಾರ್ಯರು ಅದೇಕೋ ಸ್ತ್ರೀಯರಿಗಾಗಿ ಪ್ರತ್ಯೇಕ ಹರಿಕೀರ್ತನೆಯೊಂದನ್ನು ಏರ್ಪಡಿಸಿದರು. ಪುರುಷರಾರೂ ಬರಬಾರದೆಂದು ಆಜ್ಞೆಮಾಡಿದರು. ನಾನು ಸ್ವಯಂಸೇವಕನೆಂದು ಆಜ್ಞೆಯನ್ನು ಉಲ್ಲಂಘಿಸಿ ಹೋಗಿಬಿಟ್ಟೆನು. ಆಚಾರ್ಯರಿಗೆ ಆರತಿ, ಪುಷ್ಪಹಾರ ಅರ್ಪಣೆ, ಪಾದಪೂಜೆಗಳು ಸಾಂಗವಾಗಿ ನಡೆದವು. ಆಚಾರ್ಯರ ಅಂದಿನ ಪರಿಯೇ ಬೇರೆ. ಹಿಂದೂ ಸ್ತ್ರೀಯರ ಪಾತಿವ್ರತ್ಯ, ದಾನಧರ್ಮಬುದ್ಧಿಗಳನ್ನೆಲ್ಲಾ ಬಹಳವಾಗಿ ಹೊಗಳಿ ಪುರುಷರ ಅನೀತಿ ಅನಾಚಾರಗಳನ್ನು ತೆಗಳಿದರು. ಹರಿಕಥೆಯ ನಂತರ ತಾನೇ ಹರಿವಾಣ ಹಿಡಿದು,

“ಕನ್ನಡದಾಸನು ಬೇಡಲು ಬಂದಿಹ ।
ದಾನವ ದಯದಿಂ ಕೊಡಿರಮ್ಮಾ ॥”

ಎಂಬೀ ಪಲ್ಲವಿ ಹಾಡುತ್ತಾ ಭಿಕ್ಷೆಗೆ ಹೊರಟರು. ದಯಾರ್ದ್ರಹೃದಯರಾದ ಸ್ತ್ರೀಯರು ತಮ್ಮ ಮನೆಯವರೇನೆನ್ನುವರೆಂಬ ಗೊಡವೆಯೇ ಇಲ್ಲದೆ, ಆವೇಶದಿಂದ ವಿಧ ವಿಧ ಆಭರಣಗಳನ್ನು ಹರಿವಾಣದ ಮೇಲೆ ಸುರಿದರು.

* * * * * *

ಆಚಾರ್ಯರು ಯಾವ ಸದ್ಗೃಹಸ್ಥರ ಮನೆಯಲ್ಲಿ ಉಳಿದಿದ್ದರೋ, ಅಲ್ಲಿಂದವರು ಕೂಡಲೆ ಬಿಟ್ಟುಹೋಗಬೇಕೆಂದು ಆ ಗೃಹಸ್ಥರು ಹೇಳಿದುದನ್ನು ಕೇಳಿ ಕಾಂಗ್ರೆಸು ಕೆಲಸಗಾರರೆಲ್ಲಾ ಚಕಿತರಾದರು. ಈ ಸದ್ಗೃಹಸ್ಥರ ದುರ್ವರ್ತನೆಗಾಗಿ ಅವರನ್ನು ಜನರೆಲ್ಲಾ ಹಳಿಯತೊಡಗಿದರು!

* * * * * *

ಆಚಾರ್ಯರು ಹಳ್ಳಿಹಳ್ಳಿಗಳಿಗೂ ಹೋಗಿ ಕೀರ್ತನೆ ಮಾಡಲಾರಂಭಿಸಿದರು. ಅನಂತರಾಮ ಭಟ್ಟರೆಂಬವರು ತನ್ನ ಹಳ್ಳಿಗೆ ಕೀರ್ತನ ಕಂಠೀರವರನ್ನು ಕರೆಸಿ ಹರಿಕೀರ್ತನೆ ಮಾಡಿಸಿದರು. ಭಟ್ಟರು ಆ ಪ್ರಾಂತದಲ್ಲಿ ರಾಷ್ಟ್ರಸೇವೆಗಾಗಿ ತನ್ನ ತನುಮನಧನವನ್ನರ್ಪಿಸುತ್ತಿರುವವರು. ತನ್ನ ಊರಿನ ಆಸು

ಪಾಸಿನ ಜನರಲ್ಲಿ ರಾಜಕೀಯ ಜಾಗ್ರತಿಯನ್ನುಂಟುಮಾಡುವ ಸಂದರ್ಭವೇನು ದೊರೆತರೂ ಅದನ್ನವರು ಎಂದೂ ಬಿಟ್ಟುಬಿಡುತ್ತಿದ್ದಿಲ್ಲ. ಕೀರ್ತನ ಕಂಠೀರವರಿಗೆ ಅನಂತರಾಮುಭಟ್ಟರ ಮನೆಯಲ್ಲಿ ಭೋಜನಸತ್ಕಾರವು ಬಹಳ ಸಂಭ್ರಮದಿಂದ ನಡೆಯಿತು. ಮರುದಿವಸ ಬೆಳಿಗ್ಗೆ ಆಚಾರ್ಯರು ಹಿಂತೆರಳುವವರಿದ್ದರು. ಅನಂತರಾಮುಭಟ್ಟರು ಆಚಾರ್ಯರಿಗೆ ಭೋಜನಸತ್ಕಾರ ಮಾತ್ರವಲ್ಲ; ಆಭರಣಗಳನ್ನೂ ಅರ್ಪಿಸಿ, ತಾನೂ ಗೌರವ ಪಡೆಯಬೇಕೆಂದಿದ್ದರು. ಅವರ ಪತ್ನಿಯೂ ಇದಕ್ಕೆ ಒಪ್ಪಿದರು. ಮರುದಿನ ಆಚಾರ್ಯರು ಬೀಳ್ಕೊಟ್ಟಾಗ ಅವರು ತನ್ನ ಕೈಯ ಚಿನ್ನದ ಬಳೆಗಳನ್ನು ಕಳಚಿ ಕೊಟ್ಟರು. ಆಚಾರ್ಯರು ಅವರಿಬ್ಬರ ತಲೆಯ ಮೇಲೂ ಪ್ರಶಂಸೆಯ ಮಳೆಗರೆದು, "ಈ ಆಭರಣಗಳು ದಾಸ್ಯದಿಂದ ನರಳುವ ಹಿಂದೂಮಾತೆಯ ಬಂಧವಿಮೋಚನೆಗಾಗಿ ಉಪಯೋಗಿಸಲ್ಪಡುವುವು"ಎಂದು ಆಶ್ವಾಸನೆಯಿತ್ತರು.

* * * * * *

ಕೆಲವು ದಿನಗಳು ಗತಿಸಿ ಹೋದುವು. ಅನಂತರಾಮುಭಟ್ಟರ ಪತ್ನಿಯು ಮಂಗಳೂರಲ್ಲಿದ್ದ ತನ್ನ ತಾಯ ಮನೆಗೆ ಬಂದಿದ್ದರು. ಒಂದು ದಿನ ಸಂಜೆ ನೆರೆಮನೆಯ ವೇಶ್ಯೆ ಕಲಾವತಿಯೊಡನೆ ಮಾತಾಡುತ್ತಿದ್ದಾಗ ಆಕೆಯ ಮುಂಗೈಯ್ಯಲ್ಲಿ ತಾನು ಆಚಾರ್ಯರಿಗೆ ಅರ್ಪಿಸಿದ ಬಳೆಗಳನ್ನು ಕಂಡು ಅವರ ಎದೆ ಧಸ್ಸೆಂದಿತು.

**'ಈ ಬಳೆಗಳು ದಾಸ್ಯದಿಂದ ನರಳುತ್ತಿರುವ ಹಿಂದೂ ಮಾತೆಯ ಬಂಧವಿಮೋಚನೆಗಾಗಿ ಉಪಯೋಗಿಸಲ್ಪಡುವುವು!'**



## ಶ್ರೀ ಎಮ್. ಎನ್. ಕಾಮತರು, ಮಂಗಳೂರು

ಆಧುನಿಕ ಸಾಹಿತ್ಯಕ್ಕೆ ಕಳೆಯೇರಿಸಿ ಅದನ್ನು ಬೆಳೆಸಿದ ಹಿರಿಯಸಾಹಿತಿಗಳಲ್ಲಿವರೊಬ್ಬರು. ಸಾಹಿತ್ಯೋನ್ನತಿಗಾಗಿ ಕಳೆದ ಕಾಲು ಶತಮಾನದಿಂದ ಅವಿಶ್ರಾಂತವಾಗಿ ಹಂಬಲಿಸುವ, ದಣಿಯುವ ಅಸಾಧಾರಣವಕ್ತೃಗಳು, ಉತ್ತಮ ಕವಿಗಳು, ಕತೆಗಾರರು, ಕಾದಂಬರೀಕಾರರು, ನಾಟಕಕಾರರು, ವಿನೋದೀ ಲೇಖಕರು, ಭಾಷಾಂತರಕಾರರು ಇತ್ಯಾದಿ. ಕೆನರಾ ಹೈಸ್ಕೂಲಿನ ಅಧ್ಯಾಪಕರಾಗಿದ್ದಾರೆ 'ಆನಂದ', 'ಬೋಧಿನಿ' ಪತ್ರಿಕೆಗಳ ಸಂಪಾದಕರಾಗಿದ್ದರು. ಮಧ್ಯ ಸಂಪ್ರದಾಯದ ಲೇಖಕರಿವರು. ಪ್ರಾಸವಾದಿಗಳು.

'ಅಸ್ವತ್ಥತ್ಯಾಗ' 'ಕುಮಾರ ಭೀಮಸಿಂಹ', ಚಂಚಲ ಮೊದಲಾದ ಕಾದಂಬರಿಗಳನ್ನೂ' 'ಚಂದ್ರಹಾಸ' 'ಕೃಷ್ಣಸಂಧಾನ' ಮೌರ್ಯಸಿಂಹಾಸನ, 'ಮೆಂಬರು' ಮೊದಲಾದ ನಾಟಕಗಳನ್ನೂ 'ಭೀಷ್ಮ', 'ಕರ್ಣನಕಥೆ', 'ಗದಾಯುದ್ಧ', 'ಸೀತಾರಾಮ', 'ಕ್ಷಾತ್ರತೇಜ' ಮೊದಲಾದ ಕಥೆಗಳನ್ನೂ ಪ್ರಕಟಿಸಿದ್ದಾರೆ. ಮಕ್ಕಳ ಸಾಹಿತ್ಯವನ್ನು ತುಂಬ ಪೂರಯಿಸಿದ್ದಾರೆ. ಕನ್ನಡ ಏಕಾಂಕ ನಾಟಕಗಳಿಗೆ ಇವರೇ ಮೂಲಪುರುಷರೆನ್ನಬಹುದು. ಏಕಾಂಕ ನಾಟಕಗಳ ನಿರ್ಮಾಣದಲ್ಲಿ ಇವರು ಸಾಫಲ್ಯವನ್ನು ಪಡೆದಿದ್ದಾರೆ. ಎಷ್ಟೋ ಏಕಾಂಕ ನಾಟಕಗಳನ್ನು ಬರೆದಿರುವರು.

ಇವರ ಕತೆಗಳು ನಗುವಿನ ಬುಗ್ಗೆಗಳು. ಅದರಿಂದಲೇ ಒಂದೊಂದು ಬಾರಿ ಕತೆಗಳ ಮೇರೆಯನ್ನು ದಾಟಿ ಹರಟೆಯ ರಾಜ್ಯಕ್ಕೆ ಸೇರುವುದುಂಟು. ಆದರೂ ಇವರ ಕತೆಗಳಲ್ಲಿ ಒಂದು ತರದ ಚಮತ್ಕಾರವಿರುವುದರಿಂದ ತುದಿಯವರೆಗೂ ಓದಿಬಿಡುವ ಎನಿಸುತ್ತದೆ

# ಆ ಮಗು

ಎಮ್. ಎನ್. ಕಾಮತರು

'ದೇವರ ಭಯವೇ ಜ್ಞಾನದ ಆರಂಭ'ವೆಂದು ದೇವರ ಆಜ್ಞೆಗಳಿಗೆ ಭಯ ಪಡುವರು. 'ಇಡು ವಿಶ್ವಾಸಮಂ ರಾಯನೊಳ್' ಎಂಬುದಕ್ಕಾಗಿ, ರಾಜನಲ್ಲಿ ವಿಶ್ವಾಸವನ್ನಿಡುವರು. ಆದರೆ ಮಗುವಿನಲ್ಲಿ ಮಾತ್ರ ಭಯ-ಭಕ್ತಿಗಳೆರಡನ್ನೂ ಇಡಲಾಗುವುದಿಲ್ಲ. ಮಗು ಸಣ್ಣ ಮೂರ್ತಿಯಾದರೂ, ಅದರ ಕೀರ್ತಿ ದೊಡ್ಡದೇ ಇದೆ. ನನಗಂತೂ ಆ ಮಗುವೆಂದರೇ, ಭಯ, ಭೀತಿ; ಏಕೆಂದರೆ ಆ **ಮಗು** ಎಂಬ ಆ ಎರಡಕ್ಷರಗಳಲ್ಲೆ **ಮಕ್ಕಳ ಗುಂಪು** ಅಡಗಿರುವಂತೆ ಈಗಲೂ ಭಾಸವಾಗುತ್ತಿದೆ. ಮಗುವು ಹಬ್ಬ ಉತ್ಸವಾದಿಗಳ ಕಾಲದಲ್ಲಿ, ಮುಖ್ಯವಾಗಿ ರಥೋತ್ಸವದ ಮತ್ತು ವಿವಾಹಾದಿ ಸಂಭ್ರಮಗಳ ಕಾಲದಲ್ಲಿ, ಸಹಸ್ರ ರೂಪಗಳನ್ನು ಧರಿಸಿ ವಿಹರಿಸುವುದು. ಹಾಗೆಂದು, ಅದೇನೋ ರೋಗಕಾರಕ ಅಣುಗಳಂತೆ ಮಾರಕವಾಗಿಲ್ಲ. ಕಚ್ಚುವುದುಂಟು; ನಾಲ್ಕು ಹಲ್ಲುಗಳೂ ಕಚ್ಚಿದಲ್ಲಿ ಮೂಡುವುದುಂಟು. ಕೂಡಲೇ ಮಗುವಿನ ಮೂಗೊತ್ತಿದಲ್ಲಿ, ಆಗಲೆ ಹಲ್ಲಿನ ವಿಷವೇರದೆ, ಗಾಯದ ನೋವೂ ವಿಷವೂ ಶಮನ ಹೊಂದುವುದುಂಟು. ಕೂದಲು ಮುಚ್ಚಿದ ತಲೆಯೊಂದು, ಮತ್ತೆಲ್ಲವೂ ವಿಚಿತ್ರತೆರದಲ್ಲಿ ಸುತ್ತಿದ ಬಟ್ಟೆಯ ಮುದ್ದೆಯಂತೆ ಕಾಣುತ್ತಿರುವುದೇ ಕೂಸು.

ನಾನು ಹೇಳುತ್ತಿರುವ ಕತೆಯ ಆ ಮಗು, ಒಂದು ಕಾಲದಲ್ಲಿ ಕೂಸಾಗಿಯೇ ಇದ್ದಿತು. ಅದು ಹುಟ್ಟುವಾಗಲೆ, ಚಿಣಿಕೋಲು ಚೆಂಡು ಬುಗರಿಗಳನ್ನು ಧರಿಸಿಕೊಂಡೇ ಅವತರಿಸಿದ್ದಿತು. ತಂದೆಯಂತೂ ಜನನವಾಯಿತೆಂದು ಬೇಬಿಯ ಕೂಗಿನ ದನಿಯನ್ನು ಕೇಳಿದ ಒಡನೆಯೇ, ನಾಲ್ಕು ರೇಶ್ಮೆ ಅಂಗಿಗಳನ್ನೂ, ಒಂದು ಜತೆ ಬೂಟಸನ್ನೂ, ಜರತಾರಿಯದೊಂದು ಟೊಪ್ಪಿಯನ್ನೂ, ಎರಡು ಮೊಳ ಎತ್ತರದ ಗೊಂಬೆಯೊಂದನ್ನೂ, ಒಂದು ಕ್ರಿಕೆಟ್ ಬೇಟನ್ನೂ, ಒಂದು ಚಿಕ್ಕ ಗಾಡಿ ಮತ್ತು ಅದಕ್ಕೊಂದು ಆಡನ್ನೂ ತಂದೇ ಮಗುವಿನ ಮೋರೆ ನೋಡಲು ಬಂದವನು. ಮಗು ಆ ಕುಟುಂಬದಲ್ಲಿ ಮೊದಲನೆಯದು. ದಂಪತಿಗಳು ಆ ಮಗುವಿನ ಹಾದಿ ನೋಡುತ್ತಾ ಕಾದು ಬೇಸತ್ತವರು ಮಗುವಿಗೆ ನಾಮಕರಣವಾಗುವ ತನಕ, ಆ ಮನೆಯಲ್ಲಿ ಸದಾ ಕೋಲಾಹಲ. ಯಾ

ರಿಗೂ ಹಸಿವೂ ಇಲ್ಲ, ನಿದ್ದೆಯೂ ಇಲ್ಲ. ನಾಮಕರಣವಾಯಿತೋ, ಆ ದಿನ ಆ ಕಡೆಯ ಈ ಕಡೆಯ ಹತ್ತೆಂಟು ಗೃಹಸ್ಥರು, ಸಕುಟುಂಬ ಪರಿವಾರಯುಕ್ತ ರಾಗಿ, ದಾಸ-ದಾಸೀಜನಗಳೊಡನೆ, ಮಗುವಿನ ಮನೆಗೇ ಬಂದರು. ಮನೆ ಸಣ್ಣದಾದ ಬಳಿಕ, ತೊಟ್ಟಿಲನ್ನು ಬಚ್ಚಲಲ್ಲಿ ಇರಿಸಬೇಕಾಯಿತು. ಬಂಧುಗಳು ಊಟದ ಹೊತ್ತಿಗೆ ಮನೆಯೊಳಕ್ಕೆ ಸಾಲಾಗಿ ನುಗ್ಗಿ ಸಂಭ್ರಮವಾಗಿ ಕುಳಿತರೆ, ಅದೊಂದು ವೈಕುಂಠ ಸಮಾರಾಧನೆಯಂತೆ ತೋರುತಿತ್ತು. ತಾಯಿ ಮಗು ವಿನ ಬಳಿಯಲ್ಲಿ ತೊಟ್ಟಿಲನ್ನು ತೂಗಿ ಕುಳಿತಳು. ಕಾಗೆ ಎತ್ತಿಕೊಂಡರೆ? ಇರುವೆ ಕಡಿದರೆ? ನೋಡಬಂದವರಿಗೆ ಮಗುವಿನ ವಿವರ ಹೇಳುವುದಕ್ಕೆ, ಇನ್ನಾರು? ಮಗು 'ಕೂಗುವ ಸಮಯದಿ । ತೂಗುತ ತೊಟ್ಟಿಲ । ಜೋಗುಳ ಪಾಡಿದ' ತಾಯಿಯಲ್ಲವೆ? ತಂದೆ, ಬಂದವರನ್ನು ಕುಳ್ಳಿರಿಸಿ, ಫಲಾಹಾರ ವನ್ನೋ ಭೋಜನವನ್ನೋ ಮಾಡಿಸಿ, ಮಗುವಿನ ಗುಣಗಾನ ಹಾಡುವುದ ರಲ್ಲೇ ಮಗ್ನನು. ಎಲ್ಲರ ಉಪಚಾರಗಳು ಮುಗಿದ ಬಳಿಕವೇ, ಉಳಿದಿದ್ದರೆ ಊಟ; ಇಲ್ಲದಿದ್ದರೆ ಮಗು! ಅಷ್ಟೇ ಇವರಿಬ್ಬರ ಗತಿ.

ಕೂಸು ಬೆಳೆದು ಶಿಶುವಾಯಿತು. ಮನೆಯೊಳಗೆ ಸುಳಿದಾಡಲು ಶಿಶು ವಿಗೆ ಬೇರೆ ಯಾರೂ ಕಲಿಸಬೇಕಾಗಿಲ್ಲವಷ್ಟೆ? ಬೇಡವಾದಲ್ಲಿ ಬೀಳುವುದೂ, ಒಲೆಯ ಬಳಿಯಲ್ಲಿ ಕಾಯಿಸಿಕೊಳ್ಳುವುದೂ, ಕುದಿಯುವ ನೀರಿನ ಶಾಕ ನೋಡುವುದೂ, ಗುಂಡುಸೂಜಿಗಳನ್ನು ನುಂಗುವುದೂ, ಬಟ್ಟೆಗಳೊಳಗೆ ಸೇರಿ ಕೊಂಡು ಗಲಾಟೆಯೆಬ್ಬಿಸುವುದೂ, ಸಾಬೂನನ್ನು ಚಾತಟ್ಟೆಯೊಳಕ್ಕೆ ಚೆಲ್ಲು ವುದೂ ಇವಿಷ್ಟೆ ಆಗ ಅದರ ಸಾಹಸ ಕಾರ್ಯಗಳಾದುವು. ಶಿಶುವು ಮಗು ವಾಗುತ್ತ ಬೆಳೆಯುತ್ತ ಬರುವಾಗ, ದಿನಕ್ಕೊಂದು ಪೈಯಂತೆ ನುಂಗುತಿರು ವುದೂ, ಹೊಸ್ತಿಲು ದಾಟುವ ರಭಸದಲ್ಲಿ ಮೂರು ಬಾರಿ ನಮಸ್ಕಾರ ಹಾಕು ವುದೂ ಅದರ ಉದ್ಯೋಗಗಳು. ಏಣಿ ಹತ್ತಿ ನಾಲ್ಕು ಮೆಟ್ಟಲನ್ನು ಒಂದೇ ಸಲ ಕೆಳಕ್ಕಿಳಿದುದೂ ಇದೆ; ಜಗಲಿ ಹಾರಿ ಅಂಗಳಕ್ಕಿಳಿದು ಬಿದ್ದುದೂ ಉಂಟು. ಕತ್ತಲಲ್ಲಿ, ಹೊಸ್ತಿಲ ಮರೆಯಲ್ಲಿ ಮಲಗಿಕೊಳ್ಳುವುದೂ, ಹತ್ಯವಾಗದೆ ಉಳಿದಲ್ಲಿ ಗೋಡೆಗೆ ತಲೆ ಬಡಿದುಕೊಂಡು ಗೋಡೆಗಳಿಗೆಲ್ಲ ಬಿರುಕುಗಳನ್ನುಂಟುಮಾಡು ವುದೂ ಅದರ ಪ್ರತ್ಯೇಕ ಲಕ್ಷಣ. ತಾಯಿಯು ಕೂಸು ಬೆಳೆದು ಮಗುವಾ ಯಿತೆಂದು ತಿಳಿದೊಡನೆ ಅದನ್ನು ಗುಮ್ಮನ ಗೆಳೆತನಕ್ಕೆ ಒಪ್ಪಿಸಿಕೊಟ್ಟು, ನೆರಳು

ಗಳೆಲ್ಲವೂ ಭೂತಗಳೆಂದೂ, ಕತ್ತಲೆಲ್ಲ ಭಯಂಕರವೆಂದೂ ಜ್ಞಾನಮಾರ್ಗವನ್ನು ಬೋಧಿಸಿದಳು.

ತಂದೆ ಮಗುವನ್ನು, ಅಂದು ತಂದಿದ್ದ ಆ ಗಾಡಿಯಲ್ಲಿ ಸಿಂಗಾರಮಾಡಿ ಕುಳ್ಳಿರಿಸಿ ಆಡನ್ನು ಹೂಡಿ ಓಡಿಸುತ್ತ ಮೈದಾನು ಮಾರ್ಗವಾಗಿ, ಶಹರ ಸಂಚಾರವನ್ನು ಆರಂಭಿಸಿದನು. ಕಸಾಯಿಗಳು, ಹಣೆಗೆ ಕೆಂಪು ಮೊಹರು ಹಾಕಿ ನಾಳೆಯ ತನಕ ಹುಲ್ಲು ಮೇಯಲೆಂದು ಬಿಟ್ಟ ಆಡುಗಳು, ಈ ಸವಾರಿ ಆಡನ್ನು ಕಂಡೇ ರೇಗತೊಡಗಿದುವು. ಈ ದಿವ್ಯ ಆಡಿನೊಡನೆ ಒಂದು ಸಲ ಆಡಿ ನೋಡೋಣವೆಂದು ಒಂದೆರಡು ಮುಂಬರಿದುವು. ಮಗು, 'ಥೈ' ಎಂದು ಕೈ ನೀಡಿ, ಈ ಆಡುಗಳನ್ನು 'ಶೇಕ್‌ಹೇಂಡ್' ಮಾಡಿಯೇ ಬಿಟ್ಟಿತು. ತಂದೆ 'ಸೈ' ಎಂದು ಪರಸ್ಪರ ಪರಿಚಯ ಮಾಡಿಕೊಡತೊಡಗಿದನು. ಆದರೆ, ಹೂಡಿದ ಆಡಿಗೆ ಇದೆಲ್ಲ ಗೊತ್ತಿರಬೇಕು? ಅದು ತನ್ನ ಶ್ರೀಮಂತಿಕೆಯನ್ನು ಪ್ರಕಟಿಸ ಬೇಕೆಂದು ಕೂಡಲೆ ತಲೆಬಾಗಿ ಎದುರಿಗೆ ಬರುತಿದ್ದ, ಹಣೆ ಮೊಹರಿನ ಆಡಿಗೆ, ಒಂದು ಸಲ ಢಿಕ್ಕೆ ಹೊಡೆಯಿತು ಗಾಡಿ ಜಗ್ಗಿದಂತಾಗಿ, ಮಗು 'ಥೈ ಥೈ' ಎಂದಿತು; ಅಳಲಿಲ್ಲ. ಹಣೆಗೆ ಮೊಹರಿದ್ದ ಬಳಿಕ, ಆ ಆಡೇನು ತನ್ನ ಹಣೆಯ ಬರಹಕ್ಕೆ ಅವಮಾನ ಮಾಡುವಂಥದೇ? ಸರಿಯಾಗಿ ಢಿಕ್ಕೆ ಹೊಡೆಯಿತು. ಆ ಢಿಕ್ಕೆ—ಈ ಢಿಕ್ಕೆ ಎನ್ನುವುದರೊಳಗೆ, ವಿನೋದದಿಂದ ವಿಷಾದಕ್ಕಾರಂಭ. ಗಾಡಿ ಮುರಿಯಿತು. ಆಡುಗಳೆರಡೂ ಜಟ್ಟಿ ಕಾಳಗಕ್ಕಾರಂಭಿಸಲು ಗಾಡಿ ಯಿಂದ ಮಗು ಕೆಳಕ್ಕೆ ಉರುಳಿತು. ನೆಲಕ್ಕೆ ಅಪ್ಪಳಿಸಿದಂತಾದರೂ, ಅನು ದಿನವೂ ಈ ಸದಭ್ಯಾಸದಲ್ಲಿ ತರಬೇತು ಹೊಂದಿರುವ ಕಾರಣ, ಬೇನೆ ಬೀಳ ಲಿಲ್ಲ; ಗಾಡಿಯನ್ನೂ ಆಡನ್ನೂ ಅಲ್ಲೇ ಬಿಟ್ಟು, ತಂದೆ ಮಗುವನ್ನೆತ್ತಿಕೊಂಡು ಮನೆಗೆ ಹೊರಟನು. ಮನೆಯಲ್ಲಿ ತಾಯಿ ಮಗುವನ್ನು ಕಂಡಳು; ನಾಲ್ಕೇ ಗಾಯಗಳಾಗಿವೆ. ಆದರೂ ಅವಳು ಮಗುವಿನ ತಂದೆಯ ಕಡೆಗೆ ಬೀರಿದ ಆ ದೃಷ್ಟಿಯಿಂದ ಅವನು ಚುರಚುರನೆ ಬೆಂದನು; ಅವಳಿಗೆ ರೋಷವೇರಿ, ಅವಳುಟ್ಟ ಸೀರೆಯೇ ಬಣ್ಣಕೆಟ್ಟಿತೆಂದು ತಿಳಿದು, ಬೆಂಗಳೂರು ಸೀರೆಯೊಂದನ್ನು ಕೊಂಡುಕೊಂಡು ಅಂದೇ ರಾತ್ರಿ ಅವಳಿಗೆ ತಂದುಕೊಟ್ಟನು. ಆಗ ಅವಳ ಕಟಾಕ್ಷವು ಬೇರೇ ಬಗೆಯಾಗಿದ್ದಿತಾದರೂ, ಮಗುವಿನ ಗಾಯಗಳು ಮಾಯದೆ ಇದ್ದುದು ನಿಜವಾಗಿಯೂ ಆಶ್ಚರ್ಯ.

ಮೂಗು ತುಂಬ ಸುರಿದು, ಮುಖ ತುಂಬ ಚಿತ್ತಾರವುಂಟಾಗದೆ ಇದ್ದಲ್ಲಿ, ಅದು ಮಗುವಲ್ಲವೆಂಬುದು ನಿಜ; ಆದರೆ, ಅಂಥದನ್ನು ಮುದ್ದಾಡಬೇಕೆಂದರೆ, ಆಗದ ಕೆಲಸಕ್ಕೊಪ್ಪುವರಾರು? ಹೊನ್ನಮರಿಯೇನೋ ಇರಬಹುದು, ಅದನ್ನು ಕೊಂಡಾಡದೆ ಹೋದರೆ, ತಂದೆಯ ತಿರಸ್ಕಾರವೆಷ್ಟು? ತಾಯಿಯ ತುಚ್ಛೀಕಾರವೆಷ್ಟು? ಅದರಲ್ಲೂ ಒಂದೆರಡು ಸಲ ಹೇಗೂ ಚಂದಗಾಣಿಸಿ ಕೊಳ್ಳಬಹುದು. ಪ್ರತಿ ದಿನ,—ಆ ಮಗುವನ್ನು ಮುದ್ದಾಡದೆ, ಅವರು ನಮ್ಮ ಮನೆಯ ಧನಿಯರಾದ ಕಾರಣ ನನ್ನ ಬಿಡಾರದೊಳಗೆ ನಾನು ಕಾಲಿ ಡುವುದು ಧರ್ಮವಲ್ಲವೆಂದು ಅಂತರಂಗದಲ್ಲಿ ಅವರು ಮಾಡಿಟ್ಟುಕೊಂಡರೆ,— ಹೇಗೆ ಸೈರಿಸಬಹುದು? ಅಂಥ ಮಕ್ಕಳೇ ನನ್ನಲ್ಲಿಯೂ ನಾಲ್ಕಾರು ಇವೆ ಎಂದು ತಿಳಿದೂ ಈ ಪೀಡೆಯಾದರೆ?—ಇರಲಿ, ಇಂಥ ಮೂಗೊಸರುವ ಮಕ್ಕಳನ್ನು ಮುದ್ದಾಡುವುದೇ ಬಾಡಿಗೆಗೆ ನಿಂತ ಗೃಹಸ್ಥರಿಗೊಂದು ಸಂಕಟವೆಂದು, ಇಂಥ ಪೀಡೆಗೇ ಬಾಲ-ಗ್ರಹ ಎಂಬುವ ಹೆಸರನ್ನು ಕೊಟ್ಟಿರಬೇಕು. ಮತ್ತೆ ಮತ್ತೆ ಆ ಮಗುವನ್ನು ಕಂಡರೂ ಕಾಣದಂತೆ, ಅದು ಮರೆಯಲ್ಲಿರಲೆಂದು ಬೇಕೆಂದೇ ನನ್ನ ಕೊಡೆಯನ್ನು ಅದರ ಇದಿರಲ್ಲೇ ಮಡಚಿಕೊಂಡು, ಬಿಡಾರದೊಳಕ್ಕೆ ಕಾಲಿಟ್ಟೆನು. ಅದುವರೆಗೆ ನನ್ನನ್ನು ಕಂಡರೆ, ಸರ್ಕಸಿನಲ್ಲಿನ 'ಕ್ಲೌನ್' (ಹಾಸ್ಯಗಾರ)ನಂತೆ ನಗುತಿದ್ದ ಮಗುವಿನ ತಂದೆ—ಆ ದಿನದಿಂದ ನನ್ನನ್ನು ಕಂಡೊಡನೆ, ಅವನ ಅಜ್ಜಯ್ಯನು ತೀರಿದ ದುಃಖವಾರ್ತೆಯನ್ನು ಕೇಳಿದಂತೆ ಕಡು ಜೋಲುಮೋರೆ ಮಾಡಿ ನೋಡತೊಡಗಿದನು. ಹೆತ್ತವರಿಗೆ ಹೆಗ್ಗಣ ಮುದ್ದು!

ಇದಾದ ಕೆಲ ದಿನಗಳಲ್ಲಿ ಮುನಿಸಿಪಾಲಿಟಿಯವರೇನೋ ಆ ಮಗುವಿಗೆ ದಾಕು ಹಾಕಿಸಲು ನೋಟೀಸು ಮೂಲಕ ಒತ್ತಾಯ ಮಾಡಿದರು. ಅದೂ ಹನ್ನೆರಡನೆಯ ಬಾರಿ. ಪ್ರತಿಸರ್ತಿ ನೋಟೀಸು ಬಂದಾಗ,—ಮೂಲವ್ಯಾಧಿ, ಭಗಂದರಗಳಂಥ ನಾನಾ ರೋಗಗಳ ಪೀಡೆಯಿದೆ ಎಂದು ಅರ್ಜಿ ಕೊಡಿಸಿ, ವಾಯಿದೆ ಮುಂದರಿಸಿ, ಇಲ್ಲಿಯ ತನಕ ದಾಕೇ ಚುಚ್ಚಿರಲಿಲ್ಲ. ತಾಯಿಯ ತೊಡೆಯ ಮೇಲೆ, ತಂದೆಯ ತೋಳಲ್ಲಿ ಮಗುವನ್ನು ಕುಳ್ಳಿರಿಸಿ,—ಎರಡೆರಡು ಬೊಕ್ಕೆ ಏಳುವಂತೆ ದಾಕಿನ ಸಂಸ್ಕಾರ ಮಾಡಿಸಿದ್ದಾಯಿತು. ಬೊಕ್ಕೆ ಏಳ ದಿದ್ದರೆ ಮೋಸವೆಂದು ನಾನಾ ತೆರದ ಆರೈಕೆಗೂ ಪ್ರಾರಂಭವಾಯಿತು. ಆ ಬಳಿಕ, ನಮ್ಮ ವಠಾರದಲ್ಲಿ, ಹಗಲೂ ರಾತ್ರಿ ಶಾಂತಿಯೇ ಇಲ್ಲ. ದಾಕು

ಚುಚ್ಚುವುದೆಂದರೆ,—ಊರಿನ ಶಾಂತತಾಭಂಗವನ್ನು ಉಂಟುಮಾಡಬೇಕೆಂದಿದೆಯಾದರೆ,—ಮುನಿಸಿಪಾಲಿಟಿಗೆ ಇಷ್ಟು ಪ್ರಬಲವಾದ ಅಧಿಕಾರವನ್ನೇತಕ್ಕೆ ಕೊಟ್ಟಿರುವರೋ ತಿಳಿಯದು. ರಟ್ಟೆಯೆರಡೂ ಉಬ್ಬಿ ಕೆಂಪಾದ ಮಗು, ಕೈಯಿಂದ ದುಡುಕಲಾರದುದನ್ನು ಮೂಗಿನಿಂದಲೂ ಕಾಲುಗಳಿಂದಲೂ ಒದೆದು ಒದೆದು ಸಾಧಿಸತೊಡಗಿತು. ತನಗೆ ಆಮಶಂಕೆಯಾಗಿದೆ ಎಂದು ತಂದೆ ರಜಾ ಪಡೆದನು; ಮಗುವು ಅಳುವಾಗ ತಾನೂ ಅಳುವುದಕ್ಕೆ ಹತ್ತಿರವಿರಬೇಕೆಂದು, ತಾಯಿ ಮನೆಗೆಲಸಕ್ಕೊಂದು ತೊತ್ತನ್ನಿಟ್ಟುಕೊಂಡಳು.

ಹೀಗಿರುತ್ತಲೊಂದು ದಿನ, ರಾತ್ರಿಯಲ್ಲಿ, ಊರಜನರೆಲ್ಲರೂ ನಿದ್ದೆಹೋಗುವ ಸಮಯವಾದುದರಿಂದ ಇನ್ನೂ ಉರಿಯುವ ಆಗತ್ಯವೇನೂ ಇಲ್ಲವೆಂದು ರಸ್ತೆಯ ಲಾಂದರಗಳು ನೊಂದಿಹೋಗಿರಲು, ಆ ಮಗು,–ರವಿವಾರದ ಭೋಜನಕ್ಕೆ ಸಿದ್ಧವಾಗಲು ಹೊರಟು, ಶನಿವಾರದ ಸಾಯಂಕಾಲದಲ್ಲಿಯೇ ಕಸಾಯಿ ಕೋಣೆಯಲ್ಲಿ ದೇವತಾಸ್ತೋತ್ರವನ್ನು ಮಾಡುವ ಹಂದಿಗಳ ಮಧುರಧ್ವನಿಯಿಂದ, ಒಂದೇ ಬಾರಿ ಅರಚಿಕೊಂಡಿತು! ಮಗುವನ್ನು ಕೂಡಲೆ ಉಪಚರಿಸುವುದಕ್ಕಾಗಿ, ತಂದೆ ಅದರ ಹೊಟ್ಟೆಗೆ ಏನನ್ನೊ ಸವರಿದನು, ಬಟ್ಟೆ ಸಡಿಲಿಸಿದನು; ತಾಯಿ ಪಾನಕ ಕುಡಿಸಿದಳು, ಬೆನ್ನು ತಿಕ್ಕಿದಳು; ತೊತ್ತು ತಲೆ ತಟ್ಟಿದಳು, ಕಾಲು ಎಳೆದು ಮಡಚಿದಳು. ಮಗು ಅತ್ತುದೇಕೋ ತಿಳಿಯದು, ಅದು ಇನ್ನೂ ಚೆನ್ನಾಗಿ ಭೀಕರವಾಗಿ ಕೂಗುತ್ತಾ, ಕೈಕಾಲುಗಳಿಂದ ವಾಯು ಮಂಡಲವನ್ನೇ ಭೇದಿಸತೊಡಗಿತು. ಇನ್ನೇನು? ಕತ್ತಲಿರಲಿ, ಭೂಕಂಪವೇ ಆಗಿರಲಿ, ಡಾಕ್ಟರನನ್ನು ಕರೆಯಬೇಡವೆ? ತಂದೆ, ನಾಲ್ಕು ಕಡೆ ಎಡವಿ ತಡವಿ, ಮೂರು ಗಾಯಗಳ ಬಿರುದಿನ ವೀರನಾಗಿ, ಡಾಕ್ಟರನನ್ನು ಕರೆದೇ ತಂದನು. ಮನೆಗೆ ಬೆಂಕಿ ಹತ್ತಿದಷ್ಟು,ಬೊಬ್ಬೆ! ಬೇಸಗೆಯಲ್ಲಿ ನಿದ್ದೆಹಿಡಿಯುವುದೇ ಕಡಿಮೆ; ಈ ಬೊಬ್ಬೆಯಿಂದ, ಹತ್ತಿರಹತ್ತಿರವಾಗುತಿದ್ದ ನಿದ್ರಾದೇವಿಯು ಊರುಬಿಟ್ಟು ಓಡಿದಳು. ರಟ್ಟೆಯು ಬೊಕ್ಕೆಗಳಿಗೆ ಮುಲಾಮು, ಅಂಜನ, ಲೇಪ; ಹೊಟ್ಟೆಗೆ, ಒಳಗೆ ಪಾನಕ, ಹೊರಗೆ ಪೋಲ್ಟೀಸು,—ಇಷ್ಟು ನಡೆಯಿತು. ಮಗು ಶಾಂತವಾಗಿ, ಒಂದು ಸಲ ನಕ್ಕುಬಿಟ್ಟಿತು.

ಆದರೆ, ಆ ಮಗು ನಕ್ಕರೇ ಅವಲಕ್ಷಣ. ಮರುಕ್ಷಣದಲ್ಲಿ ನೋಡಿದರೆ ಡಾಕ್ಟರನ ಮಣಿಗಂಟಿನ ಅಲಂಕಾರವಾದ ಆ ಗಡಿಯಾರವೇ ಮಾಯವಾಗಿದೆ.

ಅದೇ ವೇಳೆ, ಮಗುವಿನ ತುಟಿಗೆ ತಗಲಿ ಒಣಗಿದ ಪಾನಕ (Syrup)ದ ಮೇಲೆ ಒಂದು ದೊಡ್ಡಿರುವೆಗೆ ಆಸೆಯಾಗಿ, ಅದು ಅಮೃತವನ್ನು ಕುಡಿದು ಆನಂದ ಗೊಂಡು, ಉಪಕಾರಸ್ಮರಣೆಗಾಗಿ ಮಗುವಿನ ಗುಣಗಾನಮಾಡುತ್ತ, ಮಗು ವನ್ನು ಮುದ್ದಾಡಿತು. ಆಗ ಮಗು ಮುಖವಿಕಾರವನ್ನು ಮಾಡಿ, ಕೈಕಾಲು ಬಡೆದು, ಕರ್ಕಶವಾಗಿ ಕೂಗಿತು. ಕೂಗು ಕೇಳುತ್ತಿರುವುದು ಇರುವೆಗಳಿಗೆ ಮೆಚ್ಚುವ ಹಾಗಿಲ್ಲ; ಇರುವೆ ಸರಿಯಿತು.

ಪುನಃ ಮಗು ಅತ್ತುದನ್ನೂ, ಅದರ ಮುಖವಿಕಾರವನ್ನೂ, ಅದು ಕೈ ಕಾಲು ಬಡಿದುಕೊಳ್ಳುವುದನ್ನೂ ನೋಡುತ್ತ, ಮಗು ಗಡಿಯಾರವನ್ನು ನುಂಗಿದಂತೆ, ತಾಯಿ ರೋಗದ ಅಂದಾಜು ಮಾಡಿಕೊಂಡಳು

ತಾಯಿ, "ಮಗು ಗಡಿಯಾರ ನುಂಗಿತಯ್ಯಯ್ಯೊ!" ಎಂದು ಬಲವಾಗಿ ಕೂಗಿದಳು.

ತಂದೆ ಭ್ರಾಂತನಾದನು. ಹೌದು, ಅಲ್ಲಿ ಗಡಿಯಾರವಿಲ್ಲ. ಡಾಕ್ಟರನೂ ನೋಡಿದನು, ಮಗುವಿನ ಮೋರೆ ಕೆಂಪೇರಿದೆ; ಮೊರೆ ಪ್ರಬಲವಾಗಿದೆ;–ಕೂಡಲೆ ಕಿವಿಗೊಂದು ನಳಿಗೆ ಸಿಲ್ಕಿಸಿ, ಎದೆಯ ಮೇಲೆ ಇಟ್ಟು ಅತ್ತಿತ್ತ ಬಡೆದು, ಹೃದ ಯದ ದುರ್ಬಲತೆಯನ್ನು ಕಂಡುಕೊಂಡನು. ಬೇರೆ ಔಷಧ ತರಲು ಬೇಗನೆ ತೆರಳಿದನು. ತೊತ್ತು, ಹತ್ತಿರದ ಮನೆಗಳಿಗೆಲ್ಲ ಸಮಾಚಾರ ಹರಡಿಸಿ, ಕೇರಿ ಯನ್ನೆ ಎಬ್ಬಿಸಿ, ನಲ್ವತ್ತು ಮಂದಿ ಹೆಂಗಸರನ್ನು ಮಗುವಿನ ಕೋಣೆಗೆ ತುಂಬಿಸಿ, ಬೇಸಗೆ ಕಾಲದಲ್ಲಿ ಗಾಳಿಯೂ ಹರಿಯದಂತೆ ಮಾಡಿಟ್ಟಳು. ನಲ್ವತ್ತು ತಾಯಂದಿರು ಮಗುವಿನ ಪರೀಕ್ಷೆಮಾಡಿ, ಅನುಭವ ವಿವರಿಸುವಾಗ, ಮಗು ಸಾಧಾರಣ ಹುಚ್ಚಾಬಟ್ಟೆಯಾಗುತ್ತ ಬಂತು. ಗಾಳಿಯಂತೂ ಹರಿ ಯದು; ಮಗುವಿನ ಸುತ್ತಲು ನಲ್ವತ್ತು ಮಂದಿ. ತಂದೆ ತಾಯಿ ತಲೆಯ ಮೇಲೆ ಕೈಯಿಟ್ಟು ಕುಳ್ಳಿರುವರು. ಅನುಭವವುಳ್ಳ ಚೆಲುವಮ್ಮನು, "ಗಡಿ ಯಾರವು ಅದರ ಹೊಟ್ಟೆಯಲ್ಲಿದೆ, ಅಲ್ಲಿಯೂ ಮುಳ್ಳುಗಳು ತಿರುಗುತ್ತ, ಕರುಳು ಸುತ್ತಿಕೊಂಡು, ಹೊಟ್ಟೆ ಒಂದು ಭಾಗದಲ್ಲಿ ಉಬ್ಬಿ ಮುರುಡಿಸಿದಂತಿದೆ" ಎಂದು ಬಿಕ್ಕುತ್ತ ಹೇಳಿದಳು.

ಬಡ ತಂದೆ ನಡುಗಿದನು; ತಾಯಿ ತಲೆ ಬಡಕೊಂಡಳು.

ಡಾಕ್ಟರನು ಸರಂಜಾಮು ಸನ್ನಾಹ ಸಂಪೂರ್ಣನಾಗಿ ಒಳ ನುಗ್ಗಿದನು.

"ಎತ್ತಿ ಹಿಡಿಯಿರಿ ಮಗುವನ್ನು," ಎಂದನು. ನೆರೆಮನೆಯ ವಕೀಲರ ಹೆಂಡತಿ ತನ್ನ ರೇಶ್ಮೆಯ ಸೀರೆಯನ್ನು ಸಹ ಗಣನೆಗೆ ತಾರದೆ, ಅದರಿಂದಲೆ ತನ್ನ ಕಣ್ಣೀ ರನ್ನೊರಸಿಕೊಳ್ಳುತ್ತ, ಮಗುವನ್ನೆತ್ತಿ ಹಿಡಿದಳು. ಸುಬ್ಬಮ್ಮನು ಬೆನ್ನ ಮೇಲೆ ತಟ್ಟಿದಳು. ನಾಗಮ್ಮನು ಮಗುವನ್ನು ಆ ಮಗ್ಗುಲಿಗೆ, ಈ ಮಗ್ಗುಲಿಗೆ ತಿರುಗಿಸಿದಳು. ರಂಗಮ್ಮನು ಅದನ್ನು ಬಲ ಕಾಲಿಂದಲೇ ಎಳೆದಳು, ಎಡ ಕಾಲಿಂದಲೇ ಮತ್ತೊಬ್ಬಳು ಗಂಗಮ್ಮನೆಳೆದಳು. ಮಗುವನ್ನು ಅನಂತರ ಮಂಚದ ಮೇಲೆ ಮಲಗಿಸಿ, ಅತ್ತಿಂದಿತ್ತ ಹೊರಳಿಸಿದ್ದಾಯಿತು.

ಇಷ್ಟೊ ವಿಧಾನವಾಗಿ ಉಪಚಾರ ನಡೆವಾಗ ಆ ಮಗುವಿನ ಒಂದೊಂದು ರೋಮದಿಂದ ಒಂದೊಂದು ಮಗು ಅಳುತಿದ್ದಂತೆ ಆರ್ಭಟೆಗಳ ಶಂಖಧ್ವನಿಗಳು!

ಕೊನೆಗೆ ಡಾಕ್ಟರನೇ ಸ್ವತಃ ಪರೀಕ್ಷೆಮಾಡಿದನು. ಎಲ್ಲರಿಗೂ ನಿರಾಶೆ ಯಾಗಬಹುದು. ಸ್ವಂತದ ನಾಲ್ಕು ಪವನಿನ ಗಡಿಯಾರ ಮಾಯವಾಗಿದೆ; ಅದನ್ನು ಅವನೇ ಹೊರಡಿಸದೆ ಇದ್ದರೆ ಈ ಸಲ ಉಪಚಾರ ಮಾಡಿದ ಐದು ರೂಪಾಯಿಗಳ ಫೀಸಿನಿಂದ ಹೇಗೆ ಬದುಕಬಹುದು? ಹುಡುಕಿದನು; ನಳಿಗೆ ಯನ್ನು ಇಟ್ಟು ಕೇಳಿದರೆ, 'ಟಿಕಿ ಟಿಕಿ' ಶಬ್ದವಾಗುತ್ತಿದೆ. ನಾಡಿಗಳ ಲೆಕ್ಕ ನೋಡಿದನು; ಅಂದಾಜಿನಲ್ಲಿ,–ಗಡಿಯಾರವಿಲ್ಲವಷ್ಟೆ,–ಸಾಧಾರಣವಿದೆ. ಹೊಟ್ಟೆ ಪರೀಕ್ಷೆಮಾಡಿದನು; ಉಬ್ಬಿಕೊಂಡಿದೆ. "ಸರಿ. ಗಡಿಯಾರ, ಇಲ್ಲಿರಬೇಕು," ಎಂದನು. "ಅಯ್ಯೋ, ಅದರ ಚಕ್ರಗಳು ತಿರುಗಿ, ಮುಳ್ಳುಗಳು ಚುಚ್ಚಿದರೆ, ಮಗುವಿಗೆ ಗತಿಯೇನು?" ಎಂದು ನಲ್ವತ್ತು ಪ್ರಶ್ನೆಗಳು ಒಂದೇ ಸಲ.

"ತಡೆಯಿರಿ, ಎಲ್ಲರೂ ಸುಮ್ಮನಿರಿ. ಈ ಪೋಲ್ಟೀಸನ್ನು ಬದಲಾಯಿಸಿ ಕಟ್ಟಿದರೆ, ಗಡಿಯಾರ ಹೊರಡುವುದಾದರೆ ಹೊರಡುವುದು, ಅಥವಾ ಅಲ್ಲೇ ಕರಗಿ ಭಸ್ಮವಾಗುವುದು" ಎನ್ನುತ್ತ, ಸಾಸಿವೆಯ ಪೋಲ್ಟೀಸು ತಯಾರು ಮಾಡಲು ಹೇಳಿದನು. ನಲ್ವತ್ತೂ ಮಂದಿ ಸಾಸಿವೆ ಅರೆಯಹೋದರು. ತಂದೆ ತಾಯಿ, ಈಗ ಆಸೆ ತೋರಿ, ಕಣ್ತೆರೆದು ಕೂತರು. ಅವರೆಲ್ಲರೂ ಅತ್ತ ತೆರಳಲು, ಗಾಳಿ ಹರಿಯತೊಡಗಿ ಮಗು ಪುನಃ ನಕ್ಕುಬಿಟ್ಟಿತು.

"ನಗಬೇಡಪ್ಪ, ಅಪ್ಪೂ, ಟಿಕಿ ಟಿಕಿ ಎಲ್ಲಿದೆ?" ಎಂದಳು ತಾಯಿ.

"ನಿನಗೆ ಬೇರೆ ತಂದೇನು ನಾಳೆ, ಅಪ್ಪೂ, ಟಿಕಿ ಟಿಕಿ" ಎಂದನು ತಂದೆ.

ಹೊಟ್ಟೆಯುಬ್ಬಿದಲ್ಲಿ, ಡಾಕ್ಟರನು ಪೋಲ್ಟೀಸು ಸಡಿಲಿಸಿದನು. ಮುಟ್ಟಿ

ನೋಡಿದನು; ಗಡಿಯಾರದಷ್ಟೇ ವಿಸ್ತೀರ್ಣಕ್ಕೆ ಬಿರುಸಾಗಿದೆ. ತನ್ನೊಳಗೇ ನಕ್ಕನು.

"ಪೋಲ್ಟೀಸಿನ ಅಗತ್ಯವಿಲ್ಲ. ಇಷ್ಟು ಒಳ್ಳೇ ಕಾಫಿ ತನ್ನಿರಿ," ಎಂದನು. ತಾಯಿ ತಾನೇ ಕಾಫಿಮಾಡಿ ತರಹೋದಳು.

ಅವಳು ಕಾಫಿ ತಟ್ಟೆಯಲ್ಲಿಟ್ಟು ತರುವುದನ್ನು ಕಾಣುತಿದ್ದಂತೆ, "ನಾನು ತಿಳಿಯೆನೇ? ನನ್ನ ಪೋಲ್ಟೀಸು ಅಷ್ಟು ಬಲ! ಬಿಡಿಸಿ ಎತ್ತಿ ಹಿಡಿಯುವಷ್ಟರಲ್ಲಿಯೆ, ಹೊಟ್ಟೆಯೊಳಗಿಂದ ಗಡಿಯಾರ ಅದರೊಡನೆ ಮೇಲೇರಿ ಹೊರಟು ಬಂದಿದೆ" ಎಂದು ಡಾಕ್ಟರನು ಎನ್ನುತ್ತ, ಪೋಲ್ಟೀಸಿನೊಳಗಿಂದ ಗಡಿಯಾರವನ್ನು ಹೊರಕ್ಕೆತ್ತಿ, ವಸ್ತ್ರದ ಚಿಂದಿಯಿಂದ ಅದನ್ನು ಪೂಸಿದನು. ಗಡಿಯಾರವು ಜಗಜಗಿಸಿ, 'ಟಿಕಿ ಟಿಕಿ' ಎಂದಿತು.

ತಾಯಿ ನಲ್ವತ್ತು ಮಂದಿಗೆ ಸಮಾಚಾರ ತಿಳಿಸಿದಳು. "ಔಷಧವೆಂದರೆ ಇಂಥದಿರಬೇಕು," ಎಂದು ಅವರು ನಗುತ್ತ ಡಾಕ್ಟರನಿಗೆಂದರು. "ಪಾಪ ಮಗು, ಇಷ್ಟು ಸಾಧು,—ಇದನ್ನು ದೇವರು ನೋಯಿಸುವನೇ?" ಎಂದು ತಾಯಿ ಎಂದಳು. ತಂದೆ ಮಗುವನ್ನು ಮೆಲ್ಲನೆ ಎತ್ತಿ, "ಮಗುವಿನ ಗುಲಾಮನಾಗುವ ತನಕಾ ದೊರೆಯದಣ್ಣ ಮುಕುತಿ," ಎಂದು ಗೃಹಸ್ಥಾಶ್ರಮದ ಮಹತ್ವವನ್ನು ಭಾವಿಸುತ್ತ ಕುಳಿತನು.

ಡಾಕ್ಟರನ ಕೀರ್ತಿ ಹಬ್ಬಿತು; ಮಗುವಿನ ಮೂರ್ತಿ ಬೆಳೆಯಿತು. ಇಷ್ಟಾದ ಬಳಿಕ ತಾನೆ, ಆ ಬೇಸಗೆಯ ಕಡುಸೆಕೆಯ ಅಪರಾತ್ರಿಯಲ್ಲಿ ನಮಗೆ ನಿದ್ದೆಯ ಸರ್ತಿ.

---



## ಶ್ರೀ ಕೆ. ಹೊನ್ನಯ್ಯ ಶೆಟ್ಟರು, ಉಡುಪಿ

ಇವರು ಸಾಹಿತ್ಯದ ಎಲ್ಲ ವಿಭಾಗದಲ್ಲಿಯೂ ಕೈಯಿಕ್ಕಿದವರು. ಇವರ 'ಮುಗುಳು' ಎಂಬ ಶಿಶುಗೀತೆಗಳ ಸಂಗ್ರಹವು ಪ್ರಸಿದ್ಧವಾಗಿದೆ. ಬೇರೆ ಬೇರೆ ಗುಪ್ತನಾಮಗಳಿಂದ ಕವಿತೆ, ಕತೆ, ನಾಟಕಗಳನ್ನು ಬರೆದಿದ್ದಾರೆ. ಇವರು ಬರೆದ 'ಅಂದು-ಇಂದು' ಎಂಬುದು ಸೊಗಸಾದ ಸಣ್ಣ ಕತೆ. ತೀವ್ರ ಸುಧಾರಕ ವರ್ಗಕ್ಕೆ ಸೇರಿದವರು ಕನ್ನಡ ಸಾಹಿತ್ಯದ ಮೇಲ್ಮೆಗಾಗಿ ಹೋರಾಡುವವರು, 'ಕಿರಿಯರ ಪ್ರಪಂಚ'ದ ಸ್ಥಾಪನೆಗೆ ಇವರ ಪರಿಶ್ರಮವೇ ಕಾರಣ.

ಸಾಮಾಜಿಕ ಉತ್ಕ್ರಾಂತಿಯೆ ಇವರ ಕತೆಗಳ ಗುರಿ. ಆದರಿಂದ ಇವರ ಮಾತುಗಳು ಸ್ವಾಭಾವಿಕವಾಗಿ ಕಟುವಾಗಿ ಕಾಣುವುದುಂಟು. ಶೈಲಿಯಲ್ಲಿ ಒನಪು, ಆಡಂಬರಗಳು ಅತಿ ವಿರಳ. ಕತೆಗಳನ್ನು ಬರೆಯುವಾಗ ಕತೆಗಾರರಾಗಿಯೇ ಇರುವುದರಿಂದ ಇವರ ಕವಿತೆಗಳಲ್ಲಿ ಬರುವ ಭಾವನೆಗಳು ಕತೆಗಳಲ್ಲಿ ನುಸುಳುವುದಿಲ್ಲ. ಸಾಮಾನ್ಯವಾಗಿ ಎಲ್ಲ ಸಾಮಾಜಿಕ ಕತೆಗಾರರಂತೆಯೇ ಇವರು ಆದರ್ಶವಾದಿಗಳು.

# ! ! !

ಕೆ. ಹೊನ್ನಯ್ಯ ಶೆಟ್ಟರು

ನೊನ್ನೆ ನನ್ನ ಗೆಳೆಯರಾದ ರಾಘವೇಂದ್ರರಾಯರ ಮನೆಗೆ ಹೋಗಿದ್ದೆ. ಆ ವಿಚಾರ ಈ ವಿಚಾರಗಳ ನಡುವೆ ಅವರು ಹೇಳಿದಂತೆ 'ಸಂಪಾದಕರ ಘಟಿಂಗ ತನ'ದ ಮಾತು ಬಂತು. ನಾನೂ ಸಂಪಾದಕಕೋಟಿಗೆ ಸೇರಿದ ಒಂದು ಮೃಗ ವಾದುದರಿಂದ ಅದನ್ನು ಪ್ರತಿಭಟಿಸಿದೆ. ಆಗ ಅವರು "ಹೊನ್ನಯ್ಯ ಶೆಟ್ಟರೇ, ಇದನ್ನು ನೋಡಿದರೆ ನನ್ನ ಮಾತಿನ ಸತ್ಯತ್ವವು ವ್ಯಕ್ತವಾಗುತ್ತದೆ" ಎಂದವರೇ ತಮ್ಮ ಕವಾಟಿನಿಂದ ಹುಡುಕಿ ಹುಡುಕಿ ಹಳೆಯ 'ಫೈಲೊ'ಂದನ್ನು ತಂದು ನನ್ನ ಮುಂದೆ ಇರಿಸಿದರು.

ನಾನು ಕೌತುಕದಿಂದ ಮಗುಚಿದೆ.

೧

"ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು"

ವಿದ್ಯಾರ್ಥಿನಿಲಯ
ಮಂಗಳೂರು ತಾ. ೬—೯—೧೯೩೫

'ಅರವಿಂದ' ಪತ್ರಿಕೆಯ ಸಂಪಾದರಕರ ಸ|ಕ್ಕೆ—

ನಾನು ಪತ್ರಿಕಾಪ್ರಪಂಚಕ್ಕೆ ತೀರಾ ಹೊಸಬನು. ಆದರೂ ಬರೆಯ ಬೇಕು, ಕೈಲಾದಷ್ಟು ಭಾಷಾಸೇವೆಮಾಡಬೇಕು ಎಂಬ ಹುಚ್ಚು ಬಹಳ. ಕನ್ನಡದ ಮೇಲೆ, ಕನ್ನಡ ನಾಡಿನ ಮೇಲೆ ತುಂಬ ಅಭಿಮಾನ. ಈ ಅಭಿ ಮಾನವೇ ನನ್ನನ್ನು ಕೆಲವು ಕತೆ, ಕವಿತೆಗಳನ್ನು ಬರೆಯಿಸಿತು. ಇದರೊಡನೆ ಪೋಣಿಸಿರುವ 'ಜೀವನಯಂತ್ರ' ಎಂಬ ಕವನವು ನಾನು ಬರೆದ ಕವಿತೆಗಳಲ್ಲಿ ತೀರಾ ಹೊಸದೂ ನನಗೆ ಸಂಪೂರ್ಣವಾಗಿ ತೃಪ್ತಿಯನ್ನು ಕೊಟ್ಟುದೂ ಆಗಿದೆ. ಈಗೀಗ ಕೆಲವೊಂದು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಅವೆಷ್ಟೋ ಕವನಗಳ ಮಟ್ಟಕ್ಕಿಂತ ನನ್ನ ಕವಿತೆಯು ಉಚ್ಚತರವಾಗಿದೆಯೆಂದು ನನಗೆ ನಿರ್ಧಾರವಿದೆ. "ಭಾವಪ್ರಧಾನವಾದ ಕವಿತೆಯಿದು; ಎಲ್ಲಿಯೂ ಭಂಗ ಬಂದಿಲ್ಲ"ಎಂದು ನನ್ನ

ಕಾಲೇಜಿನ ಕನ್ನಡ ಪಂಡಿತರು ಕೂಡ ಅಭಿಪ್ರಾಯ ಪಟ್ಟಿದ್ದಾರೆ. ನಾನು ತೀರ ಹೊಸಬನಾದುದರಿಂದ ಇಷ್ಟನ್ನು ಹೇಳಬೇಕಾಯಿತು. ದಯವಿಟ್ಟು ನನ್ನ ಈ ಕವಿತೆಯನ್ನು ತಮ್ಮ ಈ ತಿಂಗಳ ಸಂಚಿಕೆಯಲ್ಲಿಯೇ–ತಪ್ಪಿದರೆ ಬರುವ ತಿಂಗಳ ಸಂಚಿಕೆಯಲ್ಲಾದರೂ ಪ್ರಕಟಿಸಿದರೆ ನಾನು ಪಟ್ಟ ಶ್ರಮವು ಸಾರ್ಥಕವಾಗುತ್ತಿತ್ತು. ನನ್ನ ಕವಿತೆಯು ಪ್ರಕಟವಾದ ಸಂಚಿಕೆಯನ್ನು ನನಗೆ ಉಚಿತವಾಗಿ ಕಳುಹಿಸುವ ಕೃಪೆಯನ್ನು ತೋರಿಸಬೇಕು.

ಕವಿತೆಯು ಸ್ವೀಕೃತವಾಗದ ಸಂದರ್ಭದಲ್ಲಿ ದಯವಿಟ್ಟು ಹಿಂದೆ ಕಳುಹಿಸಿ ಕೊಡಿರಿ. ಆ ಬಗ್ಗೆ ಒಂದಾಣೆ ಸ್ಟ್ಯಾಂಪನ್ನು ಜೋಡಿಸಿದ್ದೇನೆ.

ಇತಿ ತಮ್ಮ

**ಯು. ರಾಘವೇಂದ್ರ ರಾವ್.**

(*Duplicate*)

ಪುನಃ ಮಗುಚಿದೆ.

೨

ವಿದ್ಯಾರ್ಥಿ ನಿಲಯ
ಮಂಗಳೂರು

ತಾ. ೨೬—೧೨—'೨೫

'ಅರವಿಂದ' ಸಂಪಾದಕರ ಸ|ಕ್ಕೆ—

ನಾನು ಕೆಲವು ತಿಂಗಳುಗಳ ಪೂರ್ವ ಕಳುಹಿದ 'ಜೀವನಯಂತ್ರ' ಎಂಬ ಕವಿತೆಯು ಸ್ವೀಕೃತವೊ ಅಸ್ವೀಕೃತವೊ ತಿಳಿಯಲಿಲ್ಲ. ಪತ್ರಿಕೆಯಲ್ಲಂತೂ ಅದು ಈ ವರೆಗೆ ಪ್ರಕಟವಾಗಿಲ್ಲ. ಆ ಬಗೆಗೆ ೩–೪ ಬಾರಿ ಬರೆದರೂ ತಮ್ಮಿಂದ ಯಾವದೊಂದು ಬಗೆಯ ಉತ್ತರವೂ ಬರಲಿಲ್ಲ! ನನ್ನ ಸ್ಟ್ಯಾಂಪು ತಮ್ಮ ಟಪ್ಪಾಲು ಕಟ್ಟೆಯಲ್ಲಿ ನಡೆಯದಿರಬಹುದೇ? ಕವಿತೆಯನ್ನು ಪ್ರಕಟಿಸಲು ಇಷ್ಟವಿಲ್ಲವಾದರೆ ದಯವಿಟ್ಟು ಹಿಂದಕ್ಕಾದರೂ ಕಳುಹಿಸಿ ಬಿಡಿ. ಬೇರೆ ಪತ್ರಿಕೆಗೆ ಕಳುಹಿಸ ಬೇಕಾಗಿದೆ.

ಇತಿ ತಮ್ಮ

**ಯು. ರಾಘವೇಂದ್ರ ರಾವ್.**

(*Duplicate*)

ತಿರುಗಿ ಮಗುಚಿದೆ.

೩

'Aravinda' Office	Bangalore City
Visweshwarapuram	13—1- '26

ಶ್ರೀ ರಾಘವೇಂದ್ರ ರಾಯರಿಗೆ,—

ನಿಮ್ಮ ಕವಿತೆಯು ಸಕಾಲದಲ್ಲಿ ತಲುಪಿದೆ, ನೀವು ಆಗಾಗ್ಗೆ ಬರೆದ ಕಾಗದಗಳೂ ಬಂದು ಮುಟ್ಟಿವೆ. ಆದರೆ ಪತ್ರಿಕೆಯ ಕಾರ್ಯಬಾಹುಲ್ಯದಿಂದ ವೇಳೆಗೆ ಸರಿಯಾಗಿ ನಿಮಗೆ ಉತ್ತರ ಕೊಡಲಾಗಲಿಲ್ಲ. ಆ ಬಗ್ಗೆ ಕ್ಷಮಿಸಿರಿ.

ಇನ್ನು ನಿಮ್ಮ ಕವಿತೆಯ ವಿಚಾರವಾಗಿ ಒಂದು ಮಾತು—ಭಾವನೆಗಳು ಬಿಡಿಬಿಡಿಯಾಗಿವೆ....ಗತಿ ಎಡವುತ್ತದೆ.....ಅಲ್ಲಲ್ಲಿ ಛಂದೋದೋಷಗಳೂ ಬಂದಿವೆ...ಶಬ್ದ ಜಾಲವೇನೋ ಒಂದು ತೆರನಾಗಿದೆ ಆದರೆ ಇದು ಆಧುನಿಕ ಕವನಗಳ ಸಾಲಿಗೆ ಸೇರಲು ಯೋಗ್ಯವಾಗಿಲ್ಲ..........ನೀವು ದುಡುಕಬಾರದು. ಹೀಗೆಯೇ ಬರೆಯುತ್ತಾ ಇರಿ. ತಪ್ಪಿನ ಮೆಟ್ಟಲುಗಳಿಂದಲೇ ಒಪ್ಪಿನ ಶಿಖರ ವನ್ನೇರಬೇಕಷ್ಟೆ! ಬರೆದೊಡನೆ ಮುದ್ರಿಸಬೇಕೆಂಬ ಹವ್ಯಾಸಕ್ಕೆ ಮಾತ್ರ ಕೈ ಹಚ್ಚಬೇಡಿರಿ. ಅಭ್ಯಾಸಮಾಡುತ್ತ ಕೈ ಪಳಗಲಿ........ಅಂತೂ ನಿಮ್ಮಿಂದ ಮುಂದಕ್ಕೆ ಉತ್ತಮ ಕವಿತೆಗಳನ್ನು ನಿರೀಕ್ಷಿಸಬಹುದಾಗಿದೆ. ಸಂಪಾದಕ ಧರ್ಮಕ್ಕನುಸರಿಸಿ ಇಷ್ಟನ್ನು ಇದ್ದುದು ಇದ್ದಂತೆ ಹೇಳಬೇಕಾಯಿತು. ಇದಕ್ಕಾಗಿ ಸಿಟ್ಟಾಗಬಾರದು.

ಕವಿತೆಯನ್ನು ಇದರ ಸಂಗಡ ಮರಳಿ ಕಳುಹಿಸಿದ್ದೇವೆ.

ಇತಿ ನಿಮ್ಮ

B. D. Shastri,

*Editor*

ಇನ್ನೊಂದು ಮುಗುಚಿದೆ. ಒಂದು 'ಪೇಪರ್ ಕಟ್ಟಿಂಗ್' ಇತ್ತು.

೪

(ಪಡಿಯಚ್ಚು 'ಕಿರಿಯರ ಪ್ರಪಂಚ'ದ ಕೃಪೆಯಿಂದ)

ಈಗ ತಾನೆ ಇಂಗ್ಲೆಂಡಿನಿಂದ ಉಚ್ಚ ಶಿಕ್ಷಣ ಪಡೆದು ಮರಳಿ ಊರಿಗೆ ಬಂದಿರುವ **ಉಡುಪಿ ರಾಘವೇಂದ್ರ ರಾವ್,** B. A. Ph. D. ಅವರು.

ಶ್ರೀಯುತರ ಪರಿಚಯವನ್ನು ಸ್ವಲ್ಪದರಲ್ಲಿ ಇಷ್ಟು ಹೇಳಬಹುದು. ಇವರು ದಕ್ಷಿಣ ಕನ್ನಡಿಗರು. ಚಿಕ್ಕಂದಿನಲ್ಲಿ ತನ್ನ ಊರಾದ ಉಡುಪಿಯ

ಮಿಶ್ಯನ್ ಹೈಸ್ಕೂಲಿನಲ್ಲಿ ಶಿಕ್ಷಣವನ್ನು ಪಡೆದವರು. ಆ ಮೇಲೆ ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜಿನಲ್ಲಿ 1927ರಲ್ಲಿ ಬಿ. ಎ. ಫಸ್ಟ್ ಕ್ಲಾಸ್ ಪಾಸಾದರು. ಬಿ. ಎ. ಮುಗಿದ ಮೇಲೆ ಬೆನಾರಿಸಿನ ಯುನಿವರ್ಸಿಟಿಯಲ್ಲಿ ಅಧ್ಯಾಪಕರಾದರು. ಅಲ್ಲಿಂದ 1929ರಲ್ಲಿ ಇಂಗ್ಲೆಂಡಿಗೆ ತೆರಳಿದರು. ಈಗ ನಾಲ್ಕು ವರ್ಷಗಳಾದ ಬಳಿಕ ತಾ. 19—5—'34ರಲ್ಲಿ ತಮ್ಮ ಆಂಗ್ಲಪತ್ನಿ ಯೊಡನೆ ಊರಿಗೆ ಬಂದಿರುವರು. ಈಗ ಬೆನಾರಿಸಿನ ಯುನಿವರ್ಸಿಟಿಯಲ್ಲಿಯೇ ಪ್ರೊಫೆಸರರಾಗಿ ನೇಮಕ ಹೊಂದಿದ್ದಾರೆ. ಶ್ರೀಯುತರು ವಿದ್ಯಾರ್ಥಿಗಳಾಗಿರು ವಾಗಲೇ ಕವಿತೆ, ಕಥೆ, ಲೇಖನಗಳನ್ನು ಬರೆಯುತ್ತಿದ್ದರು. ಇವರು ಬರೆದ 'ನನ್ನ ವಿದ್ಯಾಭ್ಯಾಸ' ಎಂಬ ಪುಸ್ತಕವನ್ನು ಉಡುಪಿಯ ಕರ್ನಾಟಕ ಸಂಘ ದವರು ಪ್ರಕಟಿಸಿರುವರು. ಇವರು ಉತ್ತಮ ವಾಗ್ಮಿಗಳೂ ಆಗಿದ್ದಾರೆ. ಕನ್ನಡದ ಬೆಳವಣಿಗೆಗೆ ಇವರಿಂದ ತುಂಬಾ ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

(ಶ್ರೀಯುತರ 'ನನ್ನ ಆಂಗ್ಲದೇಶದ ಅನುಭವಗಳು' ಎಂಬ ಲೇಖಕ್ಕಾಗಿ ಬರುವ ಸಂಚಿಕೆಯನ್ನು ನಿರೀಕ್ಷಿಸಿರಿ.)

ಪುನಃ ತಿರುವಿದೆ.

ಜ

'Aravinda' Office — Bangalore City
Visweshwarapuram — 5—8—'34.

ಶ್ರೀಮಾನ್ ಯು. ರಾಘವೇಂದ್ರರಾಯರಲ್ಲಿ—

ವಿಜ್ಞಪ್ತಿಗಳು. ನಾವು ಬರುವ ವಿಜಯ ದಶಮಿಗೆ 'ಅರವಿಂದ'ದ ದಸರಾ ಸಂಚಿಕೆಯೊಂದನ್ನು ಹೊರಡಿಸಬೇಕೆಂದು ನಿರ್ಧರಿಸಿದ್ದೇವೆ. ಅದರಲ್ಲಿ ಪ್ರಸಿದ್ಧರ ಕವನ, ಲೇಖನ, ಕಥೆಗಳಷ್ಟೇ ಬರುವವು. ಸುಮಾರು 200 ಪುಟ ಗಳು. ದಯವಿಟ್ಟು ತಮ್ಮ ಲೇಖನವೊಂದನ್ನು ಕಳುಹಿಸಿಕೊಟ್ಟು ನಮ್ಮ ಸಂಚಿಕೆಯು ಸರ್ವಾಂಗ ಸುಂದರವಾಗುವಂತೆ ಪ್ರೋತ್ಸಾಹಿಸುವಿರಾಗಿ ನಂಬಿದ್ದೇವೆ. ದಯವಿಟ್ಟು ತಮ್ಮ ಭಾವಚಿತ್ರದ ಒಂದು ಪ್ರತಿಯನ್ನೂ ಕಳುಹಿಸುವುದಾಗ ಬೇಕು. ಪಡಿಯಚ್ಚು ಮಾಡಿಸುವೆವು.

ಇತಿ ತಮ್ಮ

B. D. Shastri,
*Editor*

೬

## ಮರಳಿ ಮೆಗುಚಿದೆ.

'Aravinda' Office   Bangalore City
Visweshwarapuram   1–9–'34.

ಮಹಾಶಯರೇ,

ನಮ್ಮ ಮೊದಲಿನ ಕಾಗದವು ತಮಗೆ ಮುಟ್ಟಿರಬಹುದು. ವಿಶೇಷ ಸಂಚಿಕೆಯ ಪ್ರಕಟನದ ಅವಧಿಯು ತೀರ ಸಮೀಪಿಸುತ್ತ ಬಂತು. ದಯವಿಟ್ಟು ತಮ್ಮ ಲೇಖನವನ್ನು ಕೂಡಲೇ ಕಳುಹಿಸುವ ಕೃಪೆ ಮಾಡಬೇಕು.

ಇತಿ ತಮ್ಮ

B. D. Shastri,
*Editor*

ಪುನಃ ತಿರುವಿಹಾಕಿದೆ.

೭

ಹಿಂದೂ ಯುನಿವರ್ಸಿಟಿ
ಬೆನಾರಿಸ್   ೧೦–೯–'೩೪.

ಪ್ರಿಯರೇ,

ನಿಮ್ಮ ಕಾಗದಗಳೆರಡೂ ಕೈ ಸೇರಿವೆ. ಆದರೆ, ಪ್ರಕೃತ ಹೊಸತಾಗಿ ಬರೆದುದೇನೂ ನನ್ನಲ್ಲಿಲ್ಲ. ಇದೀಗಲೆ ಒಂದು ಕಥೆಯನ್ನು ಬರೆದು 'ಅಂತರಂಗ' ವಿಶೇಷ ಸಂಚಿಕೆಗೆ ಕಳುಹಿಸಿಯಾಯಿತು. ನಿನ್ನೆ ಇನ್ನಾವುದೋ ಎರಡು ಮೂರು ಪತ್ರಿಕೆಗಳ ದಸರಾ ಸಂಚಿಕೆಗಳಿಗೆ ಕೆಲವು ಕವಿತೆಗಳನ್ನೂ ಕಳುಹಿಸಿದೆ. ಈ ತಿಂಗಳಲ್ಲಿ ಹಲವು ಪತ್ರಿಕೆಗಳ ದಸರಾ ಸಂಚಿಕೆಗಳಿಗಾಗಿಯೆ ತುಂಬ ಬರೆಯಬೇಕಾಯಿತು. ಈಗ ಹೊಸತಾಗಿ ಏನಾದರೂ ಬರೆಯೋಣವೆಂದರೆ ಕಾರ್ಯಬಾಹುಲ್ಯದಿಂದ ಒಂದಿಷ್ಟೂ ಬಿಡುವಿಲ್ಲವಾಗಿದೆ. ಆದುದರಿಂದ ಈ ಬಾರಿ ನಿಮ್ಮ ಕೋರಿಕೆಯನ್ನು ಪರಿಪೂರ್ಣವಾಗಿ ನೆರವೇರಿಸಲು ಆಗದುದಕ್ಕಾಗಿ ಕ್ಷಮಿಸಿರಿ. ಈ ವರೆಗೆ ಪ್ರಕಟವಾಗದ ಹಳೆಯ ಕವನವೊಂದನ್ನು ಇದರ ಸಂಗಡ ಕಳುಹಿಸಿದ್ದೇನೆ. ಒಪ್ಪಿಗೆಯಾದರೆ ಮುದ್ರಿಸಬಹುದು. ದಾಕ್ಷಿಣ್ಯಕ್ಕೆ ಬೀಳುವ ಅಗತ್ಯವಿಲ್ಲ.

ಇತಿ ನಿಮ್ಮ

(*Duplicate*)   ಯು. ರಾಘವೇಂದ್ರ ರಾವ್.

ಇನ್ನೊಮ್ಮೆ ಮಗುಚಿದೆ.

೮

'Aravinda' Office Bangalore City
Visweshwarapuram 25—10—'34.

ಶ್ರೀಮಾನ್ ರಾಘವೇಂದ್ರರಾಯರಲ್ಲಿ—

ವಿಜ್ಞಪ್ತಿಗಳು, ನಮ್ಮ ದಸರಾ ವಿಶೇಷ ಸಂಚಿಕೆಯನ್ನು ಪ್ರತ್ಯೇಕವಾಗಿ ಕಳುಹಿಸಿದ್ದೇವೆ. ಆದರಲ್ಲಿ ತಮ್ಮ 'ಜೀವನಯಂತ್ರ' ಎಂಬ ಕವಿತೆಯನ್ನು ಮುದ್ರಿಸಿದ್ದೇವೆ. ತಮ್ಮ ಕವಿತೆಯನ್ನು ಮೂರು ಮೂರು ಬಾರಿ ಓದಿದರೂ ಮತ್ತೂ ಓದಬೇಕೆನಿಸುತ್ತದೆ. ಆ ಶಬ್ದ ಜಾಲ, ಲಲಿತ ಪದಬಂಧ, ರಸೋತ್ಪತ್ತಿ, ನವನವ ಭಾವಗಳು, ಪ್ರಸಾದ, ಶಯ್ಯೆ ಇವು ಇನ್ನೂ ನನ್ನ ಕಣ್ಣಮುಂದೆ ಇರುವಂತಿವೆ.

ಯಾವಾಗಲೂ ನಮ್ಮ ಪತ್ರಿಕೆಗೆ ತಮ್ಮ ಮಹತ್ವದ ಲೇಖನಗಳನ್ನು ಕಳುಹಿಸುತ್ತಿರುವಂತೆ ಬೇಡುತ್ತೇವೆ.

ವಿ. ಸೂ. ಕೆಲವು ಮಹತ್ವದ ಲೇಖನಸಂಗ್ರಹದಿಂದಾಗಿ ಸಂಚಿಕೆಯನ್ನು ವೇಳೆಗೆ ಸರಿಯಾಗಿ ಹೊರಡಿಸಲಾಗಲಿಲ್ಲ ಆ ಬಗ್ಗೆ ಕ್ಷಮೆ ಬೇಡುತ್ತೇವೆ.

ಇತಿ ತಮ್ಮ

B. D. Shastri,

*Editor*

ಮರೆತಮಾತು—

ದಯವಿಟ್ಟು ನಮ್ಮ ದಸರಾ ಸಂಚಿಕೆಯ ಕುರಿತು ತಮ್ಮ ಅಮೂಲ್ಯ ಅಭಿಪ್ರಾಯವನ್ನು ತಿಳಿಸಬೇಕಾಗಿ ಪ್ರಾರ್ಥನೆ

B. D. Shastri

ಇನ್ನೊಮ್ಮೆ ತಿರುವಿದೆ.

೯

ಹಿಂದೂ ಯುನಿವರ್ಸಿಟಿ

ಬೆನಾರಿಸ್ ತಾ ೧೦—೧೧—'೩೪.

ಪ್ರಿಯರೇ,

ನಿಮ್ಮ 'ಅರವಿಂದ' ದಸರಾ ಸಂಚಿಕೆಯು ಕೈ ಸೇರಿತು. ಬಾಹ್ಯಾಂಗವು ಉತ್ತಮವಾಗಿದೆ. ಅಂತರಂಗದಲ್ಲಿಯೂ ಕೆಲವು ಲೇಖನಗಳು ಚೆಲುವಾಗಿವೆ.

'ವೇತಾಳನೃತ್ಯ'ದ ವಿಷಯವಾದ ಲೇಖನವು ತೀರಾ ಹುಡುಗಾಟಿಕೆಯದ್ದೆಂದು ನನ್ನ ಅಭಿಪ್ರಾಯ. ಹಾಗೆಯೇ ಕವಿತೆಗಳಲ್ಲಿ ಕೆಲವನ್ನು ದಾಕ್ಷಿಣ್ಯಕ್ಕಲ್ಲದಿದ್ದರೆ ಪ್ರಕಟಿಸಲು ಬೇರೆ ಯಾವ ಕಾರಣವೂ ಕಾಣುವುದಿಲ್ಲ. 'ಜೇನ ನರಸಲು ತೆರಳಿದಲ್ಲಿ' ಎಂಬ ಕಥೆಯು ಉತ್ತಮವಾಗಿದೆ; ಆದರೆ ಬಂಗಾಳಿಯ "ಮಧುರ್ ಸಂಧಾನೇ" ಎಂಬ ಕಥೆಯ ಕುರುಡು ಭಾಷಾಂತರವಾಗಿದೆ. ಸಂಪಾದಕರಿಗೆ ಹಲವು ಭಾಷೆಗಳ ಪರಿಚಯವು ಅಗತ್ಯ. ನೀವು 'ಕಾವ್ಯ ಸಾಮ್ರಾಜ್ಯ' ಎಂಬ ಕವಿತೆಯ ಪುಸ್ತಕವನ್ನು ವಿಮರ್ಶಿಸುವಾಗ ಆ ಪುಸ್ತಕವನ್ನು ಸಂಪೂರ್ಣವಾಗಿ ಓದಿದಂತೆ ಕಾಣುವುದಿಲ್ಲ. ಅದಾರೋ ಒಬ್ಬರ ಚಿಕ್ಕ ಭಾಷಾಂತರ ಗ್ರಂಥವೊಂದನ್ನು ವಿಮರ್ಶಿಸಲು ೪ ಪುಟಗಳನ್ನು ಕಪ್ಪುಮಾಡಿದ್ದರ ಔಚಿತ್ಯವೇನಿರಬಹುದೋ? ಅಲ್ಲದೆ 'ಕನ್ನಡದ ಕಂಪು' ಎಂಬ ಗ್ರಂಥ ವಿಮರ್ಶೆಯಲ್ಲಿ 'ಇದಕ್ಕೆ ಹಿರಿಯರೊಬ್ಬರ ಮುನ್ನುಡಿ ಅವಶ್ಯಬೇಕಿತ್ತು' ಎಂದು ನವೀನವಾಗಿ ಬರೆದಿರುವಿರಲ್ಲ—ಅದಕ್ಕೇನು ಅರ್ಥ? ಪ್ರಾಯಶಃ ನಿಮಗೆ ಕೆಲವು ಹಿರಿಯರ ಹಣೆಬರಹವ ಪರಿಜ್ಞಾನವು ಸಾಕಷ್ಟು ಇಲ್ಲವೆಂದು ನಾನೆಣಿಸುತ್ತೇನೆ. ಕೆಲವು ಸಮಯದ ಕೆಳಗೆ ನನ್ನ ಒಂದು ಗ್ರಂಥಕ್ಕೆ ಹಿರಿಯರೊಬ್ಬರು ಉಪೋದ್ಘಾತ ಬರೆಯಲೊಪ್ಪಿ ಕಡೆಗೆ ಹನ್ನೊಂದನೇ ಗಂಟೆಯಲ್ಲಿ ಬಾಲ ಮಡಚಿದ ಅನುಭವವಿದೆ. ಹೀಗೆ ಹಿರಿಯರು ಮುಮ್ಮಾತು ಬರೆಯಲು ಒಪ್ಪದಿದ್ದರೆ, ಕಿರಿಯರದ್ದಕ್ಕೆ ಬೆಲೆ ಇಲ್ಲವಾದರೆ ಮತ್ತೇನು ಮಾಡಬೇಕು? ಮುಂಡಾಸು ಇದ್ದರೆ ಮಾತ್ರ ತಲೆ; ಇಲ್ಲವಾದರೆ ಅಲ್ಲವೆಂದು ನಿಮ್ಮ ಅಭಿಪ್ರಾಯವೋ?

ಇದಲ್ಲದೆ ಈಗಿನ ನಮ್ಮ ಕೆಲವು ಅಜ್ಜಂದಿರು ಟಿಟ್ಟಿಭವಂತೆ ಆಕಾಶಧಾರಿಗಳೆಂಬ ಭ್ರಾಂತಿಯುಳ್ಳವರು. ಉಳಿದವರು ಮಾಡುವುದನ್ನು ಕಣ್ಣೆತ್ತಿ ಕಾಣುವಷ್ಟು ತಾಳ್ಮೆ ಕೂಡ ಅವರಲ್ಲಿರುವುದು ಕಡಿಮೆ. 'ಕಿರಿಯರು ದುಡುಕಿ ಸಾಹಿತ್ಯವನ್ನು ಕೆಡಿಸುತ್ತಾರೆ'ಂದೇ ಕೆಲವು ಹಳಬರ ಮನೋಧರ್ಮವಾಗಿ ಬಿಟ್ಟದೆ! ಅವರಲ್ಲಿ ಆವಿಷ್ಟವಾದ ಸ್ವಾರ್ಥಭೂತವೇ ಅವರನ್ನು ಹೀಗೆ ನುಡಿಸದಿದ್ದರೆ ಮತ್ತೇನಾಗಿರಬಹುದು? ಅಂತೂ ನಿಮ್ಮ ಸಾಹಸವು ಅಭಿವಂದನೀಯವಾಗಿದೆ.

(*Duplicate*)

ಪುನಃ ತಿರುಗಿಸಿದೆ. ಇನ್ನೊಂದು 'ಪೇಪರ್ ಕಟ್ಟಿಂಗ್' ಸಿಕ್ಕಿತು.

೧೦

**ನಮ್ಮ ದಸರಾ ಸಂಚಿಕೆಯ ಕುರಿತು ಕೆಲವು ಅಮೂಲ್ಯ ಅಭಿಪ್ರಾಯಗಳು—**

೧ ಪ್ರೊಫೆಸರ್ ಯು. ರಾಘವೇಂದ್ರ ರಾವ್, B. A. Ph. D. ಬೆನಾರಿಸ್, ಇವರಿಂದ—

"....ಬಾಹ್ಯಾಂಗವು ಉತ್ತಮವಾಗಿದೆ; ಅಂತರಂಗದಲ್ಲಿಯೂ.......... ಲೇಖನಗಳು ಚೆಲುವಾಗಿವೆ........'ಜೇನನರಸಲು ತೆರಳಿದಲ್ಲಿ' ಎಂಬ ಕಥೆಯು ಉತ್ತಮವಾಗಿದೆ.....ನಿಮ್ಮ ಸಾಹಸವು ಅಭಿವಂದನೀಯವಾಗಿದೆ.

* * * * * * *

'ಫೈಲ'ನ್ನು ಮುಚ್ಚಿದೆ.

ರಾಘವೇಂದ್ರರಾಯರು "ಹೇಗಿದೆ ಶೆಟ್ಟರೇ," ಎಂದು ಕೇಳಿದರು.

ನಾನು ಉತ್ತರಕ್ಕಾಗಿ ಹುಡುಕುತ್ತಿರುವಾಗ ಪುಣ್ಯಕ್ಕೆ ಅವರ ಹೆಂಡತಿ ಪುಣ್ಯ ಸ್ತ್ರೀ ಚಾ ತಕ್ಕೊಂಡು ಬಂದರು. ವಾದವು 'ಚಾ'ದಲ್ಲಿ ಮುಳುಗಿ ಹೋಯಿತು.

! ! !

---

## ನಮ್ಮ ಗ್ರಂಥಮಾಲೆಯ ರಕ್ಷಕರು *

೧ ಶ್ರೀಯುತ ಪಿ. ಲಕ್ಷ್ಮೀನಾರಾಯಣ ನಾಯಕರು, ಕಟಪಾಡಿ.

೨ ಶ್ರೀಯುತ ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.

೩ ಮೆಸ್ಸರ್ಸ್ ಮಲ್ಪೆ ವಾಮನ ಭಟ್ & ಬ್ರದರ್, ಉಡುಪಿ.

---

## ಆಶ್ರಯದಾತರು §

೧ ಶ್ರೀ ಅಂಬಾಡಿಬೀಡು ಗೋಪಾಲ ಶೆಟ್ಟರು, ಕಟಪಾಡಿ.

೨ ,, ತೋನ್ಸೆ ಜನಾರ್ದನಯ್ಯನವರು, ಉಡುಪಿ.

೩ ,, ಪಿ. ರಾಮದಾಸ ನಾಯಕರು, ಬಿ. ಎ. ಎಲ್. ಟಿ. ಕಟಪಾಡಿ.

೪ ಮಿ. ಯಫ್. ಯಕ್ಸ್. ದಾಲ್ಮೇದರು, ಉದ್ಯಾವರ.

೫ ಶ್ರೀ 'ಕಾಮತ್' ಅವರು, ಕಟಪಾಡಿ.

೬ ,, ಪಾಂಗಾಳ ಜನಾರ್ದನ ನಾಯಕರು, ಕಟಪಾಡಿ.

೭ ,, ಕೆದಿಂಜೆ ವೆಂಕ್ಟಯ್ಯ ಹೆಗ್ಡೆರು, ಜಮೀನ್ದಾರ್, ಯೇಣಗುಡ್ಡೆ.

೮ ,, ಬಿ. ಕೃಷ್ಣಯ್ಯ ಹೆಗ್ಡೇರು, ಜಮೀನ್ದಾರ್, ಹಿರಿಯಡ್ಕ.

೯ ,, ಕೆ. ಸೀತಾರಾಮ ದೊರೆಬಲ್ಲಾಳರು, ಕಟಪಾಡಿ ಬೀಡು.

೧೦ ,, ಎ. ಬಿ. ಶೆಟ್ಟರು, ಎಂ.ಎಲ್.ಸಿ. ಅತ್ತಾವರ, ಮಂಗಳೂರು.

೧೧ ,, ಕೆ. ವಾಸುದೇವ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.

೧೨ ಮೆಸ್ಸರ್ಸ್ ಪಿ. ಎ. ಪೈ ಬ್ರದರ್ಸರವರು, ಉಡುಪಿ.

೧೩ ಶ್ರೀ ಯು. ಸದಿಯನವರು, ಜಮೀನ್ದಾರ್, ಉದ್ಯಾವರ.

೧೪ ,, ಬಿ. ವಾಸುದೇವ ರಾಯರು, ಎಡ್ವೊಕೇಟ್, ಉಡುಪಿ.

೧೫ ,, ಪಿ. ಆನಂದ ನಾಯ್ಕರು, ಮರ್ಚಂಟ್ ಕಟಪಾಡಿ.

೧೬ ,, ಬಿ. ರಾಮಣ್ಣ ಶೆಟ್ರು, ಹೇ. ಮಾ. ಹಾ. ಎ. ಶಾಲೆ, ಬಾರ್ಕೂರು.

೧೭ ,, ಕೆ. ಮುದ್ದಣ್ಣ ಶೆಟ್ಟರು, ಹೆಡ್‌ಮಾಸ್ಟರ್, ಕೊರಂಗ್ರಪಾಡಿ.

೧೮ ,, ಎಂ. ವಾಮನ ರಾಯರು, ಎಪೊಲೊ ಸ್ಟ್ರೀಟ್, ಬೊಂಬಾಯಿ.

೧೯ ,, ಪಿ. ರಾಮಚಂದ್ರ ರಾಯರು, M.B. & B.S., Ph.D. ವಿಶಾಖಪಟ್ಣ.

೨೦ ,, ಎಲ್ಲೂರು ಗುತ್ತು ಅಚ್ಚಣ್ಣ ಶೆಟ್ಟರು, ವೈನಾಡ್.

೨೧ ಶ್ರೀ ಎ. ಬಿ. ಕೃಷ್ಣರಾಜರು, ಉಡುಪಿ.
೨೨ ,, ಪಾದೂರು ಕೃಷ್ಣಯ್ಯ ಶೆಟ್ಟರು, ಪರೇಲ್, ಬೊಂಬಾಯಿ.
೨೩ ,, ಯು. ವೆಂಕಟರಾಯ ಕಾಮತರು, ಉಡುಪಿ.

---

## ಪೋಷಕರು †

೧ ಶ್ರೀ ಕೆ. ರಾಮ ಕಾಮತರು, ಮರ್ಚಂಟ್, ಕಟಪಾಡಿ.
೨ ,, ನಂದ್ಯಪ್ಪ ಹೆಗ್ಡೇರು, ಯೇಣಗುಡ್ಡೆ.
೩ ,, ಕೆ. ಕೃಷ್ಣಯ್ಯ ಶೆಟ್ಟರು, ಪಡುಮನೆ, ಕೆಮ್ಮೂರು.
೪ ,, ಕೆ. ನಾರಾಯಣ ಶೆಟ್ಟರು, ಜಮೀನ್ದಾರ್, ಕೊರಂಗ್ರಪಾಡಿ.
೫ ,, ಯು. ಪರಮೇಶ್ವರ ಮೇಸ್ತರು, ಫಿಜಿಸಿಯನ್ ಉದ್ಯಾವರ.
೬ ,, ಪುತ್ತಿಗೆ ಸುಬ್ಬಣ್ಣಾಚಾರ್ಯರು, ಉದಿಯಾವರ ಕುದುರು.
೭ ,, ಬೆಳ್ಕಳೆ ಕೆರೆಮನೆ ವೆಂಕಪ್ಪ ಶೆಟ್ಟರು, ಉಡುಪಿ.
೮ ,, ಕುತ್ಪಾಡಿ ತಿಮ್ಮಪ್ಪ ಶೆಟ್ಟರು, ಉಡುಪಿ.
೯ ,, ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟರು, ಉಡುಪಿ.
೧೦ ,, ಕೊರಂಗ್ರಪಾಡಿ ತೇಜಪ್ಪ ಶೆಟ್ಟರು, ಉಡುಪಿ.
೧೧ ,, ಕವಿರಾಜ ಮಹಾಬಲ ಶೆಟ್ಟರು, ಮಂಗಳೂರು
೧೨ ಶ್ರೀಮತಿ ಮಂದಾಕಿನಿ ಬಾಯಿಯವರು, ವಿದುಷಿ, ಮದ್ರಾಸು.
೧೩ ಶ್ರೀ ಎಂ. ಪದ್ಮನಾಭ ರಾಯರು, ಜಮೀನ್ದಾರ್, ಮಟ್ಟು.
೧೪ ,, ಯು. ರಾಮಚಂದ್ರ ಮಯ್ಯರು, ಅಧ್ಯಾಪಕ, ಉದ್ಯಾವರ.
೧೫ ,, ಎಂ. ವಿಟ್ಠಲ ಶೆಟ್ಟರು, ಅಧ್ಯಾಪಕ, ಮಲ್ಲಾರು.
೧೬ ,, ಕೆ. ವಿ. ಕೃಷ್ಣಯ್ಯನವರು, ಹೆಡ್‌ಮಾಸ್ಟರ್, ಮಲ್ಲಾರು.
೧೭ ,, ಕೆ. ಶೇಸು ಶೆಟ್ಟರು, ಅಧ್ಯಾಪಕ, ಕಾಪು
೧೮ ,, ಎಂ. ಅನಂತ ಕೃಷ್ಣರಾಯರು, ಹೆಡ್‌ಮಾಸ್ಟರ್, ಮಟ್ಟು.
೧೯ ,, ಪಿ. ಮುದ್ದಣ್ಣ ಶೆಟ್ಟರು, ಬಿ. ಯಂ. ಸ್ಕೂಲ್, ಪಾದೂರು.
೨೦ ,, ಯು ದಾದು, ಹೆಡ್‌ಮಾಸ್ಟರ್ ಕೈಪುಂಜಾಲ್.
೨೧ ,, ಕೆ. ಮುದ್ದಣ್ಣ ಶೆಟ್ಟರು, ಕೆನರಾ ನರ್ಸರಿ, ಕಾಪು
೨೨ ,, ಕೆ. ಪದ್ಮನಾಭ ಶ್ಯಾನುಭಾಗರು, ಹೆ. ಮಾ. ಕರಂದಾಡಿ

೨೩ ಶ್ರೀ ಕೆ. ಅಂತಯ್ಯ ಹೆಗ್ಡೇರು, ಜಮೀನ್ದಾರ್, ಕೊರಾಡಿ.
೨೪ ,, ಮಟ್ಪಾಡಿ ಶೀನಪ್ಪ ಶೆಟ್ಟರು, ಟೀಚರ್, ಬಾರ್ಕೂರು.
೨೫ ,, ಬೈಕಾಡಿ ರಾಮಣ್ಣ ಶೆಟ್ಟರು, ಅಧ್ಯಾಪಕ, ಬಾರ್ಕೂರು.
೨೬ ,, ಪೆರಂಪಳ್ಳಿ ಶೀನಪ್ಪ ಶೆಟ್ಟರು, ಟೀಚರ್. ಉಡುಪಿ.
೨೭ ,, ಹೆರ್ಗ ವಿಟ್ಠಲ ಶೆಟ್ಟರು, ಅಧ್ಯಾಪಕ, ಸ್ಯಾಬರಕಟ್ಟೆ.
೨೮ ,, ವೈ. ಶ್ಯಾಮರಾಯ ಹೆಗ್ಡೇರು, ಜಮೀನ್ದಾರ್, ಯೇಣಗುಡ್ಡೆ.
೨೯ ,, ಎಂ. ನಾರಾಯಣ ಶೆಟ್ಟರು, ಟೀಚರ್, ಮರ್ಣೆ.
೩೦ ಮೆಸ್ಸರ್ಸ್ 'ಹೆಗ್ಡೆ ಬ್ರದರ್ಸ'ರು, ಎರ್ಮಾಳ್
೩೧ ಶ್ರೀ ವೈ. ಅಂಗರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೨ ,, ವೈ. ತಬ್ರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೩ ,, ಪಿ. ರಾಮರಾಯರು, ಉಪಾಧ್ಯಾಯ, ಎರ್ಮಾಳ್.
೩೪ ,, ಮೆಸ್ಸರ್ಸ್ 'ಪ್ರಭು ಬ್ರದರ್ಸ'ರು, ಪಡುಬಿದ್ರಿ.
೩೫ ,, ಯು. ನಾಗಪ್ಪ, ಫಿಶ್ಶರೀಸ್ ಇನ್ಸ್‌ಪೆಕ್ಟರ್, ಮಂಗಳೂರು.
೩೬ ,, ಎಚ್. ಮುತ್ತಯ, ಸಬ್ ಕಲೆಕ್ಟರ್ಸ್ ಆಫೀಸ್, ಕುಂದಾಪುರ.
೩೭ ,, ಬಿ. ವಿಟ್ಠಲ ಶೆಟ್ಟರು, ಅಧ್ಯಾಪಕ, ಪಡುಬಿದ್ರಿ.
೩೮ ,, ಅಂಬಾಡಿ ಬೀಡು ಸೂರ್ಯಣ್ಣ ಶೆಟ್ಟರು, ಬೊಂಬಾಯಿ.
೩೯ ,, ಎಂ. ಎಸ್. ಅಧಿಕಾರಿಗಳು, ಪ್ಲೀಡರ್, ಕಾರ್ಕಳ.
೪೦ ,, ಪಂಡಿತ್ ಕೆ. ನಾರಾಯಣ ರಾಯರು, ಕಾರ್ಕಳ.
೪೧ ,, ಪಿ. ವಿ. ಉಪಾಧ್ಯಾಯರು, ವಕೀಲ್, ಕಾರ್ಕಳ.
೪೨ ,, ಕೆ. ಎಂ. ಹೆಗ್ಡೇರು, ವಕೀಲ್, ಕಾರ್ಕಳ.
೪೩ ,, ಕಟಪಾಡಿ ರಂಗಪ್ಪ ಕಿಣಿಯರು, ಬೊಂಬಾಯಿ.
೪೪ ಡಾಕ್ಟರ್ ಯು. ಎಸ್. ರಾವ್, ಬೊಂಬಾಯಿ.
೪೫ ಶ್ರೀ ಕೆ. ವಿ. ಹೆಬ್ಬಾರ್, ಕಟ್ಟಿಂಗೆರೆ.
೪೬ ,, ವಿ. ವಿ. ಕಾಣೇಮಾರ್, ವೆಲ್‌ಕಂ ಹೋಟೆಲ್, ಬೊಂಬಾಯಿ.
೪೭ ,, ಟಿ. ಮುತ್ತಪ್ಪ, ಹೆ. ಮಾ. ಫಿಶ್ಶರೀಸ್ ಸ್ಕೂಲ್, ಮಲ್ಪೆ.
೪೮ ,, ಎಚ್. ವೀರಯ್ಯ ನಾಯ್ಕರು, ಅಧ್ಯಾಪಕ, ಕಾಪು.
೪೯ ,, ವಿ. ತುಕ್ರ ಶೆಟ್ಟರು, ಅಧ್ಯಾಪಕ, ಕನ್ಯಾನ, ಪುತ್ತೂರು.

೫೦ ಶ್ರೀ ಪಿ. ಮಹಾಲಿಂಗ ಶೆಟ್ಟರು, ಅಧ್ಯಾಪಕ, ಕಾಪು.
೫೧ ,, ಬಿ. ವೆಂಕಪ್ಪ ರೈಗಳು ಜಮೀನ್ದಾರ್, ಉಪ್ಪಿನಂಗಡಿ.
೫೨ ,, ಕುತ್ಯಾರು ರಾಮಣ್ಣ ಶೆಟ್ಟರು, ಕೇಂಜ ಕೆರೆಮನೆ, ಬೊಂಬಾಯಿ.
೫೩ ,, ಮಾಣಿಬೆಟ್ಟು ಕೃಷ್ಣಯ್ಯ ಹೆಗ್ಡೇರು, ಶಿರ್ವ.
೫೪ ,, ದೇಜಪ್ಪ ಸಿ. ಅಮೀನ್, ಕೈಪುಂಜಾಲ್.
೫೫ ,, ಕೆ. ನಾಗಪ್ಪಯ್ಯ, ಡಿ| ಇ| ಆಫೀಸು, ಉಡುಪಿ.
೫೬ ,, ಎಂ ಶ್ರೀನಿವಾಸರಾವ್, ಡಿ| ಇ| ಆಫೀಸು, ಪುತ್ತೂರು.
೫೭ ,, ಕೆ. ಉಗ್ಗಪ್ಪ ಶೆಟ್ಟರು, ಕುರಿಯಾಲ, ಬಂಟವಾಳ.
೫೮ ,, ಮುತ್ತಣ್ಣ ಬುಡಲೆ, ಶೆಡ್ಯ, ಗುರುಪುರ.
೫೯ ,, ಬಿ. ಹೂವಯ್ಯ, ಹಾಲಿಕೋಡು, ಬಾರ್ಕೂರು.
೬೦ ,, ಎಚ್. ಸಂಜೀವ ಶೆಟ್ಟರು, B. A. L T. ಪುತ್ತೂರು.
೬೧ ,, ಅಡ್ವೆ ಕುಂಜರೈಮನೆ ರುಕ್ಕ ಶೆಟ್ಟರು, ಬೊಂಬಾಯಿ.
೬೨ ,, ಬೆಳಮಣ್ಣು ಸೂರಪ್ಪ ಶೆಟ್ಟರು, ಪರೇಲರೋಡು, ಬೊಂಬಾಯಿ.
೬೩ ,, ಯು. ವಿ ಆರಾಧ್ಯರು, ಜಮೀನ್ದಾರ್, ಉದ್ಯಾವರ
೬೪ ,, ಕೊರಂಗ್ರಪಾಡಿ ದೇವಯ್ಯ ಹೆಗ್ಡೇರು, ಬೊಂಬಾಯಿ
೬೫ ,, ಎಂ. ಬೊಮ್ಮಯ್ಯ ಶೆಟ್ಟರು, ಬಿ. ಎ. ಸ್ಕೂಲ್, ಉಚ್ಚಿಲ
೬೭ ,, ಮಹಾಬಲ ಶೆಟ್ಟರು, ಟೀಚರ್ ಮೆನೇಜರ್, ಎಡ್ಮೇರು.

* ರೂ. 25 ಕೊಡುವವರು. § ರೂ. 10 ಕೊಡುವವರು

† ರೂ. 5 ಕೊಡುವವರು.